# ಸಮಗ್ರ ದಾಸ ಸಾಹಿತ್ಯ

ಸಂಪುಟ : ೨೭



## ವಿಜಯ ರಾಮಚಂದ್ರವಿಠಲ ಮತ್ತು ಇತರ ಹರಿದಾಸರ ಕೀರ್ತನೆಗಳು

ಸಮಗ್ರ ದಾಸ ಸಾಹಿತ್ಯ
ಸಂಪುಟ : ೨೭

# ವಿಜಯ ರಾಮಚಂದ್ರವಿಠಲ ಮತ್ತು ಇತರ ಹರಿದಾಸರ ಕೀರ್ತನೆಗಳು

*ಸಂಪಾದಕರು*
ಡಾ. ಅನಂತಪದ್ಮನಾಭರಾವ್

ಕರ್ನಾಟಕ ಸರ್ಕಾರ
ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ
ಬೆಂಗಳೂರು

**SAMAGRA DASA SAHITYA SAMPUTA - 27 :**
*Vijaya Ramachandra Vittala Mattu Ithara Haridasara Keerthanegalu.* Edited by *Dr. Ananthapadmanabharao* and published by *Y.K.Muddukrishna*, Director, Directorate of Kannada and Culture, Kannada Bhavana, J.C. Road, Bangalore - 560 002.

ಪುಟಗಳು : 82+೪೮೪


ಪ್ರಥಮ ಮುದ್ರಣ : ೨೦೦೩
ಪ್ರತಿ : ೧೨೫೦

ಬಿಡಿ ಪ್ರತಿ ಬೆಲೆ : ರೂ. ೬೦=೦೦
ಸಮಗ್ರ ಸಂಪುಟಗಳ ಬೆಲೆ : ರೂ. ೨೪೦೦=೦೦

**ಮುದ್ರಣ ನಿರ್ವಹಣೆ :**

ಮೈಸೂರು ಸೇಲ್ಸ್ ಇಂಟರ್‌ನ್ಯಾಷನಲ್ ಲಿಮಿಟೆಡ್
೩೬, ಕನ್ನಿಂಗ್‌ಹ್ಯಾಮ್ ರಸ್ತೆ
ಬೆಂಗಳೂರು – ೫೬೦ ೦೫೨.

**ಮುದ್ರಕರು :**

ಮೆ. ಡಾಟ್ಸ್
೧೨೪, ಸುಲ್ತಾನ್‌ಪೇಟೆ
ಬೆಂಗಳೂರು – ೫೬೦ ೦೫೩..

# ಸಮಗ್ರ ದಾಸಸಾಹಿತ್ಯ ಪ್ರಕಟಣ ಯೋಜನೆ

# ಮುನ್ನುಡಿ

ಹರಿದಾಸ ಸಾಹಿತ್ಯ ಕನ್ನಡ ಸಂಸ್ಕೃತಿ ಪರಂಪರೆಯ ಮಹತ್ವಪೂರ್ಣ ಭಾಗವಾಗಿದೆ. ದೇಶೀಯತೆ ಹಾಗೂ ಗೇಯತೆಗಳೆರಡನ್ನೂ ಮೇಳವಿಸಿಕೊಂಡು, ಕನ್ನಡ ಸಾಹಿತ್ಯವಾಹಿನಿಗೆ ಇದು ಹೊಸತನವನ್ನು ನೀಡಿದೆ. ಮನುಜಮತ, ಸಾಹಿತ್ಯಪಥ ಹಾಗೂ ಭಕ್ತಿಸಿದ್ಧಾಂತದ ತ್ರಿವೇಣಿಯಾಗಿರುವ ಈ ಪ್ರಜಾಸಾಹಿತ್ಯವನ್ನು ಪ್ರಜೆಗಳಿಗೆ ಮುಟ್ಟಿಸುವುದು ಪ್ರಜಾಸತ್ತಾತ್ಮಕ ಸರಕಾರದ ಆದ್ಯ ಕರ್ತವ್ಯವಾಗಿದೆ.

ಕನ್ನಡ ಭಾಷಿಕಶಕ್ತಿಯ ವಿವಿಧ ಆಯಾಮಗಳನ್ನು ಸೆಳೆದು ತೋರಿರುವ ಸಾಹಿತ್ಯ–ಸಂಗೀತಗಳ ಸಾಮರಸ್ಯವನ್ನು ಮೆರೆದಿರುವ ಈ ಸಾಹಿತ್ಯ ಕನ್ನಡ ಸಾಹಿತ್ಯಕ್ಕೆ ಜಾಗತಿಕ ಮಹತ್ವವನ್ನು ತಂದುಕೊಟ್ಟಿದೆ ಎಂದರೆ ಅತಿಶಯೋಕ್ತಿಯಾಗಲಾರದು. ಮಾನವಾನುಕಂಪ, ಸಮಾಜಸುಧಾರಣೆ, ಲೋಕದ ಡೊಂಕುಗಳನ್ನು ನಗೆ ವಿಡಂಬನೆಗಳ ಮೂಲಕ ತಿದ್ದುವ ಕೌಶಲ ದಾಸಸಾಹಿತ್ಯದ ಪ್ರಮುಖ ಲಕ್ಷಣವಾಗಿದೆ.

ಆಧ್ಯಾತ್ಮಿಕ ಸಾಧನೆ, ಅನುಭವ – ಅನುಭಾವಗಳು ದಾಸಸಾಹಿತ್ಯದ ಪ್ರಮುಖ ಅಂಶವಾದರೂ, ಸುತ್ತಮುತ್ತಲಿರುವ ಜೀವನದ ಕಡೆಗೆ, ಮಾನವ ಸ್ವಭಾವದ ಕಡೆಗೆ ಕಣ್ಣು ಹರಿಸಿದ ಹರಿದಾಸರು ಸಾತ್ತ್ವಿಕ ಜೀವನ ನಿರ್ವಹಣೆಗೆ, ಮಾನವನ ಮೇಲ್ಮೆಗೆ, ನೈತಿಕ ಆಚರಣೆಗೆ ಒತ್ತು ನೀಡಿದವರು.

ಹರಿದಾಸ ಸಾಹಿತ್ಯ ಅಪಾರವಾದುದು ಹಾಗೂ ವೈವಿಧ್ಯವಾದುದು. ಈ ವಿಪುಲ ಸಾಹಿತ್ಯರಾಶಿಯನ್ನು ಒಂದೆಡೆ ಕ್ರೋಡೀಕರಿಸಿ, ಕರ್ನಾಟಕ ಸರ್ಕಾರವು ಸಮಗ್ರ ದಾಸಸಾಹಿತ್ಯವನ್ನು ಕನ್ನಡ ಜನತೆಗೆ ನೀಡುತ್ತಿದೆ.

ಈ ಯೋಜನೆಗೆ ದುಡಿದ ಸಂಪಾದಕ ಮಂಡಳಿಯ ಶ್ರದ್ಧೆ ಹಾಗೂ ಮಾರ್ಗದರ್ಶನವನ್ನು, ವಿವಿಧ ಸಂಪುಟಗಳ ಸಂಪಾದಕರಾಗಿ ನಾಡಿನ ಅನೇಕ ವಿದ್ವಾಂಸರು ತೋರಿರುವ ಆಸಕ್ತಿ ಹಾಗೂ ನೆರವನ್ನು ಮತ್ತು ಈ ಸಂಪುಟದ ಸಂಪಾದಕರ ಶ್ರಮವನ್ನು ಸ್ಮರಿಸುತ್ತ ಕನ್ನಡ ಜನತೆಯ ಕೈಗೆ ಈ ಮೌಲಿಕ ಪ್ರಕಟಣೆಗಳನ್ನು ಸಂತೋಷದಿಂದ ಅರ್ಪಿಸುತ್ತೇನೆ.

**ಎಸ್. ಎಂ. ಕೃಷ್ಣ**
ಮುಖ್ಯಮಂತ್ರಿಗಳು
ಕರ್ನಾಟಕ ಸರ್ಕಾರ

# ಎರಡು ಮಾತು

ಕನ್ನಡ ಸಾಹಿತ್ಯದ ತವನಿಧಿಗಳಲ್ಲಿ ದಾಸಸಾಹಿತ್ಯವೂ ಒಂದು. ಕರ್ನಾಟಕದ ಸಾಹಿತ್ಯ, ಸಂಗೀತ, ಸಂಸ್ಕೃತಿಗಳನ್ನು ಪ್ರಭಾವಪೂರ್ಣವಾಗಿ ಸಮೃದ್ಧಿಗೊಳಿಸಿದವರು ಹರಿದಾಸರು. ಬದುಕಿನಲ್ಲಿ ನಿಷ್ಠೆ, ಸಾಹಿತ್ಯದಲ್ಲಿ ಬದುಕಿನ ತತ್ತ್ವಗಳನ್ನು ಅಡಗಿಸಿ ಜನಸಾಮಾನ್ಯರನ್ನು ಉನ್ನತ ಜೀವನದತ್ತ ಉದ್ದೀಪಿಸುವ ಮಹಾಕಾಯಕದಲ್ಲಿ ತೊಡಗಿದವರು ಹರಿದಾಸರು. ಕನ್ನಡ ಸಾಹಿತ್ಯಕ್ಕೆ ಅಪೂರ್ವ ಕೊಡುಗೆಯಾಗಿರುವ ಹರಿದಾಸ ಸಾಹಿತ್ಯ ಸಮಾಜದ ಮೌಢ್ಯವನ್ನು ಬಯಲಿಗೆಳೆದು, ಜಾತಿ, ಮತ, ಪಂಥಗಳನ್ನು ಮೀರಿ ನಿಂತ ಮಾನವೀಯ ಮೌಲ್ಯಗಳನ್ನು ಸಾಹಿತ್ಯದ ಮೂಲಕ ಅಭಿವ್ಯಕ್ತಿಸಿತು.

ಹರಿದಾಸ ಸಾಹಿತ್ಯಕ್ಕೆ ಪ್ರೇರಣೆ ಭಕ್ತಿಯಾದರೂ, ಕರ್ನಾಟಕ ಸಂಗೀತಕ್ಕೆ ಸಮೃದ್ಧಿಯನ್ನು ನೀಡಿದವರು ಹರಿದಾಸರು. ಗ್ರಾಮ್ಯ ಮತ್ತು ದೇಶ್ಯ ಶಬ್ದಗಳಿಗೆ ಸಾಹಿತ್ಯದ ಮುದ್ರೆಯನ್ನು ಒತ್ತಿ, ಭಾಷೆಗೊಂದು ಪರಿಪಕ್ವತೆಯನ್ನೂ ತಂದುಕೊಟ್ಟರು. ಇಂಥ ಸಾಹಿತ್ಯ ಸಂಪತ್ತನ್ನು ರಕ್ಷಿಸುವುದು ಮತ್ತು ಪ್ರಸಾರ ಮಾಡುವುದು ನಮ್ಮ ಕರ್ತವ್ಯ. ಈ ದೃಷ್ಟಿಯಿಂದ ಕರ್ನಾಟಕ ಸರ್ಕಾರವು ಸಮಗ್ರ ದಾಸಸಾಹಿತ್ಯ ಪ್ರಕಟಣ ಯೋಜನೆಗೆ ಸಮಿತಿಯೊಂದನ್ನು ರಚಿಸಿದ್ದು, ಇದರಲ್ಲಿ ನಾಡಿನ ಅನೇಕ ವಿದ್ವಾಂಸರು ಸಂಪುಟ ಸಂಪಾದಕರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಈ ಸಂಪುಟಗಳು ಹೊರಬರಲು ಕಾರಣರಾದ

ಸಂಪಾದಕ ಮಂಡಳಿಯ ಸದಸ್ಯರಿಗೆ ಹಾಗೂ ಈ ಸಂಪುಟದ ಸಂಪಾದಕರಿಗೆ ನನ್ನ ಕೃತಜ್ಞತೆಗಳು.

ದಾಸರು ತಮ್ಮ ಸಾಹಿತ್ಯದಲ್ಲಿ ಸಾರ್ವಕಾಲಿಕ ಮೌಲ್ಯಗಳನ್ನು ಉಳಿಸಿ ಹೋಗಿದ್ದಾರೆ. ನಮ್ಮ ಸಾಮಾಜಿಕ ಜೀವನವನ್ನು ರೂಪಿಸುವಲ್ಲಿ ಈ ಕೀರ್ತನೆಗಳು ಮೌಲಿಕವಾದುವು. ಕನ್ನಡ ಜನತೆ ಈ ಕೃತಿಯ ಪ್ರಯೋಜನವನ್ನು ಪಡೆದರೆ ಪಟ್ಟ ಶ್ರಮ ಸಾರ್ಥಕವಾಗುತ್ತದೆ.

**ರಾಣಿ ಸತೀಶ್**

ಕನ್ನಡ ಮತ್ತು ಸಂಸ್ಕೃತಿ ಸಚಿವರು

# ಯೋಜನೆಯನ್ನು ಕುರಿತು

ಕನ್ನಡ ಸಾಹಿತ್ಯ ಚರಿತ್ರೆಯ ಸಿರಿವಂತಿಕೆಯಲ್ಲಿ ಕೀರ್ತನ ಸಾಹಿತ್ಯದ ಕೊಡುಗೆ ವಿಪುಲವಾದುದು ; ವೈಶಿಷ್ಟ್ಯಪೂರ್ಣವಾದುದು. ಈ ಸಮಗ್ರ ಸಾಹಿತ್ಯದ ಸಂಗ್ರಹ ಮತ್ತು ಪ್ರಕಾಶನದ ಕಾರ್ಯ ಪೂರ್ಣವಾಗಿ ಆಗಿರಲಿಲ್ಲ. ಇದನ್ನು ಮನಗಂಡ ಸರ್ಕಾರ ಸಮಗ್ರ ದಾಸ ಸಾಹಿತ್ಯ ಪ್ರಕಟಣೆಯ ಕಾರ್ಯವನ್ನು ಕೈಗೆತ್ತಿಕೊಂಡಿತು.

ಸುಮಾರು ಒಂದು ನೂರ ಮೂವತ್ತೊಂಬತ್ತು ಜನ ದಾಸರ ಸುಮಾರು ಹದಿನಾರು ಸಾವಿರ ಕೀರ್ತನೆಗಳ ಬೃಹತ್ ಸಾಹಿತ್ಯ ಸಾಮಗ್ರಿ ದೊರಕಿತು. ಹೀಗೆ ಸಾಂಪ್ರದಾಯಿಕ ರೀತಿಯಲ್ಲಿ ಸಂಗ್ರಹಿಸಿ, ಸಂಪಾದಿಸಿದ ಕೀರ್ತನ ಸಾಹಿತ್ಯವನ್ನು ಸಂಪುಟಗಳಲ್ಲಿ ಮುದ್ರಿಸುವುದು ಕಷ್ಟವೇನಾಗಿರಲಿಲ್ಲ. ಆದರೆ, ಅದನ್ನು ಮಾಹಿತಿ ತಂತ್ರಜ್ಞಾನದ ಇವತ್ತಿನ ಸಂದರ್ಭದಲ್ಲಿ ಬಹು ಉಪಯೋಗಿ ನೆಲೆಯಲ್ಲಿ ಬಹುಮಾಧ್ಯಮದಲ್ಲಿ ಹೊರತರಬೇಕೆಂಬ ಕನಸು ರೋಮಾಂಚಕಾರಿ ಅನುಭವವೇ ಸರಿ. ಇದನ್ನು ಕೃತಿ ರೂಪಕ್ಕಿಳಿಸುವ ಹಾದಿಯಲ್ಲಿ ಎದುರಾದ ತಾಂತ್ರಿಕ ಸವಾಲು ಬಹು ಕ್ಲಿಷ್ಟಕರವಾಗಿಯೇ ಕಂಡಿತು.

ದಿಟ, ಈ ಸಮಗ್ರ ಸಾಹಿತ್ಯವನ್ನು ಕೇವಲ ಮುದ್ರಣದಲ್ಲಷ್ಟೇ ಅಲ್ಲ ಆಯ್ದ ಕೀರ್ತನೆಗಳನ್ನು ಗಾಯನಕ್ಕೆ ಅಳವಡಿಸಿ, ಸಿಡಿ ಮತ್ತು ಅಂತರ್ಜಾಲದಲ್ಲಿ ಹೊರತರ ಬೇಕೆಂದಾಗ ಬಳಕೆದಾರರ ಅವಶ್ಯಕತೆಯನ್ನು ಆಧರಿಸಿ ತಯಾರಿಸುವ ಅಗತ್ಯ ಇತ್ತು. ಆದರೆ ಇವುಗಳಲ್ಲಿ ಕನ್ನಡ ಮತ್ತು ಇಂಗ್ಲಿಷ್ ಎರಡೂ ಭಾಷೆಗಳಲ್ಲಿ ಸರ್ಚ್ ಎಂಜಿನ್ (ಹುಡುಕುವಿಕೆ) ಇಲ್ಲದಿರುವುದು ಒಂದು ತಾಂತ್ರಿಕ ಸಮಸ್ಯೆಯೇ ಆಯಿತು.

ಈ ರೀತಿಯ ಪ್ರಯತ್ನ ಕನ್ನಡ ಭಾಷೆಯಲ್ಲಿ ಹಿಂದೆಂದೂ ಆಗದಿದ್ದುದರಿಂದ ತಂತ್ರಾಂಶವನ್ನು ಹೊಸದಾಗಿಯೇ ಅಭಿವೃದ್ಧಿ ಪಡಿಸಬೇಕಾದ ಸವಾಲನ್ನು ಕೈಗೆತ್ತಿ ಕೊಳ್ಳಲಾಯಿತು. ಇದಕ್ಕಾಗಿ ಕನ್ನಡ ಗಣಕ ಪರಿಷತ್ತು, ರಾಷ್ಟ್ರೀಯ ಮಾಹಿತಿ ಕೇಂದ್ರ (ಎನ್‌ಐಸಿ), ಮಾಹಿತಿ ಮತ್ತು ತಂತ್ರಜ್ಞಾನ ಇಲಾಖೆ, ಮಹಾಭಾರತ ಸಂಶೋಧನಾ ಪ್ರತಿಷ್ಠಾನ ಮುಂತಾದ ಹಲವಾರು ತಂತ್ರಾಂಶ ಸಂಸ್ಥೆಗಳೊಂದಿಗೆ ನಿರಂತರ ಸಮಲೋಚನೆ, ಚಿಂತನೆಗಳನ್ನು ನಡೆಸಲಾಯಿತು.

ಹೀಗೆ ಸಾಹಿತ್ಯ ಸಂಗ್ರಹ, ಸಂಪಾದನೆ, ಸಂಗೀತ ಸಂಯೋಜನೆ, ಧ್ವನಿಮುದ್ರಣ, ಬಹುಮಾಧ್ಯಮಕ್ಕೆ ಅಳವಡಿಸುವ ತಾಂತ್ರಿಕ ಕುಶಲತೆಯು ನಿರಂತರ ಕಾರ್ಯಾನುಷ್ಠಾನಕ್ಕೆ ಸಂಪಾದಕ ಮಂಡಳಿ ಸದಸ್ಯರು, ಸಂಪುಟ ಸಂಪಾದಕರು, ಇಲಾಖಾ ಅಧಿಕಾರಿಗಳು, ತಂತ್ರಜ್ಞರು, ಕೋರ್ ಸಮಿತಿ ಸದಸ್ಯರು, ಸಂಗೀತ ನಿರ್ದೇಶಕರು, ಗಾಯಕರು – ಈ ಎಲ್ಲರ ಪರಿಶ್ರಮ ಅಗಾಧವಾಗಿ ದೊರಕಿದೆ. ಈ ಶ್ರಮದ ಫಲವಾಗಿ ಬಹುಮಾಧ್ಯಮದಲ್ಲಿ ಸಮಗ್ರ ದಾಸ ಸಾಹಿತ್ಯ ಯೋಜನೆಯ ಬೃಹತ್ ಕಾರ್ಯ ಸಾಕಾರಗೊಂಡಿದೆ.

ಈ ವಿಪುಲ ಸಾಹಿತ್ಯವನ್ನು ಕನ್ನಡ ಅಕ್ಷರಜ್ಞಾನಿಗಳು ಪುಸ್ತಕ ರೂಪದಲ್ಲಿಯೂ, ಬಹುಗಾತ್ರದ ಸಾಹಿತ್ಯವನ್ನು ಕೈ ಅಳತೆಯ ಸಿಡಿ ರೂಪದಲ್ಲಿಯೂ ಈಗ ಪಡೆಯಬಹುದಾಗಿದೆ. ಅಲ್ಲದೆ, ಅಂತರ್ಜಾಲದ ಮೂಲಕ ವಿಶ್ವದ ಯಾವುದೇ ಮೂಲೆಯಲ್ಲಿರುವ ಆಸಕ್ತ ಜನತೆ ಕುಳಿತಲ್ಲಿಯೇ ಆರಾಮವಾಗಿ ವೀಕ್ಷಿಸುವ, ಕೇಳುವ ಹಾಗೂ ಕನ್ನಡ ಅಕ್ಷರ ಜ್ಞಾನವಿರದ ಭಾಷಿಕರು ಸಹಿತ ಸಂಗೀತವನ್ನು ಕೇಳಿ ಆಸ್ವಾದಿಸುವ ಅವಕಾಶವನ್ನು ಏಕಕಾಲದಲ್ಲಿ ಕಲ್ಪಿಸಲಾಗಿದೆ. ಪ್ರಕಾಶನದ ಇತಿಹಾಸದಲ್ಲಿಯೇ ದಾಖಲನೀಯವಾದ ಈ ಕಾರ್ಯ ಮುಂದೆ ಸರ್ಕಾರಿ ಸಂಸ್ಥೆಗಳಿಗಾಗಲಿ ಖಾಸಗಿ ಸಂಸ್ಥೆಗಳಿಗಾಗಲಿ ಮಾದರಿಯಾಗಬಹುದೆಂದು ನಂಬಲಾಗಿದೆ.

ನಮ್ಮ ಸಂಸ್ಕೃತಿಯನ್ನು ಬಿತ್ತರಿಸಲು ನಾಲ್ಕು ಗೋಡೆಗಳೊಳಗಿನ ರಂಗ ಮಂದಿರಗಳು, ವೇದಿಕೆಗಳು ಅಗತ್ಯವಿದೆ ದಿಟ. ಆದರೆ ಭವಿತವ್ಯದಲ್ಲಿ ವಿಶ್ವದ ಜನರನ್ನು ತಲಪಲು ಮತ್ತು ಮುಖ್ಯವಾಗಿ ಯುವಜನಾಂಗಕ್ಕೆ ನಮ್ಮ ಸಾಂಸ್ಕೃತಿಕ ಕ್ಷಿತಿಜದ ವಿಸ್ತಾರವನ್ನು ಪರಿಚಯಿಸಲು ಸೂಕ್ಷ್ಮ ಸಂವೇದನಾಶೀಲವಾದ ಸಾಹಿತ್ಯವನ್ನು ಬಹುಮಾಧ್ಯಮದಲ್ಲಿ ಅಳವಡಿಸುವುದು ಅತ್ಯಾವಶ್ಯಕ. ಈ ನಿಟ್ಟಿನಲ್ಲಿ ಇದೊಂದು ವಿನೂತನ ಪ್ರಯೋಗ; ಈ ಪ್ರಯೋಗದ ಫಲ ಎಲ್ಲರಿಗೂ ಲಭ್ಯವಾಗಲೆಂಬುದು ನಮ್ಮ ಆಶಯ.

**ಸಿ. ಎಸ್. ಕೇದಾರ್**
ಸರ್ಕಾರದ ಕಾರ್ಯದರ್ಶಿ

# ಪ್ರಕಾಶಕರ ಮಾತು

ಕರ್ನಾಟಕದ ಧಾರ್ಮಿಕ, ಸಾಂಸ್ಕೃತಿಕ ಇತಿಹಾಸದಲ್ಲಿ ಹರಿದಾಸರ ಸ್ಥಾನ ವಿಶಿಷ್ಟವಾದದ್ದು. ಸಾವಿರಾರು ವರ್ಷಗಳಿಂದ ಭಾರತದಲ್ಲಿ ಅವಿರತವಾಗಿ ಹರಿದುಬಂದ ಜೀವನಮೌಲ್ಯಗಳನ್ನು ಜನಸಾಮಾನ್ಯರ ಆಡುಭಾಷೆಯಲ್ಲಿ ಮುಟ್ಟಿಸಿ, ಲೌಕಿಕ ವಿಡಂಬನೆಯ ಮೂಲಕ ಅವರ ಮಾನಸಿಕ ವಿಕಾಸವನ್ನು ಯಶಸ್ವಿಯಾಗಿ ಸಾಧಿಸಿದವರು ಹರಿದಾಸರು. ಪಾಂಡಿತ್ಯ, ಲೋಕಾನುಭವಗಳ ಹಿನ್ನೆಲೆಯಿಂದಾಗಿ, ಆಡುಭಾಷೆಯ ಸೊಗಡಿನಿಂದಾಗಿ ಇವರು ಹಾಡಿದ್ದೆಲ್ಲ ಸಾಹಿತ್ಯವಾಯಿತು, ಕಾವ್ಯವಾಯಿತು, ಕೇಳುಗರನ್ನು ಸೆರೆಹಿಡಿಯಿತು. ಗೇಯಗುಣವುಳ್ಳ, ನೃತ್ಯಕ್ಕೆ ಅಳವಡುವ, ಛಂದೋಬದ್ಧವಾದ, ಜನತೆಯ ಮಧ್ಯದಲ್ಲಿಯೇ ಸಂದರ್ಭಾನುಸಾರ ಹುಟ್ಟಿದ ಹರಿದಾಸ ಸಾಹಿತ್ಯ ವೈಶಿಷ್ಟ್ಯಪೂರ್ಣವೆನಿಸಿತು. ಕನ್ನಡ ವಾಙ್ಮಯದಲ್ಲಿ ದಾಸಸಾಹಿತ್ಯ ಒಂದು ವಿಶೇಷ ಸ್ಥಾನ ಪಡೆಯಿತು. ಹೀಗೆ ಸಾಹಿತ್ಯ, ಸಂಗೀತ ಮತ್ತು ಸಾಮಾಜಿಕ ಕ್ಷೇತ್ರಕ್ಕೆ ದಾಸಸಾಹಿತ್ಯದ ಕೊಡುಗೆ ಗಣನೀಯವಾದುದು.

ಸುಮಾರು ನೂರಮುವ್ವತ್ತೊಂಬತ್ತು ಜನ ದಾಸರು ಆಗಿಹೋಗಿದ್ದು, ಅವರ ಕೀರ್ತನೆಗಳ ಸಂಖ್ಯೆ ಸುಮಾರು ಹದಿನಾರು ಸಾವಿರಕ್ಕೂ ಅಧಿಕ. ಈವರೆಗೆ ಕೆಲವು ದಾಸರ ಕೀರ್ತನೆಗಳು ಬಿಡಿ ಬಿಡಿಯಾಗಿ ಪ್ರಕಟವಾಗಿವೆಯಾದರೂ, ಇನ್ನೂ ಅನೇಕ ದಾಸವರೇಣ್ಯರ ಕೀರ್ತನೆಗಳು ಹಸ್ತಪ್ರತಿ ರೂಪದಲ್ಲಿಯೇ ಉಳಿದುಕೊಂಡಿವೆ. ಅವುಗಳನ್ನು ಸಂಗ್ರಹಿಸಿ, ಸಂಪಾದಿಸಿ, ಪ್ರಕಟಿಸಿ, ಸಮಗ್ರ ದಾಸಸಾಹಿತ್ಯವು ಕನ್ನಡಿಗರಿಗೆ ಒಂದೆಡೆ ಲಭ್ಯವಾಗುವಂತೆ ಮಾಡುವ ಉದ್ದೇಶದಿಂದ ಕರ್ನಾಟಕ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯವು ಸಮಗ್ರ ದಾಸಸಾಹಿತ್ಯ ಪ್ರಕಟಣೆಯ ಬೃಹತ್ ಯೋಜನೆಯನ್ನು ಹಾಕಿಕೊಂಡಿದೆ. ಈ ಉದ್ದೇಶಕ್ಕಾಗಿ ಕಾರ್ಯನಿರ್ವಾಹಕ ಸಂಪಾದಕರಾದ ಡಾ. ಶ್ರೀನಿವಾಸ ಹಾವನೂರ, ಡಾ. ಟಿ. ಎನ್. ನಾಗರತ್ನ, ಪ್ರೊ. ವಸಂತ ಕುಷ್ಟಗಿ, ಸದಸ್ಯರಾದ ಡಾ. ಎಂ. ಎಂ. ಕಲಬುರ್ಗಿ, ಡಾ. ಬಸವರಾಜ ಸಬರದ, ಪ್ರೊ. ಸುಧಾಕರ, ಡಾ. ಕೃಷ್ಣ ಕೊಲ್ಹಾರಕುಲಕರ್ಣಿ, ಡಾ. ಮಂದಾಕಿನಿ (ಈಗ ದಿವಂಗತರು), ಹಾಗೂ ಪ್ರೊ. ಎಂ. ರಾಜಗೋಪಾಲಾಚಾರ್ಯ (ಈಗ ದಿವಂಗತರು) ಅವರನ್ನೊಳಗೊಂಡಂತೆ ಸಂಪಾದಕ ಸಮಿತಿಯನ್ನು ರಚಿಸಲಾಯಿತು. ಇಲಾಖಾ ನಿರ್ದೇಶಕರು ಸಮಿತಿಯ ಸದಸ್ಯ–ಕಾರ್ಯದರ್ಶಿಗಳಾಗಿರುತ್ತಾರೆ. ಇದರಲ್ಲಿ ನಾಡಿನ ಅನೇಕ ವಿದ್ವಾಂಸರ ನೆರವನ್ನು ಬಳಸಿಕೊಳ್ಳಲಾಗುತ್ತಿದೆ.

ಈ ಯೋಜನೆಯನ್ವಯ 'ಸಮಗ್ರ'ವಾಗಿ ದಾಸರ ಕೀರ್ತನೆಗಳನ್ನು ಸಂಗ್ರಹಿಸಿ ಪ್ರಕಟಿಸುವುದಿದ್ದರೂ, ಕೆಲವು ಹರಿದಾಸರ ರಚನೆಗಳು ಬಿಟ್ಟು ಹೋಗಿರುವ ಸಾಧ್ಯತೆ ಇರುತ್ತದೆ. ಅಂಥ ಹರಿದಾಸರ ಕೀರ್ತನೆಗಳು ದೊರೆತಲ್ಲಿ ಮುಂದೆ ಪರಿಷ್ಕರಣ ಸಂದರ್ಭದಲ್ಲಿ ಪ್ರಕಟಿಸಲು ಕ್ರಮಕೈಗೊಳ್ಳಲಾಗುವುದು.

ಸಮಗ್ರ ದಾಸಸಾಹಿತ್ಯ ಯೋಜನೆಯಡಿ ಪ್ರಕಟವಾಗುತ್ತಿರುವ ಆಯಾ ಸಂಪುಟಗಳ ಸಂಪಾದಕರಿಗೆ ಹಾಗೂ ಈ ಕಾರ್ಯದಲ್ಲಿ ನಮ್ಮೊಡನೆ ಸಹಕರಿಸಿದ ಸಂಪಾದಕ ಮಂಡಳಿಯವರಿಗೆ ಹಾಗೂ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಹಿಂದಿನ ನಿರ್ದೇಶಕರಾದ ಶ್ರೀ ಕೆ.ಸಿ. ರಾಮಮೂರ್ತಿ, ಶ್ರೀ ಸಿ. ಸೋಮಶೇಖರ ಅವರಿಗೆ, ಜಂಟಿ ನಿರ್ದೇಶಕರಾದ ಶ್ರೀ ಕಾ.ತ. ಚಿಕ್ಕಣ್ಣ ಅವರಿಗೆ, ಸಹಾಯಕ ನಿರ್ದೇಶಕರಾದ ಶ್ರೀಮತಿ ವೈ.ಎಸ್. ವಿಜಯಲಕ್ಷ್ಮಿ ಹಾಗೂ ಡಾ. ಮಂಜುಳ ಅವರಿಗೆ ಕೃತಜ್ಞತೆಗಳು.

ಹರಿದಾಸರ ಕೀರ್ತನೆಗಳನ್ನು ಆಯ್ದು ಸಂಗೀತಕ್ಕೆ ಆಯ್ಕೆ ಮಾಡಲು ನೆರವಾದ ಶ್ರೀ ವಿನಾಯಕ ತೊರವಿ, ಶ್ರೀ ಮೈಸೂರು ಸುಬ್ರಮಣ್ಯಂ, ಶ್ರೀ ಆರ್. ಕೆ. ಪದ್ಮನಾಭ, ಶ್ರೀ ಬಾನಂದೂರು ಕೆಂಪಯ್ಯ ಹಾಗು ಶ್ರೀಮತಿ ಮಾಲತಿ ಶರ್ಮರವರಿಗೆ, ಸಂಗೀತ ನಿರ್ದೇಶಕರಿಗೆ ಹಾಗೂ ಗಾಯಕರಿಗೆ ಕೃತಜ್ಞತೆಗಳು.

ಸಂಪುಟಗಳನ್ನು ಮುದ್ರಣಕ್ಕೆ ಅನುಗೊಳಿಸುವ ಕಾರ್ಯ ನಿರ್ವಹಿಸಿದ ಪ್ರೊ. ಜಿ. ಅಶ್ವತ್ಥನಾರಾಯಣ, ಡಾ. ಅನಂತ ಪದ್ಮನಾಭರಾವ್ ಮತ್ತು ಪ್ರೊ. ನಾ. ಗೀತಾಚಾರ್ಯ ಇವರಿಗೂ ಸಹ ಕೃತಜ್ಞತೆಗಳು.

ಈ ಸಮಗ್ರ ದಾಸಸಾಹಿತ್ಯ ಸಂಪುಟಗಳ ಮುದ್ರಣ ಕಾರ್ಯವನ್ನು ನಿರ್ವಹಿಸಿದ ಎಂ.ಎಸ್.ಐ.ಎಲ್. ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರಾದ ಶ್ರೀ ಅಶೋಕ್ ವಿ. ಡೇವಿಡ್ ಹಾಗೂ ವಿಶೇಷಾಧಿಕಾರಿಗಳಾದ ಶ್ರೀ ಎಂ. ರವಿಶಂಕರ್ ಅವರಿಗೆ ನನ್ನ ಕೃತಜ್ಞತೆಗಳು. ಸಮಗ್ರ ದಾಸಸಾಹಿತ್ಯವನ್ನು ಪ್ರಕಟಿಸುವುದು ಹರಿದಾಸರಿಗೂ ಕನ್ನಡ ಜನತೆಗೂ ನಾವು ಸಲ್ಲಿಸಬೇಕಾದ ಸೇವೆಯೆಂದು ಭಾವಿಸಿದ್ದೇನೆ. ಪಂಡಿತ ಪಾಮರರನ್ನು ಏಕ ಕಾಲಕ್ಕೆ ಆಕರ್ಷಿಸಬಲ್ಲ ವಿಶಿಷ್ಟ ಸಾಮರ್ಥ್ಯ ದಾಸಸಾಹಿತ್ಯದ್ದು ಎಂದರೆ ತಪ್ಪಾಗಲಾರದು. ಕನ್ನಡ ಜನತೆಯು ಈ ಪ್ರಕಟಣೆಯ ಸದುಪಯೋಗ ಪಡೆದುಕೊಂಡೀತು ಎಂದು ಆಶಿಸಿದ್ದೇನೆ.

**ವೈ. ಕೆ. ಮುದ್ದುಕೃಷ್ಣ**

ನಿರ್ದೇಶಕರು

# ಸಂಪಾದಕ ಮಂಡಳಿಯ ನುಡಿ

ಕನ್ನಡ ಸಾಹಿತ್ಯದ ತವನಿಧಿಗಳಲ್ಲಿ ದಾಸಸಾಹಿತ್ಯವೂ ಒಂದು. ಓದಲಾರದ ಕನ್ನಡ ಜನಕ್ಕೆ ಪಂಪನಂತಹ ಪ್ರೌಢಕವಿಗಳು ಗೊತ್ತಿರಲಿ ಬಿಡಲಿ, ದಾಸರ ಹಾಡುಗಳು ಗೊತ್ತಿಲ್ಲದವರು ಮಾತ್ರ ಅಪರೂಪ. ಜನರ ಮೇಲೆ ನಿರಂತರ ಪ್ರಭಾವವನ್ನು ಬೀರುವ ಜನಸಮ್ಮುಖತೆ ದಾಸಸಾಹಿತ್ಯದ ಪ್ರಮುಖ ಲಕ್ಷಣಗಳಲ್ಲಿ ಒಂದು. ಇಂತಹ ದಾಸರ ಹಾಡುಗಳು ಜ್ಞಾನಸಂಪದ ಹಾಗೂ ಭಕ್ತಿಸಂಪದಗಳ ಸಾರ್ವತ್ರಿಕ ಹಬ್ಬುಗೆಗೆ ಸಾಧನವಾಗಿ ಪರಿಣಮಿಸಿವೆ.

ಕನ್ನಡ ನಾಡಿನಾದ್ಯಂತ ಎಲ್ಲ ಸ್ತರಗಳಲ್ಲಿ ವರ್ಗ-ವರ್ಣಗಳ ಭೇದವಿಲ್ಲದೆ, ಜನರ ಬಾಯಲ್ಲಿ ಉಳಿದುಕೊಂಡು ಬಂದ ಈ ಸಾಹಿತ್ಯವನ್ನು ಮೊಟ್ಟಮೊದಲಿಗೆ ಪ್ರಕಟಿಸಿದ ಶ್ರೇಯಸ್ಸು ಬಾಸೆಲ್ ಮಿಶನ್ನಿನ ರೆ. ಹರ್ಮನ್ ಮೊಗ್ಲಿಂಗ್‌ರಿಗೆ ಸೇರುತ್ತದೆ. ಇವರು ತಮ್ಮ ಇಲ್ಲಿಯ ವಾಸ್ತವ್ಯದಲ್ಲಿ (೧೮೩೬ರಿಂದ), ನಾಲ್ಕುನೂರಕ್ಕೂ ಮಿಕ್ಕಿದ ದಾಸರ ಪದಗಳನ್ನು ಸಂಗ್ರಹಿಸಿದ್ದರು. ಅವುಗಳಲ್ಲಿಯ ಒಂದು ನೂರು ಪದಗಳ ಸಂಗ್ರಹವನ್ನು 'ದಾಸರ ಪದಗಳು' ಎಂಬ ಹೆಸರಿನಿಂದ ಕ್ರಿ. ಶ. ೧೮೫೦ರಲ್ಲಿ, ಮತ್ತೆ ಕ್ರಿ.ಶ. ೧೮೫೨ರಲ್ಲಿ ೧೭೪ ಪದಗಳುಳ್ಳ ಸಂಕಲನವನ್ನು ಮಂಗಳೂರಿನಲ್ಲಿ ಕಲ್ಲಚ್ಚಿನಲ್ಲಿ ಛಾಪಿಸಿ ಪ್ರಕಟಿಸಿದರು. ಈ ವಿಷಯವನ್ನು ೧೮೭೩ರಲ್ಲಿ ಪ್ರಕಟವಾದ ಇಂಡಿಯನ್ ಎಂಟಿಕ್ವೆರಿಯ **'On the Karnataka Vaishnava Dasas'** – ಎಂಬ ತಮ್ಮ ಲೇಖನದಲ್ಲಿ ರೆ. ಕಿಟೆಲ್ಲರು ಕಾಣಿಸಿದ್ದಾರೆ. ಇದರಿಂದ ಕಿಟೆಲ್‌ರಂಥವರು ಕೂಡ ದಾಸರ ಪದಗಳ ಮಹತ್ವವನ್ನು ಮತ್ತು ಜನಪ್ರಿಯತೆಯನ್ನು ಗುರುತಿಸಿದ್ದರು ಎಂಬುದು ಗೊತ್ತಾಗುತ್ತದೆ. ಪ್ರಾಸಂಗಿಕವಾಗಿ ಇದುವೆ ದಾಸಸಾಹಿತ್ಯದ ಕುರಿತಾದ ಮೊದಲ ಲೇಖನವೂ ಆಗಿದೆ.

ಆನಂತರದ ದಿನಗಳಲ್ಲಿ ಈ ಕ್ಷೇತ್ರದಲ್ಲಿ ಹಲವಾರು ಜನರು ಕೆಲಸವನ್ನು ಮುಂದುವರಿಸಿದರು. ರೆ. ಮೊಗ್ಲಿಂಗರ 'ದಾಸರ ಪದಗಳು' ಇದರ ದ್ವಿತೀಯ ಆವೃತ್ತಿಯನ್ನು ೧೮೭೧ರಲ್ಲಿ ಜಾನ್ ಗ್ಯಾರೆಟರ ಸೂಚನೆಯ ಮೇರೆಗೆ ಹೊಳಕಲ್ಲು ನರಸಿಂಹಯ್ಯನವರು ಬೆಂಗಳೂರಿನಿಂದ ಪ್ರಕಟಿಸಿದರು. ೧೮೭೩ರಲ್ಲಿ ಹಿಂದೂ ಭಾಷಾ ಸಂಜೀವಿನೀ ಮುದ್ರಣ ಶಾಲೆಯಲ್ಲಿ 'ಹರಿಭಜನೆ, ಕೀರ್ತನೆ' ಎಂಬ ಸಂಗ್ರಹ ಪ್ರಕಟವಾಯಿತು. ೧೮೯೦ನೆ ದಶಕದಲ್ಲಿ ಬೆಳಗಾವಿಯ ಆಬಾಜಿ ರಾಮಚಂದ್ರ ಸಾವಂತ ಇವರು ದೇವನಾಗರಿ ಲಿಪಿಯಲ್ಲಿ "ದಾಸರ ಪದಗಳ ಸಂಗ್ರಹವು" ಎಂಬುದಾಗಿ ಎರಡು ಭಾಗಗಳಲ್ಲಿ ಪ್ರಕಟಿಸಿದರು. ಆ ದಶಕದಲ್ಲಿಯೇ ಮಡಕಶಿರಾದ ಬಾಲಕೃಷ್ಣರಾಯರು ೧೮೯೪ರಲ್ಲಿ 'ಪುರಂದರ ದಾಸರು ಮೊದಲಾದ ಅಪರೋಕ್ಷ ಜ್ಞಾನಿಗಳ ಪದಗಳು' ಎಂಬ ಪುಸ್ತಕವನ್ನು ತೆಲುಗು ಲಿಪಿಯಲ್ಲಿ ಮುದ್ರಿಸಿದ್ದು ಗಮನಾರ್ಹವಾಗಿದೆ. ಮತ್ತೆ ೧೯೦೮ರಲ್ಲಿ ಅವರೇ ಇನ್ನೊಂದು ಸಂಕಲನವನ್ನೂ ಪ್ರಕಟಿಸಿದ್ದಾರೆ.

ಹೀಗೆ ೧೮೫೦ರಷ್ಟು ಹಿಂದೆಯೇ ಪ್ರಾರಂಭವಾದ ದಾಸರ ಪದಗಳ ಸಂಗ್ರಹ ಹಾಗೂ ಪ್ರಕಟಣೆಯ ಕಾರ್ಯಕ್ಕೆ ಒಂದು ವ್ಯವಸ್ಥಿತ ರೂಪವನ್ನು ಕೊಟ್ಟು, ನಾಡಿನಾದ್ಯಂತ ಹರಿದು ಹಂಚಿಹೋದ, ಜನರ ಬಾಯಲ್ಲಿ ಉಳಿದುಕೊಂಡು ಬಂದ ವಿವಿಧ ದಾಸರ ಪದಗಳನ್ನು ಸಂಗ್ರಹಿಸಿ ಪ್ರಕಟಿಸಲು ಪ್ರಾರಂಭಿಸಿದವರು ಉಡುಪಿಯ ಪಾವಂಜೆ ಗುರುರಾಯರು. ಅವರು ೧೯೧೪ರಲ್ಲಿ ಪ್ರಕಟಿಸಿದ ಮೊದಲ ಸಂಕಲನದ ಹೆಸರು 'ಉದಯರಾಗವು' ಎಂಬುದು. ಅನಂತರದ ದಿನಗಳಲ್ಲಿ ಪುರಂದರದಾಸರ ಕೀರ್ತನೆಗಳನ್ನು ಐದು ಸಂಪುಟಗಳಲ್ಲಿ ಮತ್ತು ಉಳಿದ ದಾಸರ ಕೃತಿಗಳನ್ನು ಬಿಡಿಬಿಡಿಯಾಗಿ ಪ್ರಕಟಿಸಿದರು. ಹೀಗೆ ನಾಡಿನ ದಕ್ಷಿಣದ ಅಂಚಿನ ಉಡುಪಿಯಲ್ಲಿ ಪ್ರಾರಂಭವಾದ ಕೆಲಸವನ್ನು ಉತ್ತರದ ಅಂಚಿನ ಲಿಂಗಸುಗೂರಿನಲ್ಲಿ ಗೊರಾಬಾಳ ಹಣಮಂತರಾಯರು 'ವರದೇಂದ್ರ ಸಾಹಿತ್ಯ ಮಾಲೆ'ಯನ್ನು ಪ್ರಾರಂಭಿಸಿ ತಮ್ಮ ಇಡೀ ಜೀವನವನ್ನೇ ಹರಿದಾಸ ಸಾಹಿತ್ಯದ ಸಂಗ್ರಹ ಮತ್ತು ಪ್ರಕಟಣೆಗೆ ಮೀಸಲಾಗಿರಿಸಿದರು. ಇತ್ತ ಮೈಸೂರು ಭಾಗದಲ್ಲಿ ಸುಪ್ರಸಿದ್ಧ ದಾಸರ ಹಾಡುಗಳನ್ನು ತಕ್ಕಮಟ್ಟಿಗೆ ಶಾಸ್ತ್ರಶುದ್ಧವಾಗಿ ಪ್ರಕಟಿಸಲು ಸುಬೋಧ ರಾಮರಾಯರು ಮುಂದಾದರು. ಇದೇ ಬಗೆಯ ಕೆಲಸವನ್ನು ಧಾರವಾಡ ಪ್ರದೇಶದಲ್ಲಿ ನಾರಾಯಣರಾವ ಕಲಮದಾನಿ, ಹುಚ್ಚರಾವ ಬೆಂಗೇರಿ

ಹಾಗೂ ಬೆಟಗೇರಿ ಕೃಷ್ಣಶರ್ಮರು ಮಾಡಿದರು. ಇದರೊಂದಿಗೆ, ಭಜನೆಯ ದೃಷ್ಟಿಯಿಂದ ಅನುಕೂಲವಾಗುವಂತೆ ನಾಡಿನ ವಿವಿಧ ಭಾಗಗಳಲ್ಲಿ ದಾಸಸಾಹಿತ್ಯಾಸಕ್ತರು ತಮತಮಗೆ ಬೇಕಾದ ಪದಗಳ ಸಂಗ್ರಹವನ್ನು ಪ್ರಕಟಿಸತೊಡಗಿದರು. ಇದರಿಂದಾಗಿ ನಾಡಿನ ಬಹುತೇಕ ಭಾಗಗಳಲ್ಲಿ ಬೇರೆ ಬೇರೆ ದಾಸರು ಇದ್ದುದು ಮತ್ತು ಅವರು ಹಾಡುಗಳನ್ನು ಬರೆದಿದ್ದಾರೆ ಎಂಬುದು ಗಮನಕ್ಕೆ ಬಂದಿತು. ಅದು 'ದಾಸ-ಪೀಳಿಗೆ' ಯನ್ನು ಗುರುತಿಸಲು ಸಹಾಯವಾಯಿತು.

ಶ್ರೀಪಾದರಾಜರಿಂದ ಪ್ರಾರಂಭವಾದ ಕೀರ್ತನೆಗಳ ರಚನೆಯ ಸಂಪ್ರದಾಯವು ಈ ಐದುನೂರು ವರ್ಷಗಳಲ್ಲಿ ಸುಮಾರು ಮುನ್ನೂರು ಜನ ದಾಸರು ಹುಟ್ಟಿ ಮೂವತ್ತು ಸಾವಿರಕ್ಕೂ ಮಿಕ್ಕ ಕೀರ್ತನೆಗಳನ್ನು ರಚಿಸಿದ್ದಾರೆಂದರೆ ಅವುಗಳ ಮಹತ್ವ ಗೊತ್ತಾಗದೇ ಇರದು.

ಇಡಿಯಾಗಿ-ಬಿಡಿಬಿಡಿಯಾಗಿ ವ್ಯಕ್ತಿಗಳಿಂದ, ಸಂಘ ಸಂಸ್ಥೆಗಳಿಂದ ದಾಸರ ಪದಗಳು ಪ್ರಕಟವಾಗುತ್ತ ಬರುತ್ತಿರುವಾಗಲೇ ಪುರಂದರ ಕನಕದಾಸರ ಚತುಃಶತಮಾನೋತ್ಸವ ಸಂದರ್ಭಗಳಲ್ಲಿ ಅವರ ಸಮಗ್ರ ಕೃತಿಗಳು ಸರ್ಕಾರದಿಂದ ಹಾಗೂ ವಿವಿದ ಸಂಘ ಸಂಸ್ಥೆಗಳಿಂದ ಪ್ರಕಟವಾದವು. ಆದರೆ ಸಮಗ್ರ ದಾಸಸಾಹಿತ್ಯದ ಪ್ರಕಟಣೆ ಈವರೆಗೆ ಆಗಲೇ ಇಲ್ಲವೆಂದು ಹೇಳಬಹುದು. ಇಂಥದೊಂದು ಪ್ರಯತ್ನವನ್ನು ಮೂರು ದಶಕಗಳ ಹಿಂದೆ ಮೈಸೂರು ವಿಶ್ವವಿದ್ಯಾ ನಿಲಯವು ಕೈಗೊಂಡಿತು. ವೈಜ್ಞಾನಿಕ ರೀತಿಯಲ್ಲಿ ಶಾಸ್ತ್ರ ಶುದ್ಧವಾಗಿ ದಾಸಸಾಹಿತ್ಯವನ್ನು ಪ್ರಕಟಿಸುವುದರ ಅಡಿಗಲ್ಲನ್ನು ಹಾಕಿದ ಶ್ರೇಯಸ್ಸು ಆ ಮಾಲೆಯ ಸಂಪಾದಕರಾಗಿದ್ದ ಡಾ. ಜಿ. ವರದರಾಜರಾವ್ ಅವರಿಗೆ ಸಲ್ಲಬೇಕು. ಇದುವರೆಗೆ ಕೆಲವು ಸಂಪುಟಗಳು ಮಾತ್ರ ಬಂದಿವೆ. ಆದರೆ ಹಸ್ತಪ್ರತಿಗಳಲ್ಲಿ ವಿಪುಲ ದಾಸಸಾಹಿತ್ಯವನ್ನು ಸಂಗ್ರಹಿಸಲಾಗಿದೆ. ಅದೇ ರೀತಿಯಲ್ಲಿ ಲಿಂಗಸುಗೂರಿನಲ್ಲಿ, ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಹಾಗೂ ತಿರುಪತಿಯ ದಾಸಸಾಹಿತ್ಯ ಪ್ರೊಜೆಕ್ಟದಲ್ಲಿ ಕೂಡ ವಿಪುಲ ಹಸ್ತಪ್ರತಿಗಳ ಸಂಗ್ರಹವಿದೆ. ಇವರೆಲ್ಲರ ಸಹಕಾರದಿಂದ ಈಗ ಕರ್ನಾಟಕ ಸರ್ಕಾರವು ಸಮಗ್ರ ದಾಸಸಾಹಿತ್ಯವನ್ನು ಒಂದೆಡೆ ಸಂಗ್ರಹಿಸಿ ಪ್ರಕಟಿಸುವ ಸಾಹಸದ ಕಾರ್ಯವನ್ನು ಮಾಡುತ್ತಿದೆ.

# ಸಂಪುಟ ಯೋಜನೆ

ದಾಸಸಾಹಿತ್ಯದ ಪರಿಷ್ಕರಣ ಕಾರ್ಯ ತುಂಬ ಜಟಿಲವಾದುದೆಂಬುದು ಸಂಪಾದಕ ಮಂಡಳಿಯ ಪ್ರಥಮ ಸಭೆಯಲ್ಲಿಯೇ ಅನುಭವಕ್ಕೆ ಬಂದಿತು. ಕಳೆದ ಐದು ಶತಮಾನಗಳಿಂದ ನಿರಂತರ ಹರಿದು ಬಂದ ದಾಸಸಾಹಿತ್ಯ ರಚನೆಯಲ್ಲಿಯ ದಾಸರ ಹಾಗೂ ದಾಸರ ಪದಗಳ ಸಂಖ್ಯಾಬಾಹುಳ್ಯವನ್ನು ಗಮನಿಸಿ ಅದಕ್ಕೊಂದು ಕಾಲಮಿತಿಯನ್ನು ಹಾಕಿಕೊಳ್ಳುವುದು ಅನಿವಾರ್ಯವಾಯಿತು. ಹಾಗೆ ದಾಸಸಾಹಿತ್ಯದ ಪ್ರಾರಂಭ ಕಾಲದಿಂದ ೧೯ನೆಯ ಶತಮಾನದ ಅಂತ್ಯದ ವರೆಗೆ ರಚಿತಗೊಂಡ ವೈದಿಕ ಪರಂಪರೆಯ ದಾಸರ ಪದಗಳನ್ನು ಸಂಗ್ರಹಿಸುವುದೆಂದು, ಅದರಲ್ಲಿ ದ್ವೈತ, ಅದ್ವೈತ, ವಿಶಿಷ್ಟಾದ್ವೈತ ಪರಂಪರೆಯ ಲಭ್ಯವಿದ್ದ ಹಾಡುಗಳನ್ನು ಸೇರಿಸಿಕೊಂಡು ೩೫ ಸಂಪುಟಗಳಲ್ಲಿ ಪ್ರಕಟಿಸುವುದೆಂದು ನಿರ್ಧರಿಸಲಾಯಿತು.

ಈ ೩೫ ಸಂಪುಟಗಳನ್ನು*, ಸಂಪಾದಕ ಮಂಡಳಿಯ ಸದಸ್ಯರಲ್ಲದೆ ನಾಡಿನ ಹಲವಾರು ವಿದ್ವಾಂಸರನ್ನು ಸಂಪಾದಿಸಿ ಕೊಡಲು ಕೇಳಿಕೊಳ್ಳಲಾಯಿತು.

ಇಂಥದೊಂದು ಬೃಹತ್ ಕಾರ್ಯವನ್ನು ಕೈಗೊಂಡಾಗ ಕೆಲವು ಮಾರ್ಗದರ್ಶಿ ಸೂತ್ರಗಳನ್ನು ಅನುಸರಿಸುವುದು ಅನಿವಾರ್ಯವಾಗುತ್ತದೆ. ಅನ್ಯ ಮತ–ಪಂಥಗಳ ಟೀಕೆಗಳು ಬಂದಿದ್ದರೆ ಅಂಥ ಹಾಡುಗಳನ್ನು ಕೈಬಿಡಬೇಕು. ಒಂದೇ ಹಾಡು ಇಬ್ಬರು ದಾಸರ ಅಂಕಿತದಲ್ಲಿ ಪ್ರಚಲಿತದಲ್ಲಿದ್ದರೆ, ಎರಡೂ ಕಡೆಗೆ ಅವುಗಳನ್ನು ಕೊಟ್ಟು ಕೆಳಗೆ ' ಈ ಕೀರ್ತನೆ . . . . ದಾಸರ ಅಂಕಿತದಲ್ಲೂ ಇದೆ' ಎಂದೂ ಸೂಚಿಸಬೇಕು. ದ್ವೈತ ಸಂಪ್ರದಾಯದ ಕೀರ್ತನೆಗಳನ್ನು ಪ್ರಕಟಿಸುವಾಗ ದೇವ–ಗುರು ತಾರತಮ್ಯವನ್ನು ಪಾಲಿಸಬೇಕು ; ಉಳಿದೆಡೆ ಗಣೇಶ ಪ್ರಾರ್ಥನೆ, ಭಗವಂತನ ನಾಮಸಂಕೀರ್ತನೆ, ಆತ್ಮನಿವೇದನೆ, ಲೋಕನೀತಿ, ತಾತ್ವಿಕ, ಕಥನಾತ್ಮಕ, ಸಂಪ್ರದಾಯ ಹಾಗೂ ವಿಶೇಷ ಹಾಡುಗಳೆಂದು ಮುಂತಾಗಿ ವಿಂಗಡಿಸಿ ಕೊಡಬೇಕು – ಎಂಬುದಾಗಿ ನಿರ್ಧರಿಸಿತು.

---

*ಇವುಗಳಲ್ಲಿ ಕೆಲವುಗಳಿಗೆ ಎರಡು ಮೂರು ಭಾಗಗಳಿವೆ.

ಪ್ರತಿಯೊಂದು ಸಂಪುಟದ ಪ್ರಾರಂಭದಲ್ಲಿ ಹಾಡುಗಳ ಪರಿವಿಡಿಯನ್ನು ಕೊಟ್ಟು ಪ್ರಸ್ತಾವನೆಯಲ್ಲಿ ಆಯಾ ದಾಸರ ಸಂಕ್ಷಿಪ್ತ ಜೀವನ ಚರಿತ್ರೆ, ಕೃತಿಗಳ ಸಮೀಕ್ಷೆ, ಶೈಲಿ ಇತ್ಯಾದಿಗಳನ್ನು ವಿವರಿಸಿ, ಗ್ರಂಥಸಂಪಾದನೆಯ ಆಕರಗಳನ್ನೂ ಕೊಡಲು ಪ್ರಯತ್ನಿಸಲಾಗಿದೆ. ಕೊನೆಯಲ್ಲಿ ಬರುವ ಅನುಬಂಧಗಳಲ್ಲಿ ಕಠಿಣ ಶಬ್ದಗಳ ಅರ್ಥ, ಟಿಪ್ಪಣಿ ಮತ್ತು ವಿಶಿಷ್ಟ ಅಂಕಿತನಾಮಗಳ ಸೂಚಿ ಹಾಗೂ ಹಾಡುಗಳ ಅಕಾರಾದಿಯನ್ನು ಕೊಡಲಾಗಿದೆ.

ಈ ಸಂಪುಟಗಳು ಜನಪ್ರಿಯ ಆವೃತ್ತಿಗಳಾಗಿರುವುದರಿಂದ ಲಭ್ಯವಿರುವ ಪಾಠಾಂತರಗಳಲ್ಲಿ ಯೋಗ್ಯವಾದುದನ್ನು ಸ್ವೀಕರಿಸಿದೆ. ಅನ್ಯ ಪಾಠಗಳನ್ನು ಅಡಿಯಲ್ಲಿ ನಮೂದಿಸಿಲ್ಲ. ಆದರೂ ಇವು ವಿದ್ವಜ್ಜನಪ್ರಿಯ ಆವೃತ್ತಿಗಳೂ ಆಗಬೇಕೆಂಬ ರೀತಿಯಲ್ಲಿ ಈ ಸಂಪುಟಗಳನ್ನು ರೂಪಿಸಲು ಪ್ರಯತ್ನಿಸಿದ್ದೇವೆ.

## ಕೃತಜ್ಞತೆಗಳು

ಕಳೆದ ನೂರೈವತ್ತು ವರ್ಷಗಳಿಂದ ಪಾಶ್ಚಾತ್ಯ ಮಿಶನರಿಗಳಿಂದ ಹಿಡಿದು ಈ ಮೊದಲು ಉಲ್ಲೇಖಿಸಿದ ನಾಡಿನ ಅನೇಕ ವಿದ್ವಜ್ಜನರು, ಸಂಘ ಸಂಸ್ಥೆಗಳು, ವಿಶ್ವವಿದ್ಯಾಲಯಗಳು ದಾಸಸಾಹಿತ್ಯ ಕುರಿತು ನಿರಂತರ ದುಡಿದು ವಿಪುಲ ಸಾಮಗ್ರಿಯನ್ನು ಪ್ರಕಟಿಸಿದ್ದಾರೆ. ಈ ಎಲ್ಲ ವ್ಯಕ್ತಿಗಳಿಗೂ ಸಂಘ ಸಂಸ್ಥೆಗಳಿಗೂ ನಮ್ಮ ಕೃತಜ್ಞತಾಪೂರ್ವಕ ವಂದನೆಗಳು ಸಲ್ಲುತ್ತವೆ.

ಈ ಯೋಜನೆ ಅಸ್ತಿತ್ವಕ್ಕೆ ಬಂದುದೂ ಒಂದು ವಿಶಿಷ್ಟ ಸಂದರ್ಭದಲ್ಲಿ ಎಂಬುದನ್ನು ಇಲ್ಲಿ ನಮೂದಿಸಬೇಕು. ಕರ್ನಾಟಕ ಸರ್ಕಾರವು ನಾಡಿನ ಖ್ಯಾತ ಸಂಶೋಧಕರಾದ ಡಾ. ಎಂ. ಎಂ. ಕಲಬುರ್ಗಿ ಅವರ ಪ್ರಧಾನ ಸಂಪಾದಕತ್ವದಲ್ಲಿ ಸಮಗ್ರ ವಚನಸಾಹಿತ್ಯವನ್ನು ಪ್ರಕಟಿಸಿತಷ್ಟೇ. ಅವರೇ 'ದಾಸಸಾಹಿತ್ಯ' ಯೋಜನೆಯನ್ನು ರೂಪಿಸಿ ಶ್ರೀ ಪೇಜಾವರ ಮಠಾಧೀಶರಾದ ಶ್ರೀ ವಿಶ್ವೇಶತೀರ್ಥರ ಮೂಲಕ ಈ ಯೋಜನೆಯತ್ತ ಸರ್ಕಾರದ ಗಮನ ಸೆಳೆದರು. ಇದನ್ನು ಅರಿತ ಅಂದಿನ ಮುಖ್ಯಮಂತ್ರಿಗಳೂ ಅನಂತರ ಭಾರತದ ಪ್ರಧಾನಮಂತ್ರಿಗಳೂ ಆಗಿದ್ದ ಸನ್ಮಾನ್ಯ ಶ್ರೀ ಹೆಚ್. ಡಿ. ದೇವೇಗೌಡರು ಮುಧೋಳದಲ್ಲಿ (೧೯೯೫) ಜರುಗಿದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಸರ್ಕಾರವು ಸಮಗ್ರ

ದಾಸಸಾಹಿತ್ಯವನ್ನು ಪ್ರಕಟಿಸಲು ಒಪ್ಪಿಕೊಂಡಿದೆ ಎಂದು ಘೋಷಿಸಿದರು. ಅದರಂತೆ ಸರ್ಕಾರವು ಒಂಬತ್ತು ಜನರ ಸಂಪಾದಕ ಮಂಡಳಿಯನ್ನು ರಚಿಸಿತು. ಅದರಲ್ಲಿ ಡಾ. ಶ್ರೀನಿವಾಸ ಹಾವನೂರ, ಡಾ. ಟಿ.ಎನ್. ನಾಗರತ್ನ ಮತ್ತು ಪ್ರೊ. ವಸಂತ ಕುಷ್ಟಗಿ ಅವರನ್ನು ಸಮಿತಿಯ ಕಾರ್ಯನಿರ್ವಾಹಕ ಸಂಪಾದಕರೆಂದು ನಿಯಮಿಸಿತು. ಜೊತೆಗೆ ಈ ಮೊದಲು ಇಂಥ ಕಾರ್ಯವನ್ನು ಯಶಸ್ವಿಯಾಗಿ ಮಾಡಿದ ಅನುಭವಿ ಡಾ. ಎಂ. ಎಂ. ಕಲಬುರ್ಗಿ, ದಾಸಸಾಹಿತ್ಯದಲ್ಲಿ ನುರಿತ ವಿದ್ವಾಂಸರುಗಳಾದ ಪ್ರೊ. ಎಂ. ರಾಜಗೋಪಾಲಾಚಾರ್ಯ, ಡಾ. ಕೃಷ್ಣ ಕೊಲ್ಹಾರ ಕುಲಕರ್ಣಿ, ಡಾ. ಮಂದಾಕಿನಿ, ಪ್ರೊ. ಸುಧಾಕರ ಮತ್ತು ಡಾ. ಬಸವರಾಜ ಸಬರದ ಅವರನ್ನು ಸಂಪಾದಕ ಮಂಡಳಿಯ ಸದಸ್ಯರನ್ನಾಗಿ ನಿಯಮಿಸಿತು. ಅವರುಗಳ ನಿರಂತರ ಪರಿಶ್ರಮದ ಫಲವೇ ಈ ಸಮಗ್ರ ದಾಸಸಾಹಿತ್ಯದ ಪ್ರಕಟಣಾ ಕಾರ್ಯ. ಈ ಪ್ರಕಟಣಾ ಕಾರ್ಯದಲ್ಲಿ ಅವರುಗಳೊಂದಿಗೆ ೩೫ ಸಂಪುಟಗಳನ್ನು ಸಿದ್ಧಪಡಿಸುವಲ್ಲಿ ಸರ್ವಶ್ರೀ ಅರಳುಮಲ್ಲಿಗೆ ಪಾರ್ಥಸಾರಥಿ, ಡಾ. ಡಿ. ಆರ್. ಪಾಂಡುರಂಗ, ಡಾ. ಅನಂತಪದ್ಮನಾಭರಾವ್, ಪ್ರೊ. ಬಿ. ಆರ್. ಕುಲಕರ್ಣಿ, ಡಾ. ಕೆ. ಜಿ. ವೆಂಕಟೇಶ್, ಪ್ರೊ. ಜಿ. ಅಶ್ವತ್ಥನಾರಾಯಣ, ಡಾ. ಕೆ. ಗೋಕುಲನಾಥ, ಡಾ. ಕೆ. ಎಂ. ಕೃಷ್ಣರಾವ್, ಶ್ರೀ ಹಣಮಂತ ತಾಸಗಾಂವಕರ್, ಪ್ರೊ. ನಾ. ಗೀತಾಚಾರ್ಯ, ಡಾ. ಸ್ವಾಮಿರಾವ್ ಕುಲಕರ್ಣಿ, ಶ್ರೀ ಹನುಮನಗೌಡ, ಶ್ರೀ ಎ. ಎನ್. ಅನಂತಸ್ವಾಮಿರಾವ್, ಶ್ರೀ ನಾರಾಯಣಾಚಾರ್ಯ ಧೂಳಖೇಡ, ಶ್ರೀ ಶಾಶ್ವತಸ್ವಾಮಿ ಮುಕ್ಕುಂದಿಮಠ, ಶ್ರೀ ಕೆ. ಎಸ್. ವೆಂಕಟೇಶ್ ಮತ್ತು ಶ್ರೀ ಎಚ್. ಎಸ್. ಶ್ರೀನಿವಾಸಮೂರ್ತಿ ಅವರುಗಳು ಹಾಗೂ ಶ್ರೀಮತಿಯರಾದ ನಳಿನಿ ವೆಂಕಟೇಶ್, ಮೀನಾರಾವ್, ಲೀಲಾವತಿ ಎಸ್. ರಾವ್, ಡಾ. ಜಯಲಕ್ಷ್ಮಿ ಮಂಗಳಮೂರ್ತಿ, ಡಾ. ಅಕ್ಕಮಹಾದೇವಿ, ಶೀಲಾ ದಾಸ್, ಡಾ. ರಮಾ ಕಲ್ಲೂರಕರ, ಡಾ. ಸೀತಾ ಗುಡೂರ ಕುಲಕರ್ಣಿ, ಹೆಚ್. ಎಸ್. ಪದ್ಮಾ ಮೂರ್ತಿ, ಮತ್ತು ರುಕ್ಮಿಣಿ ಗಿರಿಮಾಜಿ ಅವರುಗಳು ತುಂಬ ಶ್ರಮವಹಿಸಿ ಸಂಪುಟಗಳನ್ನು ಸಿದ್ಧಪಡಿಸಿಕೊಟ್ಟಿದ್ದಾರೆ. ಅವರುಗಳಿಗೆ ಸಂಪಾದಕ ಮಂಡಳಿಯು ಕೃತಜ್ಞತೆಗಳನ್ನು ಸಲ್ಲಿಸುತ್ತದೆ. ಈ ಮಧ್ಯೆ ಸಂಪಾದಕ ಸಮಿತಿಯ ಸದಸ್ಯರಲ್ಲೊಬ್ಬರಾದ ಪ್ರೊ. ಎಂ. ರಾಜಗೋಪಾಲಾಚಾರ್ಯರು ಮತ್ತು ಡಾ. ಮಂದಾಕಿನಿ ಹಾಗೂ ಸಂಪುಟ ಸಂಪಾದಕರಲ್ಲಿ ಒಬ್ಬರಾದ ಶ್ರೀ ಎಚ್. ಎಸ್. ಶ್ರೀನಿವಾಸಮೂರ್ತಿ, ಡಾ. ಕೆ.ಎಂ. ಕೃಷ್ಣರಾವ್, ಶ್ರೀಮತಿ ಪದ್ಮಾ ಮೂರ್ತಿ ಹಾಗೂ ಶ್ರೀ ಹನುಮನಗೌಡ ಮಾಲ್ವಿ ಅವರು ನಮ್ಮನ್ನು ಅಗಲಿದ್ದು ದುಃಖದ ವಿಷಯವಾಗಿದೆ.

ಆಯಾ ಕಾಲದಲ್ಲಿ ಈ ಯೋಜನೆಗೆ ಸಹಕರಿಸಿದ ಹಾಗೂ ಈ ಯೋಜನೆಯ ಪರಿಕಲ್ಪನೆ ಯಶಸ್ವಿಯಾಗಿ ಕಾರ್ಯಾನುಷ್ಠಾನಕ್ಕೆ ಬರುವ ದಿಸೆಯಲ್ಲಿ ಸಹಕರಿಸಿದ ಈ ಹಿಂದಿನ ಸರ್ಕಾರದ ಮಾನ್ಯ ಮುಖ್ಯಮಂತ್ರಿಗಳಿಗೆ ಹಾಗೂ ವಿಶೇಷವಾಗಿ ಇಂದಿನ ಮುಖ್ಯಮಂತ್ರಿಗಳಾದ ಸನ್ಮಾನ್ಯ ಶ್ರೀ ಎಸ್. ಎಂ. ಕೃಷ್ಣ ಅವರಿಗೆ, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಸಚಿವೆ ಶ್ರೀಮತಿ ರಾಣಿ ಸತೀಶ್ ಅವರಿಗೆ, ಇಲಾಖೆಯ ಹಿಂದಿನ ಕಾರ್ಯದರ್ಶಿಗಳಾದ ಶ್ರೀ ಚಂದ್ರಹಾಸ ಗುಪ್ತ ಮತ್ತು ಈಗಿನ ಕಾರ್ಯದರ್ಶಿಗಳಾದ ಶ್ರೀ ಸಿ. ಎಸ್. ಕೇದಾರ್ ಅವರಿಗೆ ನಮ್ಮ ನಮನಗಳು ಸಲ್ಲುತ್ತವೆ. ಈ ಕಾರ್ಯದಲ್ಲಿ ಈ ಯೋಜನೆಗೆ ನೆರವಾದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಹಿಂದಿನ ನಿರ್ದೇಶಕರುಗಳು ಹಾಗೂ ಈಗಿನ ನಿರ್ದೇಶಕರಾದ ಶ್ರೀ ವೈ. ಕೆ. ಮುದ್ದುಕೃಷ್ಣ, ಜಂಟಿ ನಿರ್ದೇಶಕರಾದ ಶ್ರೀ ಕಾ. ತ. ಚಿಕ್ಕಣ್ಣ, ಸಹಾಯಕ ನಿರ್ದೇಶಕರಾದ ಶ್ರೀಮತಿ ವೈ.ಎಸ್. ವಿಜಯಲಕ್ಷ್ಮಿ ಮತ್ತು ಡಾ. ಮಂಜುಳಾ ಅವರಿಗೆ ನಮ್ಮ ವಂದನೆಗಳು ಸಲ್ಲುತ್ತವೆ. ಈ ಕಾರ್ಯದಲ್ಲಿ ನೆರವಾದ ಎಂ. ಎಸ್. ಐ. ಎಲ್. ಸಂಸ್ಥೆಯ ಅಧಿಕಾರಿ ಹಾಗೂ ಸಿಬ್ಬಂದಿವರ್ಗಕ್ಕೆ, ವಿಶೇಷವಾಗಿ ಶ್ರೀ ಎಂ. ರವಿಶಂಕರ್, ವಿಶೇಷಾಧಿಕಾರಿ, ಅವರಿಗೆ ನಮ್ಮ ವಂದನೆಗಳು ಸಲ್ಲುತ್ತವೆ.

ಇದು ಒಂದು ದೊಡ್ಡ ಯೋಜನೆ. ಇದರ ಸಂಪಾದನೆಯ ಸಮಸ್ಯೆಗಳು ದೊಡ್ಡವು. ಪಾಠಾಂತರ, ರೂಪಾಂತರ, ಪ್ರಕ್ಷಿಪ್ತತೆ ಇತ್ಯಾದಿಗಳ ಗೊಂದಲಕ್ಕೆ ಗುರಿಯಾಗುತ್ತ ಬಂದ ವ್ಯಾಪಕ ಪ್ರಮಾಣದ ಈ ದಾಸಸಾಹಿತ್ಯವನ್ನು ಒಂದೆಡೆ ಸಂಗ್ರಹಿಸುವುದು, ಪುನರುಕ್ತಿಗಳನ್ನು ಗುರುತಿಸುವುದು, ಅಂಕಿತ ಪಲ್ಲಟಗಳನ್ನು ಸರಿಪಡಿಸುವುದು, ಪ್ರಕ್ಷಿಪ್ತಗಳನ್ನು ದೂರೀಕರಿಸುವುದು, ಕೊನೆಯದಾಗಿ ಕೀರ್ತನೆಗಳನ್ನು ಶುದ್ಧೀಕರಿಸುವುದು ಎಂಥವರನ್ನೂ ಧೈರ್ಯಗೆಡಿಸುವ ಕೆಲಸ. ಹೀಗಿದ್ದೂ ದಾಸಸಾಹಿತ್ಯದ ಮೇಲಿನ ಗೌರವ ಪ್ರೀತಿಗಳು ನಮ್ಮಿಂದ ಈ ಕೆಲಸ ಮಾಡಿಸಿದೆ. ನಮ್ಮ ಶಕ್ತಿಗೆ ಮೀರಿ ಉಳಿದಿರಬಹುದಾದ ದೋಷಗಳನ್ನು ಮನ್ನಿಸಬೇಕೆಂದು ಕೋರುತ್ತೇವೆ. ಈ ಮೂವತ್ತೈದು ಸಂಪುಟಗಳನ್ನು ಸಹೃದಯ ಲೋಕಕ್ಕೆ ಅರ್ಪಿಸುತ್ತೇವೆ. ಸಮಗ್ರ ದಾಸಸಾಹಿತ್ಯವು ಸುಲಭ ಬೆಲೆಯಲ್ಲಿ ಕನ್ನಡಿಗರ ಮನೆ–ಮನಗಳಲ್ಲಿ ಬೆಳಗಲೆಂದು ಹಾರೈಸುತ್ತೇವೆ.

ಸಂಪಾದಕ ಮಂಡಳಿ

# ಪರಿವಿಡಿ


| ವಿಷಯ | | ಪುಟ |
|---|---|---|
| ೧. | ಮುನ್ನುಡಿ | 5 |
| ೨. | ಎರಡು ಮಾತು | 7 |
| ೩. | ಯೋಜನೆಯ ಕುರಿತು | 9 |
| ೪. | ಪ್ರಕಾಶಕರ ಮಾತು | 11 |
| ೫. | ಸಂಪಾದಕ ಮಂಡಳಿಯ ನುಡಿ | 13 |
| ೬. | ಪ್ರಸ್ತಾವನೆ | 23 |
| ೭. | ಕೀರ್ತನೆಗಳ ಕ್ರಮಸೂಚಿ | 61 |
| ೮. | ಕೀರ್ತನೆಗಳು | |
| | *ಅ. ವಿಜಯ ರಾಮಚಂದ್ರ ವಿಠಲರು* | *೧–೪೦* |
| | *ಆ. ಜಯೇಶ ವಿಠಲರು* | *೪೧–೧೦೪* |
| | *ಇ. ರಂಗೇಶ ವಿಠಲರು* | *೧೦೫–೨೧೦* |
| | *ಈ. ದಾಸರ ಲಕ್ಷ್ಮೀನಾರಾಯಣರಾಯರು* | *೨೧೧–೩೦೮* |
| | *ಉ. ವರವಣಿ ರಾಮರಾಯರು* | *೩೦೯–೩೯೪* |

೯. ಅನುಬಂಧಗಳು


೧. ಕಠಿಣಶಬ್ದಗಳ ಅರ್ಥ ೩೯೭–೪೧೧

೨. ಟಿಪ್ಪಣಿಗಳು ೪೧೨–೪೩೨

೩. ಅಂಕಿತನಾಮ ಸೂಚಿ ೪೩೩–೪೪೧

೪. ಜಯೇಶವಿಠಲರ ಅಧಿಕ ಕೃತಿಗಳು ೪೪೨–೪೫೫

೫. ಗುರು ಜಯೇಶವಿಠಲ ಅಂಕಿತದ ಕೆಲವು ಕೃತಿಗಳು ೪೫೬–೪೬೧

೬. ರಂಗೇಶವಿಠಲರಿಗಿತ್ತ ಅಂಕಿತಪದ ೪೬೨

೭. ದಾಸರ ಲಕ್ಷ್ಮೀನಾರಾಯಣರಾಯರ ಇತರ ಕೃತಿಗಳು ೪೬೩–೪೬೯

೮. ಕೀರ್ತನೆಗಳ ಅಕಾರಾದಿ ೪೭೦–೪೮೪

# ಪ್ರಸ್ತಾವನೆ

ವಿಜಯದಾಸರು ಮತ್ತು ಜಗನ್ನಾಥದಾಸರ ಕಾಲದಲ್ಲಿ ವಿಸ್ತಾರಗೊಂಡ ದಾಸಕೂಟದ ಚಟುವಟಿಕೆಗಳು ೧೯-೨೦ನೆಯ ಶತಮಾನಗಳಲ್ಲಿ ಹಳೆಯ ಮೈಸೂರು ಪ್ರಾಂತ್ಯಕ್ಕೂ ಪಸರಿಸಿತು. ಮೈಸೂರು, ಬೆಂಗಳೂರು, ದೇವರಾಯನ ದುರ್ಗ ಇವು ಹರಿದಾಸರ ಧಾರ್ಮಿಕ ಚಟುವಟಿಕೆಯ ಕೇಂದ್ರಗಳಾದವು. ದೊಡ್ಡಬಳ್ಳಾಪುರದ ಮುದ್ದುಮೋಹನದಾಸರು, ಭಾಗ್ಯನಿಧಿ ವಿಠಲಾಂಕಿತದ ದೂರಪ್ಪದಾಸರು, ಧಾರಾಪುರದ ತಿಮ್ಮಪ್ಪದಾಸರು, ಚಿತ್ರದುರ್ಗದ ಮಾಧವರಾಯರು, ಮೊದಲಾದವರು ಬೆಂಗಳೂರನ್ನು ಕೇಂದ್ರವಾಗಿಟ್ಟುಕೊಂಡು ಧಾರ್ಮಿಕ ಚಟುವಟಿಕೆಗಳಲ್ಲಿ ನಿರತರಾಗಿದ್ದರು.

ವಿಜಯ ರಾಮಚಂದ್ರವಿಠಲ, ಜಯೇಶವಿಠಲ, ರಂಗೇಶವಿಠಲ, ದಾಸರ ಲಕ್ಷ್ಮೀನಾರಾಯಣರಾಯರು ಮತ್ತು ಕರಿಗಿರೀಶ ಅಂಕಿತದ ವರವಣಿ ರಾಮರಾಯರು ಇವರೆಲ್ಲ ೨೦ ನೆಯ ಶತಮಾನದ ಆದಿಭಾಗದಲ್ಲಿ ದಾಸ ವಾಙ್ಮಯದ ಏಳಿಗೆಗೆ ದುಡಿದವರು. ಈ ಐದು ಮಂದಿ ಹರಿದಾಸರಲ್ಲಿ ಕೆಲವು ಸಮಾನ ಅಂಶಗಳನ್ನು ಗುರುತಿಸಬಹುದು. ಇವರೆಲ್ಲ ಸಮಕಾಲೀನರು. ೨೦ ನೆಯ ಶತಮಾನದ ಆದಿಭಾಗದಲ್ಲಿದ್ದವರು. ಬೆಂಗಳೂರಿನಲ್ಲಿ ಹುಟ್ಟಿದವರು ಅಥವಾ ಬೆಳೆದವರು. ಆಧುನಿಕ ವಿದ್ಯಾಭ್ಯಾಸವನ್ನು ಪದವಿಗಳನ್ನು ಪಡೆದು ಲೌಕಿಕದಲ್ಲಿ ಉತ್ತಮ ಉದ್ಯೋಗದಲ್ಲಿದ್ದವರು. ಸಂಸಾರಿಗಳಾಗಿದ್ದು ಹರಿದಾಸ ದೀಕ್ಷೆಯನ್ನು ಕೈಕೊಂಡು ವೈರಾಗ್ಯದ ಜೀವನ ನಡೆಸಿದವರು. ತಮ್ಮ ಹಿಂದಿನ ಹರಿದಾಸರ ಕೃತಿಗಳನ್ನು ಆಳವಾಗಿ ಅಭ್ಯಾಸಮಾಡಿ ಅದರಿಂದ ಪ್ರಭಾವಿತರಾದವರು. ಕನ್ನಡದ

ಜೊತೆಗೆ ಇಂಗ್ಲೀಷ್, ಸಂಸ್ಕೃತ ಮೊದಲಾದ ಭಾಷೆಗಳ ಪರಿಚಯವಿದ್ದವರು. ಇದರ ಜೊತೆಗೆ ಈ ಐದೂ ಮಂದಿ ಹರಿದಾಸರು ಪರಸ್ಪರ ಪರಿಚಯ ಮತ್ತು ಗೌರವ ಇದ್ದವರು. ಈ ಹಿನ್ನಲೆಯಲ್ಲಿ ಈ ಕೃತಿಗಳನ್ನು ಈ ಸಂಪುಟದಲ್ಲಿ ಅಳವಡಿಸಲಾಗಿದೆ.

## ವಿಜಯ ರಾಮಚಂದ್ರವಿಠಲದಾಸರು (೧೮೮೯-೧೯೭೨)

ಇವರ ಜನ್ಮಸ್ಥಳ ತಮಿಳುನಾಡಿನ ರಾಮನಾಥಪುರ. ಜಮದಗ್ನಿ ಗೋತ್ರದ ವೆಂಕಟರಾಯರು ಮತ್ತು ಬಹಿಣಾಬಾಯಿ ದಂಪತಿಗಳ ಮೂರನೆಯ ಮಗ ರಾಮಚಂದ್ರ. ವೆಂಕಟರಾಯರು ಮೂಲತಃ ಕನ್ನಡಿಗರಾಗಿದ್ದರು. ಉದ್ಯೋಗದ ನಿಮಿತ್ತ ರಾಮನಾಥಪುರದಲ್ಲಿ ನೆಲೆಸಿದರು. ರಾಮಚಂದ್ರ ಬಾಲ್ಯದಲ್ಲೇ ತಂದೆಯನ್ನು ಕಳೆದುಕೊಂಡ. ಅನಂತರ ಅವನ ವಿದ್ಯಾಭ್ಯಾಸ ದೊಡ್ಡಪ್ಪನ ಮನೆಯಲ್ಲಿ ನಡೆಯಿತು. ಮೆಟ್ರಿಕ್ ಪರೀಕ್ಷೆ ತೇರ್ಗಡೆಯಾಗುವ ಹೊತ್ತಿಗೆ ಸಾಕಷ್ಟು ಶಾಸ್ತ್ರಜ್ಞಾನವನ್ನು ರಾಮಚಂದ್ರ ಸಂಪಾದಿಸಿದ್ದ. ನ್ಯಾಯಾಧೀಶರಾಗಿದ್ದು, ಪ್ರಭಾವಶಾಲಿಗಳಾಗಿದ್ದ ಶೇಷಗಿರಿರಾಯರು ರಾಮಚಂದ್ರನಿಗೆ ಮೈಸೂರಿನ ಆಡಳಿತಕ್ಕೆ ಒಳಪಟ್ಟ ಯಳಂದೂರು ಜಹಗೀರಿಯಲ್ಲಿ ಕೆಲಸ ಕೊಡಿಸಿದರು. ಅನಂತರ ಮೀನಾಬಾಯಿ ಎಂಬ ಕನ್ಯೆಯೊಡನೆ ಇವರ ಲಗ್ನವಾಯಿತು. ದೇವತಾರಾಧನೆ, ಹರಿಕಥಾಶ್ರವಣ, ದೇವರನಾಮಗಳನ್ನು ಹೇಳುವುದು ಇವುಗಳಲ್ಲಿ ಮೊದಲಿನಿಂದಲೂ ಆಸಕ್ತನಾಗಿದ್ದ ರಾಮಚಂದ್ರನಿಗೆ ಆಧ್ಯಾತ್ಮಿಕ ವಿಷಯಗಳಲ್ಲಿ ಹೆಚ್ಚು ಆಸಕ್ತಿಯಿತ್ತು. ತಾನು ಗುರುಗಳಿಂದ ಅಂಕಿತ ಉಪದೇಶವನ್ನು ಪಡೆದು ಕೀರ್ತನೆಗಳನ್ನು ರಚಿಸಬೇಕೆಂಬ ಅಪೇಕ್ಷೆಯಿತ್ತು. ಅದರಂತೆಯೇ ಕುಂಭಕೋಣದ ವೆಂಕಟದಾಸರಿಂದ (ಪ್ರಸನ್ನ ವೆಂಕಟವಿಠಲ) 'ವಿಜಯ ರಾಮಚಂದ್ರ ವಿಠಲ' ಎಂಬ ಅಂಕಿತ ಪಡೆದರು. ಇದೇ ಸಂದರ್ಭದಲ್ಲಿ ಮೈಸೂರಿನ ಸರ್ ಅಮೀನ್ ಕಛೇರಿಯಲ್ಲಿ ಶಿರಸ್ತೇದಾರರ ಕೆಲಸಕ್ಕೆ ಬಡ್ತಿ ದೊರೆತು ಮೈಸೂರಿನಲ್ಲಿ ನೆಲೆಸಿದರು.

ಇಭರಾಮಪುರದ ಕೃಷ್ಣಾಚಾರ್ಯರೆಂಬವರು ಈ ಕಾಲದ ಪ್ರಸಿದ್ಧ ವಿದ್ವಾಂಸರು. ಉತ್ತರ ಕರ್ನಾಟಕ ಮತ್ತು ಹಳೆಯ ಮೈಸೂರು ಪ್ರಾಂತ್ಯಗಳಲ್ಲಿ ಇವರು ತ್ರಿಕಾಲಜ್ಞರಾದ ಮಹಾತ್ಮರೆಂದೇ ಪ್ರಸಿದ್ಧರಾಗಿದ್ದರು. ಇಂಥ ಜ್ಞಾನಿಗಳು ಮೈಸೂರಿಗೆ ಆಗಮಿಸಿದಾಗಲೆಲ್ಲ ದಾಸರ ಮನೆಯಲ್ಲಿಯೇ ಬಿಡಾರ ಮಾಡುತ್ತಿದ್ದರು. ಇಂಥ ಜ್ಞಾನಿಗಳ ಸಂಪರ್ಕದಲ್ಲಿ ದಾಸರು ತಮ್ಮ ಆಧ್ಯಾತ್ಮಿಕ ಜೀವನ ರೂಪಿಸಿಕೊಂಡರು. 'ಕಟ್ಟೆಮನೆ' ಎಂದು ಖ್ಯಾತಿಯನ್ನು ಪಡೆದ ಶ್ರೀ ಕೂಸಪ್ಪ ಎಂಬವರ ಮನೆ ಒಂದು ಆಧ್ಯಾತ್ಮಿಕ ಕೇಂದ್ರವೇ ಆಗಿತ್ತು . ಈ ಕಟ್ಟೆ ಮನೆಯಲ್ಲಿ ದಾಸರ ಧ್ಯಾನ, ಪೂಜೆ, ಉಪದೇಶ ಇವುಗಳಿಗೆ ಅಗತ್ಯವಾದ ಪರಿಸರವಿತ್ತು. ಇದೇ ಕಾಲದಲ್ಲಿ ಇವರಿಗೆ ಹಲವಾರು ಮಂದಿ ಶಿಷ್ಯರು ದೊರೆತು ಶಾಸ್ತ್ರಾಧ್ಯಯನ ಮತ್ತು ದಾಸಸಾಹಿತ್ಯ ಪ್ರಚಾರದಲ್ಲಿ ದಾಸರಿಗೆ ನೆರವಾದರು.

ವಿಜಯ ರಾಮಚಂದ್ರವಿಠಲರ ಜೀವನ ಮತ್ತು ಮಹಿಮೆಗಳನ್ನು ಅವರ ಶಿಷ್ಯರಾದ ಜಯೇಶವಿಠಲರು ೨೧೧ ನುಡಿಗಳ ಧೀರ್ಘಕೃತಿಯಲ್ಲಿ ನಿರೂಪಿಸಿದ್ದಾರೆ. ದಾಸರು ಜ್ಞಾನಿಗಳೂ, ಸಿದ್ಧಪುರುಷರೂ, ಆಗಿದ್ದರೆಂಬುದಕ್ಕೆ ಈ ಕೃತಿಯಲ್ಲಿ ಹಲವಾರು ನಿದರ್ಶನಗಳು ದೊರೆಯುತ್ತವೆ.

ದಾಸರು ತಮ್ಮ ೫೩ನೆಯ ವಯಸ್ಸಿನಲ್ಲಿ ವಿಧಿವಶರಾದರು. ಪ್ರಜೋತ್ಪತ್ತಿ ಸಂವತ್ಸರದ ವೈಶಾಖ ಶುದ್ಧ ತದಿಗೆ (೧೮೭೩) ಇವರು ವೈಕುಂಠವಾಸಿಗಳಾದರೆಂದು ಇವರ ಶಿಷ್ಯರಾದ ಗುರುರಾಮಚಂದ್ರವಿಠಲರು ತಿಳಿಸಿದ್ದಾರೆ ಇವರ ಮತ್ತೊಬ್ಬ ಶಿಷ್ಯೆ 'ಬಾಲಕೃಷ್ಣ' ಅಂಕಿತದ ಶ್ರೀರಂಗಮ್ಮ ಎಂಬುವರು ತಮ್ಮ ಗುರುಗಳ ಹಿರಿಮೆಯನ್ನು ವಿವರಿಸುವ ಹಾಡುಗಳನ್ನು ರಚಿಸಿದ್ದಾರೆ. ಕೆಲವು ನುಡಿಗಳು ಹೀಗಿವೆ :

೧. ಉತ್ಕೃಷ್ಟ ಮಹಿಮೆಗಳುಳ್ಳ ಕೃಷ್ಣಾರ್ಯರಂಘ್ರಿಯನು
ಮುಟ್ಟಿ ಭಜಿಸಿದೆನು ನಿರ್ವ್ಯಾಜದಿಂದ
ಇಷ್ಟಾರ್ಥ ಪಡೆದು ಗುರು ಕರುಣಾರ್ಣವದಿ ಮುಳುಗಿ
ಸ್ಪಷ್ಟವಾಗಿ ತಿಳಿದ ತನ್ನ ಬಗೆಯ

೨. ಕಾಮಿನಿಯರೊಡನಿದ್ದು ಕಾಮವನೆ ಜಯಿಸಿದನು
ಹೇಮಲೋಷ್ಟಗಳನು ಸಮನಾಗಿ ತಿಳಿದಾ
ಕಾಮಧೇನುವಿನಂತೆ ಕಾಮಿತಾರ್ಥಗರಿವ
ಈ ಮಹಾತ್ಮರಿಗೆ ಸರಿಯುಂಟೆ ಜಗದಿ

೩. ಅಪರೋಕ್ಷವನೆ ಪಡೆದು ಅಪರಿಮಿತ ಗುಣಪೂರ್ಣ
ರುಕುಮಿಣೀಶನ ಪಾದ ನಿಮಿಷ ಬಿಡದೆ
ಸಕಲ ವಸ್ತುಗಳಲ್ಲಿ ಹರಿಯ ನೋಡುವ ಸುಖದಿ
ನಿಖಿಲ ಕರ್ಮಗಳ ತ್ಯಾಗವ ಮಾಡಿದ

ದಾಸರ ಆಧ್ಯಾತ್ಮಿಕ ಜೀವನದ ಸ್ವರೂಪವನ್ನು ಈ ನುಡಿಗಳು ಸಮರ್ಥವಾಗಿ ಚಿತ್ರಿಸುತ್ತವೆ.

**ಕೃತಿಗಳು**

ವಿಜಯ ರಾಮಚಂದ್ರವಿಠಲ ಅಂಕಿತದಲ್ಲಿ ದೊರೆಯುವ ಕೀರ್ತನೆಗಳು ಸುಮಾರು ೪೦. ಇವುಗಳಲ್ಲಿ ದೇವರ ಸ್ತೋತ್ರಗಳು, ವೈರಾಗ್ಯ ಬೋಧಕ ಪದಗಳೇ ಹೆಚ್ಚು. ಸತಿ ಸುತರ ಹಿತಕ್ಕಾಗಿ ಅತಿ ನೀಚ ವೃತ್ತಿಗಳನ್ನು ನಡೆಸಿ ಪತಿತನಾದದ್ದು, ಅರಿಷಡ್ವರ್ಗಗಳ ಉಪಟಳವನ್ನು ಗೆಲ್ಲಲಾರದೆ ಕಳವಳಿಸಿದ್ದು, ವಿಷಯಗಳ ದಾಸನಾಗಿ ಪಶುವಿನಂತೆ ನಡೆದುಕೊಂಡದ್ದು, ಹೀಗೆ ಸಂಸಾರ ದಾವಾಗ್ನಿಯಲ್ಲಿ ಸುಟ್ಟು ಬೇಯುತ್ತಿರುವವರಿಗೆ 'ನಿನ್ನ ನಾಮಾಮೃತವೆಂಬ ಮಳೆಗರೆದು ಹರಿಸಿ ಪೊರೆಯಯ್ಯ' ಎಂದು ಪ್ರಾರ್ಥಿಸುತ್ತಾರೆ.

'ಜ್ಞಾನ ಭಕ್ತಿ ವೈರಾಗ್ಯವನು ಅನುವಾಗಿ ಕೈಗೊಳ್ಳುವುದೆ ಮಾನ
ಅನ್ಯಾಧೀನವೆನ್ನದೆಂಬುದೆ ಲಜ್ಜ
ಅನುಭವ ಜ್ಞಾನಿಗಳ ಸಹವಾಸ ಸ್ನಾನ, ಸಚ್ಛಾಸ್ತ್ರಾಲಾಪ
ನಾನು ನನ್ನದು ಬಿಡುವುದೆ ತ್ಯಾಗ– ಇದೆ ಯೋಗ'

ದಾಸರು ಮಧುರ ಭಾವದ ಹಲವಾರು ಕೃತಿಗಳನ್ನು ರಚಿಸಿದ್ದಾರೆ. ಗೋಪಿಯರು ಕೃಷ್ಣನನ್ನು ಕಾಣಲು ವ್ಯಕ್ತಪಡಿಸುವ ಹಂಬಲ, ಕೃಷ್ಣನಿಗೆ ನೀಡುವ ಆಹ್ವಾನ, ಅವರ ರಸಿಕ ಹೃದಯದ ವಿರಹ, ಇವುಗಳನ್ನು ನಿರೂಪಿಸಿದ್ದಾರೆ. ಕೃಷ್ಣನ ಅಗಲಿಕೆಯನ್ನು ತಾಳಲಾರದೆ ಅವನನ್ನು ಮನಮುಟ್ಟಿ ಭಜಿಸಿವುದರಲ್ಲಿ ಗೋಪಿಯರು ತಮ್ಮ ವಿರಹವನ್ನು ಉಪಶಮನ ಮಾಡಿಕೊಳ್ಳುತ್ತಾರೆ. ಕೃಷ್ಣನ ಆಗಮನವನ್ನು ನಿರೀಕ್ಷಿಸುತ್ತ ಅನ್ಯವಿಷಯಗಳಲ್ಲಿ ಆಸಕ್ತಿ ಕಳೆದುಕೊಂಡ ಹೆಣ್ಣೊಬ್ಬಳ ವೈರಾಗ್ಯ ಹೀಗಿದೆ :

೧. ಮುಟ್ಟಳು ಅನ್ನಾಹಾರವನು
ಬಿಟ್ಟಳು ಇಷ್ಟ ಪದಾರ್ಥವೆಲ್ಲ

೨. ಇಡಳು ಕನಕಾಭರಣಗಳು
ತೊಡಳು ವರವಸ್ತ್ರಗಳು
ಬಡವಾಗಿ ನಡು ಬಳುಕುತಿಹಳು
ಒಡೆಯ ನೀ ಬಾರದಿರಲು ಪ್ರಾಣ
ಬಿಡುವಳು ನಿಶ್ಚಯವೆಂದು

ಹರಿದಾಸ ಸಂಪ್ರದಾಯವನ್ನು ಅನುಸರಿಸಿ ರಚಿತವಾಗಿರುವ ಲಕ್ಷ್ಮಿ, ವಾಯು, ರುದ್ರ, ಗಂಗೆ, ಮತ್ತು ಗುರುಸ್ತುತಿಗಳಲ್ಲಿ ಸಾಂಪ್ರಾದಾಯಿಕ ನಿಷ್ಠೆಯನ್ನು ಪ್ರತಿಪಾದಿಸಿದ್ದಾರೆ. ಇವರ ರಚನೆಗಳಲ್ಲಿ ಗೇಯಾಂಶ ಕಡಿಮೆ. ಭಾಷೆಯು ಸುಲಲಿತವಾಗಿಲ್ಲ. ಒಟ್ಟಿನಲ್ಲಿ ಪ್ರೌಢವಾದದ್ದು. ಹಿಂದಿನ ಹರಿದಾಸರ ಕೃತಿಗಳಲ್ಲಿ ಹೇಳಿರುವುದಕ್ಕಿಂತ ಹೆಚ್ಚಿನದೇನೂ ಕಾಣದು. ಆದರೂ ಪಾಶ್ಚಾತ್ಯ ಪ್ರಭಾವ ಮತ್ತು ಆಧುನಿಕತೆಗಳ ಆಕರ್ಷಣೆಗೆ ಜನ ಒಳಗಾಗಿದ್ದ ಕಾಲದಲ್ಲಿ ಭಕ್ತಿಪಂಥವನ್ನು ಸಂಘಟಿಸಿದ ಸಾಧನೆ ದಾಸರದು. ಹರಿದಾಸರಾಗಿ ಇವರು ಮಾಡಿದ ಸಾಧನೆಗಿಂತ, ತತ್ವವೇತ್ತರಾಗಿ, ಭಕ್ತಿಪಂಥದ ಅನುಯಾಯಿಗಳಿಗೆ ಮಾರ್ಗದರ್ಶಕರಾಗಿ ಮಾಡಿದ ಧಾರ್ಮಿಕ ಸಂಘಟನೆ ದೊಡ್ಡದು.

## ಜಯೇಶವಿಠಲರು (೧೮೫೦-೧೯೩೨)

ಇಪ್ಪತ್ತನೆಯ ಶತಮಾನದ ಹರಿದಾಸರಲ್ಲಿ ಉನ್ನತ ಮಟ್ಟದ ಚಿಂತಕರೆಂದು ಹೆಸರಾದವರು ವಿಜಯ ರಾಮಚಂದ್ರವಿಠಲರ ಶಿಷ್ಯರಾದ ಜಯೇಶವಿಠಲರು. ಲೌಕಿಕವಿದ್ಯೆ, ಅಧಿಕಾರ, ಅಪಾರವಾದ ಐಶ್ವರ್ಯ ಇವೆಲ್ಲದರ ನಡುವೆ ಇದ್ದರೂ ಜ್ಞಾನಾರ್ಜನೆ, ತತ್ವಚಿಂತನೆ, ಇವುಗಳಿಗೆ ಪ್ರಾಮುಖ್ಯತೆ ನೀಡಿ ಆಧ್ಯಾತ್ಮಿಕ ಉನ್ನತಿಯನ್ನು ಸಾಧಿಸಿದವರು ಇವರು. ಇವರ ಜನ್ಮಸ್ಥಳ ಬೆಂಗಳೂರು.

ಮಹಾರಾಷ್ಟ್ರದ ಪೇಶ್ವೆಯವರ ಆಡಳಿತ ಕಾಲದಲ್ಲಿ ಸೈನ್ಯದ ಅಧಿಕಾರದಲ್ಲಿದ್ದ ಅನೇಕ ಅಧಿಕಾರಿಗಳು ಬ್ರಿಟಿಷರ ಆಡಳಿತ ಕಾಲದಲ್ಲಿ ಬೆಂಗಳೂರಿನಲ್ಲಿ ಬಂದು ನೆಲೆಸಿದರು. ಈ ಅಧಿಕಾರಿಗಳಿಗೆ ಮೀರ್ ಅಮೀರ್ ಎಂಬ ಹೆಸರಿತ್ತು. ಈ ಮೀರ್ ಅಮೀತ್ ವಂಶೀಯರಲ್ಲಿ ಒಬ್ಬರಾದ ರಾಮರಾಯರಿಗೆ ಇಬ್ಬರು ಪತ್ನಿಯರು. ಮೊದಲ ಪತ್ನಿಗೆ ಒಬ್ಬ ಹೆಣ್ಣುಮಗಳು ಇದ್ದಳು. ಅವಳ ಹೆಸರು ಜೀವಣ್ಣಿಬಾಯಿ. ಮಂಗಳೂರಿನ ಹತ್ತಿರದ ಕೊಡೆಯಾಲದ ಜಹಗೀರದಾರನ ಮಗನೊಂದಿಗೆ ಈಕೆಯ ವಿವಾಹವಾಗಿತ್ತು. ಎರಡನೆಯ ಪತ್ನಿ ರಾಧಾಬಾಯಿಗೆ ಶೇಷಗಿರಿ, ಶ್ರೀನಿವಾಸ, ವೆಂಕಟರಾಯ ಎಂಬ ಮೂರು ಮಕ್ಕಳು. ಈ ವೆಂಕಟರಾಯರೇ ಮುಂದೆ ಜಯೇಶವಿಠಲರೆಂದು ಖ್ಯಾತರಾದ ಹರಿದಾಸರು.

ವೆಂಕಟರಾಯರ ಅಕ್ಕ ಜೀವಣ್ಣಿಬಾಯಿಯ ಪತಿ ಸೈನ್ಯದಲ್ಲಿ ಕ್ಯಾಪ್ಟನ್ ಆಗಿದ್ದು, ಯೌವ್ವನಾವಸ್ಥೆಯಲ್ಲೇ ನಿಧನ ಹೊಂದಿದ. ಲಕ್ಷಾಂತರ ರೂಪಾಯಿಗಳ ಜಹಗೀರಿ, ಆಸ್ತಿಯನ್ನು ಉಳಿಸಿಕೊಳ್ಳುವುದು ಜೀವಣ್ಣಿಬಾಯಿಗೆ ಕಷ್ಟವಾಗಿತ್ತು.

ಹಿರಿಯರ ಸಲಹೆಯಂತೆ ಜೀವಣ್ಣಿಬಾಯಿ ವೆಂಕಟರಾಯರನ್ನು ದತ್ತು ತೆಗೆದು ಕೊಂಡು ಆತನ ಉಪನಯನವನ್ನು ತನ್ನ ನೇತೃತ್ವದಲ್ಲಿ ನೆರವೇರಿಸಿದಳು. ಈ ದತ್ತಕ ನ್ಯಾಯಬದ್ಧವಲ್ಲವೆಂದು ದಾಯಾದಿಗಳು ಕೋರ್ಟಿನಲ್ಲಿ ಖಟ್ಲೆ ಹೂಡಿದರು. ಈ ಖಟ್ಲೆ ಹೈಕೋರ್ಟಿನಲ್ಲೂ ಇತ್ಯರ್ಥವಾಗದೆ ಬ್ರಿಟಿಷ್ ಪಾರ್ಲಿಮೆಂಟ್‌ವರೆಗೂ

ಹೋಯಿತು. ಪಾರ್ಲಿಮೆಂಟ್ ಕೋರ್ಟುಗಳ ತೀರ್ಪುಗಳನ್ನು ರದ್ದುಗೊಳಿಸಿ ದತ್ತಕವನ್ನು ಸಕ್ರಮಗೊಳಿಸಿದ್ದರಿಂದ ಆ ಕಾಲಕ್ಕೆ ಲಕ್ಷಾಂತರ ರೂಪಾಯಿಗಳ ಜಹಗೀರಿ ಜೀವಣ್ಣಿಬಾಯಿಯ ಮತ್ತು ವೆಂಕಟರಾಯರ ವಶವಾಯಿತು. ಹೀಗೆ ಬಾಲ್ಯದಲ್ಲೇ ಶ್ರೀಮಂತಿಕೆಯ ನಡುವೆ ಬೆಳೆದವರು ವೆಂಕಟರಾಯರು.

ವೆಂಕಟರಾಯರ ಬಾಲ್ಯ ವಿದ್ಯಾಭ್ಯಾಸ ಮಂಗಳೂರಿನಲ್ಲಿ ನಡೆಯಿತು. ಹೈಸ್ಕೂಲು ವಿದ್ಯಾಭ್ಯಾಸ ಮತ್ತು ಮೆಟ್ರಿಕ್ ಪರೀಕ್ಷೆ ಓದುವುದಕ್ಕೆ ಬೆಂಗಳೂರಿನಲ್ಲಿ ವ್ಯವಸ್ಥೆ ಮಾಡಲಾಯಿತು. ಇದಕ್ಕಾಗಿ ಒಂದು ಮನೆಯನ್ನೇ ಕೊಂಡುಕೊಂಡು ಸಿಬ್ಬಂದಿಯನ್ನೂ ನೇಮಿಸಿ ಮಗನ ವಿದ್ಯಾಭ್ಯಾಸಕ್ಕೆ ಜೀವಣ್ಣಿಬಾಯಿ ಅನುಕೂಲಗಳನ್ನು ಕಲ್ಪಿಸಿದಳು. ಮೇಧಾವಿಗಳಾದ ವೆಂಕಟರಾಯರು ೧೮೬೮ರ ಮೆಟ್ರಿಕ್ ಪರೀಕ್ಷೆಯಲ್ಲಿ ಮೈಸೂರು ದೇಶಕ್ಕೇ ಮೊದಲನೆಯವರಾಗಿ ಉತ್ತೀರ್ಣರಾದರು. ಮುಂದೆ ೧೮೭೯ರಲ್ಲಿ ಎಫ್.ಎ. ಪರೀಕ್ಷೆಯಲ್ಲಿ ಉನ್ನತ ದರ್ಜೆಯಲ್ಲಿ ತೇರ್ಗಡೆಯಾದರು. ಅನಂತರ ಮದರಾಸಿನ ಪ್ರೆಸಿಡೆನ್ಸಿ ಕಾಲೇಜಿನಿಂದ ೧೮೭೦ರಲ್ಲಿ ಬಿ.ಎ. ಪದವಿ ಪಡೆದರು.

ಯುವಕರಾದ ವೆಂಕಟರಾಯರು ಜಹಗೀರ್‌ದಾರರಿಗೆ ತಕ್ಕ ಬೆಲೆಬಾಳುವ ಉಡುಪು ಮತ್ತು ಆಭರಣಗಳನ್ನು ಧರಿಸಿ ಶ್ರೀಮಂತ ಜೀವನ ನಡೆಸಿದರು. ಅವರಿಗೆ ಒಬ್ಬ ಅಂಗರಕ್ಷಕನೂ ಇದ್ದ. ತಿರುವಾಂಕೂರಿನ ದಿವಾನರಾಗಿದ್ದ ಸರ್. ಟಿ. ಮಾಧವರಾಯರ ತಮ್ಮ ಹರಿರಾಯರೆಂಬುವರು ಮದರಾಸಿನಲ್ಲಿ ಉನ್ನತ ಹುದ್ದೆಯಲ್ಲಿದ್ದರು. ಅವರ ಮಗಳು ರಾಧಾಬಾಯಿಯ ಜೊತೆ ವೆಂಕಟರಾಯರ ವಿವಾಹವಾಯಿತು.

ಪದವೀಧರರಾದ ಮೇಲೆ ವೆಂಕಟರಾಯರು ನಾಮಕಲ್ ನರಸಿಂಹನ ದರ್ಶನಕ್ಕೆ ಹೊರಟು ಒಂದು ವಾರ ಅಲ್ಲಿ ಕಳೆದರು. ಅದೇ ವೇಳೆಯಲ್ಲಿ ಅಲ್ಲಿಗೆ ಬಂದಿದ್ದ ಮೈಸೂರಿನ ಅನೇಕ ಭಕ್ತರ ಪರಿಚಯವಾಯಿತು. ಇವರೆಲ್ಲ ವಿಜಯ ರಾಮಚಂದ್ರವಿಠಲರ ಶಿಷ್ಯರು. ಇವರಿಂದ ಗುರುಗಳ ಮಹಿಮೆಯನ್ನು ಕೇಳಿ

ವೆಂಕಟರಾಯರು ಮೈಸೂರಿನಲ್ಲಿ ಗುರುಗಳನ್ನು ಕಾಣಲು ಪ್ರಯಾಣ ಬೆಳೆಸಿದರು. ಹಲವಾರು ದಿನ ವಿಜಯ ರಾಮಚಂದ್ರರ ಗುರುಕುಲ ವಾಸದಲ್ಲಿ ಜ್ಞಾನ ಸಂಪಾದನೆ ಮಾಡಿದರು. ವಿವಾಹಿತನಾದ ಮಗ ತಾರುಣ್ಯದಲ್ಲೇ ವೈರಾಗ್ಯ ಪರನಾದುದನ್ನು ತಿಳಿದ ಜೀವಣ್ಣಿಬಾಯಿ ಮೈಸೂರಿನಲ್ಲೇ ಮನೆಯನ್ನು ಮಾಡಿ ಸೊಸೆಯನ್ನು ಕರೆಸಿಕೊಂಡಳು. ಗುರುಗಳ ಉಪದೇಶದಂತೆ ವೆಂಕಟರಾಯರು ತಾಯಿಯ ಮನೆಗೆ ಹಿಂತಿರುಗಿದರು. ವೆಂಕಟರಾಯರು ಗುರುಕುಲವಾಸದಲ್ಲಿ ಮಾಡಿದ ಶುಶ್ರೂಷೆಗೆ ಸಂತೋಷಗೊಂಡ ಗುರುಗಳು ಜಯೇಶವಿಠಲ ಎಂಬ ಅಂಕಿತವನ್ನು ನೀಡಿದರು. ಅವರು ಅಂಕಿತ ಪಡೆದಾಗ ಅವರ ವಯಸ್ಸು ಕೇವಲ ೨೩. ಈ ವಯಸ್ಸಿನಲ್ಲೇ ಭಕ್ತಿ, ನಿಷ್ಠೆ, ಅನುಷ್ಠಾನ, ವೈರಾಗ್ಯ ಭಾವನೆಗಳನ್ನು ಬೆಳೆಸಿಕೊಂಡಿದ್ದರು. ಅವರ ಐಶ್ವರ್ಯ ಮತ್ತು ಲೌಕಿಕ ವಿದ್ಯಾಭ್ಯಾಸದ ಪದವಿಗಳು ವೈರಾಗ್ಯ ಭಾವನೆಗೆ ಅಡ್ಡಿಯಾಗಲಿಲ್ಲ.

೧೮೭೫ರಲ್ಲಿ ವೆಂಕಟರಾಯರಿಗೆ ಸರ್ಕಾರಿ ಹುದ್ದೆ ದೊರೆಯಿತು. ಪ್ರೊಬೇಷನರಿ ಅಸಿಸ್ಟೆಂಟ್ ಕಮೀಷನರ್‌ಗೆ ಸಮನಾದ ಅಟ್ಯಾಚಿ ಹುದ್ದೆಯು ದೊರೆಯಿತು. ಸಿರಿವಂತ ರೈತರು ಸಂಗ್ರಹಿಸಿ ಇಟ್ಟಿದ್ದ ಧಾನ್ಯವನ್ನು ಸರ್ಕಾರ ನಿಗದಿಪಡಿಸಿದ ಬೆಲೆ ನೀಡಿ ವಶಪಡಿಸಿಕೊಂಡು ಅದನ್ನು ಬಡವರಿಗೆ ಹಂಚುವುದು ಅಟ್ಯಾಚಿ ಅಧಿಕಾರಿಗಳ ಕೆಲಸ. ಈ ಹುದ್ದೆಯಲ್ಲಿ ಎಷ್ಟು ಜನಪ್ರಿಯರಾದರೆಂದರೆ ಜನರ ಬಾಯಲ್ಲಿ ಅಟ್ಟಾಜಿ ವೆಂಕಟರಾಯರೆಂದೇ ಪ್ರಸಿದ್ಧರಾದರು. ಅಟ್ಯಾಚಿ ಎಂಬ ಇಂಗ್ಲೀಷ್ ಪದದ ರೂಪಾಂತರವೇ ಅಟ್ಟಾಜಿ. ೧೮೮೨ರಲ್ಲಿ ಅಟ್ಯಾಚಿ ಹುದ್ದೆಯಲ್ಲಿದ್ದವರನ್ನೆಲ್ಲ ಅಮಲ್ದಾರರ ದರ್ಜೆಗೆ ವರ್ಗಾಯಿಸಿದರು. ಒಂದು ವರ್ಷ ಕಾಲ ವೆಂಕಟರಾಯರು ರಜೆ ಹಾಕಿದರು. ಶ್ರೀ ಶೇಷಾದ್ರಿ ಅಯ್ಯರ್ ಅವರು ದಿವಾನರಾಗಿ ಬಂದಾಗ ವೆಂಕಟರಾಯರಿಗೆ ಮತ್ತೆ ಅಸಿಸ್ಟೆಂಟ್ ಕಮೀಷನರ್ ಹುದ್ದೆ ದೊರೆಯಿತು. ತುಮಕೂರು, ಸಕಲೇಶಪುರ, ಚಿಕ್ಕಬಳ್ಳಾಪುರ ಈ ಸ್ಥಳಗಳಲ್ಲಿ ಅಸಿಸ್ಟೆಂಟ್ ಕಮೀಷನರ್ ಆಗಿ ಅನಂತರ ಡೆಪ್ಯುಟಿ ಕಮೀಷನರ್ ಆದರು. ಶಿವಮೊಗ್ಗ, ಕಡೂರು, ತುಮಕೂರು ಮತ್ತು ಮೈಸೂರು ಜಿಲ್ಲೆಗಳಲ್ಲಿ ಡೆಪ್ಯುಟಿ

ಕಮೀಷನರ್ ಆಗಿ ಕಾರ್ಯ ನಿರ್ವಹಿಸಿದರು. ಮೈಸೂರಿನ ಮ್ಯಾಜಿಸ್ಟ್ರೇಟರಾಗಿ ೧೯೦೭ರಲ್ಲಿ ನಿವೃತ್ತರಾದರು.

ವೆಂಕಟರಾಯರಿಗೆ ಮೂರು ಮಂದಿ ಪತ್ನಿಯರು. ಮೊದಲ ಪತ್ನಿ ರಾಧಾಬಾಯಿಗೆ ಮೂರು ಮಂದಿ ಮಕ್ಕಳು. ಮೊದಲ ಪತ್ನಿ ತೀರಿಕೊಂಡ ಮೇಲೆ ೧೮೮೨ರಲ್ಲಿ ವೆಂಕಟರಾಯರು ಎರಡನೆಯ ಮದುವೆಯಾದರು. ಎರಡನೆಯ ಪತ್ನಿಗೆ ಮಕ್ಕಳಿರಲಿಲ್ಲ. ಆಕೆಯೂ ಚಿಕ್ಕ ವಯಸ್ಸಿನಲ್ಲಿಯೇ ತೀರಿಕೊಂಡಳು. ಅನಂತರ ಕುಂಭಕೋಣದ ದೇವಾಜಿರಾಯರ ಹಿರಿಯ ಮಗಳು ಕಮಲಾಬಾಯಿಯವರ ಜೊತೆ ವೆಂಕಟರಾಯರ ಲಗ್ನವಾಯಿತು. ರಾಯರ ಆಧ್ಯಾತ್ಮಿಕ ಸಾಧನೆಗೆ ಲೌಕಿಕ ವ್ಯವಹಾರಗಳಿಗೆ ಎಲ್ಲ ರೀತಿಯಲ್ಲೂ ಸಹಕಾರ ನೀಡುತ್ತಿದ್ದ ಕಮಲಾಬಾಯಿ ಪತಿಯಂತೆಯೇ ಧಾರ್ಮಿಕ ಮನೋಭಾವದವರೂ ಚಿಂತಕರೂ ಆಗಿದ್ದರು. ತಮ್ಮ ಪತಿಯಿಂದಲೇ 'ಗುರು ಜಯೇಶವಿಠಲ ' ಎಂಬ ಅಂಕಿತ ಪಡೆದು ಕೀರ್ತನೆಗಳನ್ನು ರಚಿಸಿದರು (ನೋಡಿ ಅನುಬಂಧ-೪)

ಜಯೇಶವಿಠಲರು ತಾವು ಅಧಿಕಾರದಲ್ಲಿದ್ದಾಗ ಮತ್ತು ನಿವೃತ್ತರಾದ ಮೇಲೆ ಮೈಸೂರಿನ 'ಕಟ್ಟೆಮನೆ' ಎಂಬ ಸ್ಥಳವನ್ನು ತಮ್ಮ ಆಧ್ಯಾತ್ಮಿಕ ಸಾಧನೆಯ ಕೇಂದ್ರವಾಗಿಸಿಕೊಂಡಿದ್ದರು. ಹರಿಗುರುಗಳ ಸೇವೆ, ಜ್ಞಾನಿಗಳ ಸಂಪರ್ಕ, ಶಿಷ್ಯರ ಜೊತೆ ಚರ್ಚೆ, ಬೋಧನೆ ಇವೆಲ್ಲ ನಡೆಯುತ್ತಿದ್ದ ಕಟ್ಟೆಮನೆ ಒಂದು ಹರಿದಾಸ ಕೇಂದ್ರವೇ ಆಗಿತ್ತು. ಕಟ್ಟೆಮನೆಯ ಭಕ್ತವರ್ಗದವರೊಂದಿಗೆ ತೀರ್ಥಕ್ಷೇತ್ರಗಳ ಸಂದರ್ಶನವನ್ನು ಜಯೇಶವಿಠಲರು ಹಲವಾರು ಬಾರಿ ಮಾಡಿದ್ದರು. ಹೊಳವನಹಳ್ಳಿ ನರಸಿಂಗರಾಯರು (ಪ್ರಸನ್ನವಿಠಲ), ಎಸ್.ನಾರಾಯಣರಾಯರು (ಪರಾತ್ಪರವಿಠಲ), ವೆಂಕಟರಮಣಾಚಾರ್ಯರು (ಕರಿವರದವಿಠಲ), ಶ್ರೀನಿವಾಸರಾಯರು (ಯದುಪತಿವಿಠಲ) ಅರ್ಚಕ ರಾಮರಾಯರು (ರಾಮವಿಠಲ), ಮುರಾರಿರಾಯರು (ಸರ್ವಜ್ಞವಿಠಲ) ಹೀಗೆ ಜಯೇಶವಿಠಲರು ಹಲವು ಶಿಷ್ಯರಿಗೆ ದಾಸದೀಕ್ಷೆ ನೀಡಿದ್ದರು.

ಎಂಭತ್ತೆರಡು ವರ್ಷಗಳ ತುಂಬು ಜೀವನವನ್ನು ಆಧ್ಯಾತ್ಮಿಕ ಪರಿಸರದಲ್ಲೇ ಕಳೆದ ಜಯೇಶವಿಠಲರು ಆಂಗೀರಸ ಸಂವತ್ಸರದ ವೈಶಾಖ ಬಹುಳ ದ್ವಿತೀಯ (೨೧-೫-೧೯೭೩) ಶನಿವಾರ ಹರಿಪದವನ್ನು ಸೇರಿದರು. ಸ್ವಾತಂತ್ರ್ಯಪೂರ್ವದ ಹಳೆಯ ಮೈಸೂರು ಪ್ರಾಂತ್ಯದಲ್ಲಿ ಒಂದು ಆಧ್ಯಾತ್ಮಿಕ ಶಕ್ತಿಯಾಗಿ ಚಿಂತಕರಿಗೆ ಮಾರ್ಗದರ್ಶನ ಮಾಡಿದವರು ಜಯೇಶವಿಠಲರು.

ಅದೇ ಕಾಲದಲ್ಲಿ ಹರಿದಾಸ ಮಾರ್ಗದಲ್ಲಿ ಪ್ರಸಿದ್ಧರಾಗಿದ್ದ ತಂದೆ ಮುದ್ದು ಮೋಹನದಾಸರು, ಗೋವಿಂದದಾಸರು, ಜಯೇಶವಿಠಲರ ಆಧ್ಯಾತ್ಮಿಕ ಬಂಧುಗಳಾಗಿದ್ದರು. ರೋಗರುಜಿನಗಳ ಉಪಟಳ, ಬರಗಾಲ, ಯುದ್ಧಗಳ ಭೀತಿ ಇವುಗಳ ನಡುವೆ ಬದುಕುತ್ತಿದ್ದ ಜನರ ಹತಾಶ ಭಾವನೆಗಳನ್ನು ದೂರಮಾಡಿ ಅವರನ್ನು ಆಧ್ಯಾತ್ಮಪರರಾಗುವಂತೆ ಮಾಡಿದ ಈ ಮೂವ್ವರ ಕಾರ್ಯ ಉಲ್ಲೇಖನೀಯ.

ಜಯೇಶವಿಠಲರ ಕೃತಿಗಳು ಪೂರ್ಣವಾಗಿ ದೊರೆತಿಲ್ಲ. ತಮ್ಮ ಗುರುಗಳು ಆತ್ಮಸಂತೋಷಕ್ಕಾಗಿ ಮತ್ತು ಚಿಂತನೆಗಾಗಿ ರಚಿಸಿದ ಕೃತಿಗಳು ಅವರ ಶಿಷ್ಯವರ್ಗಕ್ಕೆ ಮಾತ್ರ ಸೀಮಿತವಾಗಿರಬೇಕು ಎಂದು ಭಾವುಕರಾಗಿ ಹೇಳುವ ದಾಸರ ಅಭಿಮಾನಿಗಳು ಅವರ ಕೃತಿಗಳನ್ನು ಪ್ರಕಟಿಸಿಲ್ಲ. ಆದರೂ ಬಿಡಿಬಿಡಿಯಾಗಿ ಜಯೇಶವಿಠಲರ ಕೀರ್ತನೆಗಳನ್ನು ಹಾಡುವವರು ಅನೇಕ ಮಂದಿ ಇದ್ದಾರೆ.

ಜಯೇಶವಿಠಲರ ಕೀರ್ತನೆಗಳು ಪ್ರೌಢವೂ ಅರ್ಥಗರ್ಭಿತವೂ ಆದ ಬಿಗಿಯಾದ ಬಂಧಗಳು. ವಿಜಯದಾಸರ ಸುಳಾದಿಗಳು, ಜಗನ್ನಾಥದಾಸರ ಹರಿಕಥಾಮೃತಸಾರ, ತತ್ವಸುವ್ವಾಲಿ, ಮೊದಲಾದ ಗ್ರಂಥಗಳಲ್ಲಿ ಪ್ರತಿಪಾದಿತವಾದ ತಾತ್ವಿಕ ವಿಷಯಗಳ ಅಧ್ಯಯನದಿಂದ ರೂಪುಗೊಂಡ ಗಂಭೀರ ಚಿಂತನೆಗಳು ಇಲ್ಲಿ ಕೀರ್ತನೆಗಳ ರೂಪ ತಳೆದಿದೆ. ತತ್ವ ಚಿಂತನೆಯೇ ಈ ಕೃತಿಗಳ ಪ್ರಮುಖ ವಸ್ತು ಹಾಸ್ಯ, ಸಮಾಜ ವಿಡಂಬನೆ, ನೀತಿ ಬೋಧನೆ ಮೊದಲಾದ ಲೌಕಿಕ ವಿಷಯಗಳಿಗೆ ಇಲ್ಲಿ ಆಸ್ಪದವೇ ಇಲ್ಲ. ತತ್ವಚಿಂತನೆಯನ್ನು ತೂಕ ತಪ್ಪದಂತೆ ಗಂಭೀರವಾಗಿ ನಿರ್ವಹಿಸುವುದರಲ್ಲಿ ದಾಸರಿಗಿದ್ದ ಅಪಾರ ಶ್ರದ್ಧೆ ಕೀರ್ತನೆಗಳಲ್ಲಿ ವ್ಯಕ್ತವಾಗಿದೆ.

ದೇಹ ಮತ್ತು ಮನಸ್ಸುಗಳು ಲೌಕಿಕ ವಿಷಯಗಳನ್ನು ಬಯಸಿ ಅವನ್ನು ಪಡೆಯಲು ಸದಾ ಹಂಬಲಿಸುತ್ತವೆ. ಆದರೆ ಇದರಿಂದ ಕೊನೆಗೆ ದೊರೆಯುವುದು ದುಃಖವೇ ಹೊರತು ಸುಖವಲ್ಲ. ಈ ಆಸೆಗಳು ಮನುಷ್ಯನ ನಿರ್ಧಾರಗಳನ್ನು ಮೆಟ್ಟಿ ಅವನನ್ನು ನಿಯಂತ್ರಿಸಲು ಪ್ರಯತ್ನಿಸುತ್ತವೆ. ದೈವಿಕ ವಿಷಯಗಳಲ್ಲಿ ಆಸಕ್ತಿ ತೋರಲು ಅವಕಾಶವನ್ನೇ ಕೊಡುವುದಿಲ್ಲ. ಮನುಷ್ಯನ 'ಹೀನಯೋಗ್ಯತೆ'ಯ ಸ್ವರೂಪವೇ ಹೀಗೆ :

೧. ಮನಕರಣಗಳು ಎನ್ನ ತಮ್ಮ ಸೆರೆಯಲಿ ಇಟ್ಟು
ಘನಯಾತನೆಯಪಡಿಸಿ ಮೂರ್ಛೆಗೊಳಿಸಿ
ಕ್ಷಣ ಬಿಡದೆ ದಣಿಸುವುದು ಮೊರೆಯಿಡಲು ಮುಖವಿಲ್ಲ (ಕೀ. ೮೭)

೨. ಎನ್ನ ಹೀನತೆ ನೋಡಿ ಘನ್ನ ಭಯಗೊಂಡಿಹೆನೊ (ಕೀ. ೮೮)

೩. ಲಜ್ಜೆಯಾಗುತಿದೆ ಎನ್ನ ದೋಷರಾಶಿಗಳೊರೆಯೆ (ಕೀ. ೯೪)

೪. ಕರ್ಮದಾಧೀನದಲಿ ಅಹಂ ಮಮಕರ ಪೊಂದಿ
ದುಮ್ಮನವ ಬೆಳೆಸಿದೆನೊ ಅವಶನಾಗಿ (ಕೀ. ೭೫)

ಈ ಹೀನ ಯೋಗ್ಯತೆಯಿಂದ ಮನಶ್ಶಾಂತಿಯನ್ನು ಕಳೆದುಕೊಂಡು ಜೀವ ತಲ್ಲಣಿಸುತ್ತದೆ. 'ಯಾತನೆಯಲಿ ಹಣ್ಣಾದೆ , ಪಾತಕಕೆ ಕೊನೆಗಾಣೆ, ದೋಷಪುಂಜನು ನಾನು, ಬನ್ನಬಟ್ಟೆನೊ ಬಹಳ ಬಲು ಹೀನ ವೃತ್ತಿಯಲಿ, ಹುಸಿ ನಂಬಿ ತೆರಳುತಿಹೆ ಹರುಷ ಕಾಣದೆ ನಿಜದೆ, ಕಾತರವ ಪಡುತಿಹೆನೊ ಅಸುರ ಕರ್ಮದಿ ಸಿಕ್ಕಿ, ತಾಪುಸದಿ ಸಿಗಿ ಬಿದ್ದು ಪಾಮರ ನಾನಾದೆ, ಮನೋವಿಕಾರಗಳೆಂಬ ದುಃಖಾರ್ಣವದಿ ಬಿದ್ದು ಅನುಮಾನ ಮಾಡಿದೆನೊ'–ಹೀಗೆ ಜಯೇಶವಿಠಲರು ಹೆಜ್ಜೆಹೆಜ್ಜೆಗೂ ಆತ್ಮಶೋಧನೆ ಮಾಡಿಕೊಂಡು ತಪ್ಪುಗಳನ್ನು ತಿದ್ದಿಕೊಳ್ಳಲು ಪ್ರಯತ್ನಿಸುತ್ತಾರೆ. ನಾನು ನನ್ನದು ಎಂಬ ಅಜ್ಞಾನವೇ ಎಲ್ಲ ಯಾತನೆಗಳ ಮೂಲ. ಈ ಅಜ್ಞಾನ ಮನುಷ್ಯನನ್ನು ವಿಷಯ ಸುಖವೆಂಬ ದುರ್ಗುಣದ ಪಂಕದಲ್ಲಿ ಕೆಡವಿ ವಿಷ್ಕ್ರಿಮಿಯಾಗುವಂತೆ ಮಾಡುತ್ತದೆ. ಪಾತಕಿಗಳ ಸಹವಾಸದಲ್ಲಿ ಕಾತರ

ಪಡುವಂತೆ ಮಾಡುತ್ತದೆ (ಕೀ.೪೬) ಇದನ್ನೇ 'ಅಸುರಕರ್ಮ' ಎಂದು ದಾಸರು ಕರೆಯುತ್ತಾರೆ. 'ಅಸು' ಎಂದರೆ ಇಂದ್ರಿಯಗಳ ವಿಷಯಾಸಕ್ತಿ. ಈ ಇಂದ್ರಿಯಗಳನ್ನು ತೃಪ್ತಿಪಡಿಸುವುದರಲ್ಲಿ ನಿರತರಾದವರೇ ಅಸುರರು. ದೈವಚಿಂತನೆಯನ್ನು ಬಿಟ್ಟು ವಿಷಯಾಸಕ್ತ ಕಾರ್ಯಗಳಲ್ಲಿ ನಿರತನಾಗುವುದೇ 'ಅಸುರಕರ್ಮ'. ಮನುಷ್ಯನಾಗಿ ಹುಟ್ಟಿ ಈ ಅಸುರಕರ್ಮವನ್ನು ಮಾಡುವುದು ಮಾನವಧರ್ಮಕ್ಕೇ ಅಪಚಾರ. ಮನುಷ್ಯನ ಖೋಡಿಗುಣ, ನಾಸ್ತಿಕಪ್ರಜ್ಞೆ, ಮತಿಭ್ರಷ್ಟತೆ ಇವಕ್ಕೆಲ್ಲ ಕಾರಣವಾದ ಮರುವೆಂಬ ಮಾರಿಯನ್ನು ದೂರ ಮಾಡಿದಾಗ ಮಾತ್ರ ಹರಿಯ ಒಲುಮೆಯನ್ನು ಪಡೆಯಲು ಸಾಧ್ಯ ಎಂದು ಜಯೇಶವಿಠಲರು ಭಾವಿಸುತ್ತಾರೆ. ಹೀಗೆ ಆತ್ಮಶೋಧನೆ ಮಾಡಿಕೊಂಡಾಗ ಅಹಂ ಮಮಕಾರಗಳು ದೂರವಾಗುತ್ತವೆ.

೧. ದರ್ವಿಯಂದದಿ ನಾನು ನೀ ಸರ್ವ ಸ್ವಾತಂತ್ರ್ಯ
ನಿರ್ವಾಹ ನಿನ್ನಿಂದ ಸರ್ವ ಜಗಕೆ (ಕೀ.೪೧)

೨. ಸರ್ವಕೂ ನೀ ಮೂಲ ಹರಿಯೆ ಕೇಳೊ
ದರ್ವಿ ಜೀವರ ಕೈಲಿ ಏನಾಹುದೆಲೊ ದೇವ (ಕೀ.೭೪)

ಎಂಬ ವಿನಯ ಮೂಡುತ್ತದೆ. 'ದರ್ವಿ' ಎಂದರೆ ಸೌಟು, ಸಟ್ಟುಗ ಎಂದು ಅರ್ಥ. ಸೌಟು ಆಹಾರ ಪದಾರ್ಥಗಳ ಸಂಪರ್ಕದಲ್ಲೇ ಇದ್ದರೂ, ಅವುಗಳ ಬಣ್ಣ, ವಾಸನೆ, ರುಚಿ, ಸ್ವಾದಗಳನ್ನು ಅನುಭವಿಸುವ ಶಕ್ತಿ ಪಡೆದಿಲ್ಲ. ಜೀವಿಗಳ ಸ್ವಾತಂತ್ರ್ಯ ಕೂಡ ಈ ಸೌಟಿನಂತೆಯೆ. ಸೃಷ್ಟಿ, ಸ್ಥಿತಿ, ಸಂಹಾರ, ನಿಯಮನ, ಜ್ಞಾನಪ್ರದತ್ವ, ಅಜ್ಞಾನಪ್ರದತ್ವ, ಸಂಸಾರ ಬಂಧನ, ಮೋಕ್ಷಪ್ರದತ್ವ ಈ ಅಷ್ಟಕರ್ತೃತ್ವಗಳನ್ನು ಮಾಡುವ ಶಕ್ತಿ ಇರುವುದು ಹರಿಯೊಬ್ಬನಿಗೇ ಆದ್ದರಿಂದ, ಹರಿಯೊಬ್ಬನೇ ಸ್ವತಂತ್ರ ಉಳಿದವರೆಲ್ಲ ಅವನ ದಾಸರು ಎಂಬ ದಾಸತ್ವ ಭಾವನೆಗೆ ಆತ್ಮಶೋಧನೆ ಅನುವು ಮಾಡಿಕೊಡುತ್ತದೆ.

ದೇವರು ಮತ್ತು ಭಕ್ತರ ಸಂಬಂಧವನ್ನು ಪ್ರಸ್ತಾಪಿಸುವಾಗ ಜೀವಿಗಳು ಅಸ್ವಾತಂತ್ರ್ಯರೆಂದೂ, ಹರಿಯೊಬ್ಬನೇ ಸ್ವತಂತ್ರನೆಂದೂ ದಾಸರು ಭಾವಿಸುತ್ತಾರೆ.

ಜೀವಿಗಳಿಗೆ ಸ್ವತಂತ್ರ ಕರ್ತೃತ್ವ ಇಲ್ಲ. ಇದೆ ಎಂದು ಭಾವಿಸುವುದಾದರೆ ಅದು ಕೇವಲ ಭ್ರಮೆ. ಜ್ಞಾನ, ಪ್ರಾಣ, ಜೀವ, ಜಡ, ಕಾಲ, ಕರ್ಮ ಎಲ್ಲಕ್ಕೂ ಹರಿಯೆ ಮೂಲ ಕಾರಣ ಎಂದು ದಾಸರ ನಂಬಿಕೆ.

೧. ನೀನೆಂತು ನಮ್ಮಲ್ಲಿ ನಿಂತು ಕುಣಿಸಿದರಂತು
ಜ್ಞಾನೇಚ್ಛೆ ಯತ್ನ ಮನ ಕರಣದೇವ ಕೀ.೫೫

೨. ಒಳಗಿದ್ದು ಎನ್ನಲ್ಲಿ ಎಂತೆಂತು ನೀನಾದೆ
ತಲೆಮಣಿದು ನಾನಂತು ಮಾಡಬೇಕು ಕೀ.೪೭

೩. ಕಾಣುವುದು ಕೇಳುವುದು ಗಂಧ, ರಸ, ಸ್ಪರ್ಶಗಳು
ನಾನಾ ಬಗೆ ವಿಷಯಗಳು ನೀನೆ ರಂಗ ಕೀ.೫೬

ಸಾಧನೆ ಮಾಡುವ ವಿಷಯದಲ್ಲೂ ಜೀವಿಗಳಿಗೆ ಸ್ವಾತಂತ್ರ್ಯವಿಲ್ಲ. ತನು, ಮನ, ಕರಣತ್ರಯಗಳು ಶ್ರೀಹರಿಯ ಅಧೀನವೇ ಆಗಿರುವುದರಿಂದ ಮನುಷ್ಯನ ಸಾಧನೆ ಕೂಡ ಹರಿಚಿತ್ತದಂತೆಯೇ ನಡೆಯುತ್ತದೆ. ನಮ್ಮದೆಂದು ನಾವು ಭಾವಿಸುವ ಸಾಧನೆಗಳು ವಾಸ್ತವವಾಗಿ ನಮ್ಮದಲ್ಲ. 'ಈ ಪಾತ್ರದೊಳಗಿದ್ದು ನೀ ಮಾಳ್ಪ ಸಾಧನವೋ' (ಕೀ.೭೭) ಎಂಬ ತಾತ್ವಿಕ ನೆಲೆಯನ್ನು ಜೀವಿ ತಲುಪಿದಾಗ ತನ್ನ ನಡೆ ನುಡಿ, ದೃಷ್ಟಿಗಳಲ್ಲಿ ಲೌಕಿಕ ಅಪೇಕ್ಷೆಯನ್ನು ಮೀರಿದ ದೈವತ್ವವನ್ನೇ ಕಾಣುತ್ತಾನೆ.

ನಡೆವುದೇ ಯಾತ್ರೆಗಳು ನುಡಿವುದೇ ಸ್ತೋತ್ರಗಳು
ಬಿಡದೆ ನೋಡುವುದೆಲ್ಲ ನಿನ್ನ ಮೂರ್ತಿ
ಒಡನೆ ಕೇಳುವ ಶಬ್ದ ನಿನ್ನ ಮಂಗಳ ಕೀರ್ತಿ
ಪಡುವ ಭೋಗಗಳೆಲ್ಲ ನಿನ್ನ ಉಪಚಾರ ಕೀ.೭೭

'ಜನರ ಮನ್ನಣೆ ದೃಷ್ಟಿ ಕನಸಿನಲಾದರೂ ಬೇಡ' (ಕೀ.೫೦) ಎನ್ನುವ ಜಯೇಶವಿಠಲರು ಎಂದೂ ಕೀರ್ತಿಗಾಗಿ ಹಂಬಲಿಸಿದವರಲ್ಲ. 'ನಿಜಭಕ್ತ

ಪದವೀಯೊ ಋಜುವರ್ಗ ಸಂಪೂಜ್ಯ' (ಕೀ.೫೦) ಎಂದು ಪ್ರಾರ್ಥಿಸುವ ಇವರು ಭಕ್ತಿ, ಜ್ಞಾನ, ಮತ್ತು ಹರಿಕರುಣೆಯನ್ನು ಮಾತ್ರ ಅಪೇಕ್ಷಿಸುತ್ತಾರೆ. ಭಗವಂತ ಕೊಟ್ಟಿದ್ದನ್ನು ಭಕ್ತಿಯಿಂದ ಸಂತೋಷದಿಂದ ಅನುಭವಿಸಿ ಸಾಕು ಬೇಕನ್ನದೆ ನಿರ್ಲಿಪ್ತ ಜೀವನ ನಡೆಸುವ ಸಂತೃಪ್ತ ಮನೋಭಾವ ದಾಸರದು. ನಮ್ಮ ಹಿತಾಹಿತಗಳು ಯಾವುದೆಂಬುದು ನಮಗಿಂತಲೂ ಆ ಭಗವಂತನಿಗೇ ಚೆನ್ನಾಗಿ ಗೊತ್ತು. ಸಮಸ್ತ ಜೀವರಾಶಿಯು ನಿತ್ಯಮಿತ್ರನಾಗಿ ಅನಂತ ಸಂಸಾರವನ್ನು ಅನುಗಾಲ ನಿರ್ವಹಿಸುವವನಿಗೆ ಹೇಳಬೇಕಾದಾದ್ದರೂ ಏನಿದೆ? ನಮ್ಮ ಕ್ಷೇಮದ ಜವಾಬ್ದಾರಿಯನ್ನು ಹೊತ್ತಿರುವ ಅನಿಮಿತ್ತ ಬಂಧು ಅವನು. ಆದ್ದರಿಂದ ಲೌಕಿಕ ವಿಷಯಗಳಿಗಾಗಿ ಪ್ರಾರ್ಥಿಸದೆ ಜ್ಞಾನ ನೀಡುವಂತೆ ಕೋರುತ್ತಾರೆ.

೧. ಎಲ್ಲ ಗುಣತ್ರಯ ರೂಪ ನಿನ್ನದೆಂಬೊ ಜ್ಞಾನ
ಎಲ್ಲ ಕಾಲದಿ ಕೊಟ್ಟು ಶಿಷ್ಟರಲಿ ಇಡು ಎನ್ನ — ಕೀ.೫೬

೨. ವಿದ್ಯೆ ಬುದ್ಧಿ ಜ್ಞಾನ ಮನ ಕರಣಶಕ್ತಿ
ಸದ್ಧೈರ್ಯ ಸುಖನಿಧಿಯು ನಿರ್ಭೀತ ಪದವಿ
ಅದ್ವಯನೆ ನೀನೆನಗೆ ಅನಿಮಿತ್ತ ಬಂಧು ಹರಿ
ಸಿದ್ಧಿಸ್ಲೈ ಈ ಜ್ಞಾನ ಸರ್ವಕಾಲಕು ದೇವ — ಕೀ.೬೦

೩. ಉದ್ಧವನ ಗುರು ಸುಧಾಮ ಮಿತ್ರನೆ ಮನ
ತಿದ್ದಯ್ಯ ಜ್ಞಾನ ನಿನ್ನಲ್ಲಿ ನಿಲುವಂತೆ — ಕೀ.೬೩

೪. ಮೋಚಕನೆ ಜಯೇಶವಿಠಲನೆ ವಿಧಿವಂದ್ಯ
ಯಾಚಿಪೆನು ವಿಜ್ಞಾನ ಕರುಣಿಸೆಂದು — ಕೀ.೪೯

ಜ್ಞಾನ ಎಂದರೆ ವೇದಾದಿಗಳಲ್ಲಿ ಹೇಳಿರುವ ವಿಷ್ಣುಸರ್ವೋತ್ತಮತ್ವ ಜ್ಞಾನ. ಇದರ ಜೊತೆ ವಿಷ್ಣುವಿನ ಸರ್ವಜ್ಞತ್ವ, ಸರ್ವಕರ್ತೃತ್ವ, ಮೊದಲಾದ ವಿಶೇಷ ಮಹಿಮೆಗಳ ಪರಿಜ್ಞಾನ ಸೇರಿದರೆ ವಿಜ್ಞಾನವೆನಿಸಿಕೊಳ್ಳುತ್ತದೆ. ಇತರ ಶಾಸ್ತ್ರಗಳಿಗಿಂತ ಭಿನ್ನವಾದ ವಿಷ್ಣುತತ್ವಜ್ಞಾನವೇ ವಿಜ್ಞಾನ. ಇಂಥ ಜ್ಞಾನವನ್ನು ಕರುಣಿಸಬೇಕೆಂದು

ದಾಸರು ಹರಿಯನ್ನು ಬೇಡುತ್ತಾರೆ. ಲೌಕಿಕ ಜೀವನದಲ್ಲಿ ಹಲವು ಪದವಿಗಳನ್ನು ಅನುಭವಿಸಿದರೂ, ದಾಸರು ಅಪೇಕ್ಷಿಸಿದ ಮಹಾಪದವಿ 'ಹರಿದಾಸ್ಯ'. ಹರಿದಾಸ್ಯ ದೊರೆಯುವುದೂ ಅಷ್ಟೇನು ಸುಲಭವಲ್ಲ. ಹರಿ 'ಮಹಿದಾಸ' ಎನಿಸಿಕೊಂಡವನು. ಮಹಿಮಾವಂತರಾದ ಲಕ್ಷ್ಮಿ ಬ್ರಹ್ಮಾದಿಗಳನ್ನೇ ದಾಸರನ್ನಾಗಿ ಮಾಡಿಕೊಂಡು 'ಮಹಿದಾಸ ಪೂಜ್ಯ ಚರಣ' ಎನಿಸಿಕೊಂಡವನು. ರಮಾ ಬ್ರಹ್ಮರುದ್ರೇಂದಾದಿ ವಂದ್ಯನಾದ ಶ್ರೀಹರಿಯ ದಾಸ್ಯ ಮನುಷ್ಯ ವರ್ಗಕ್ಕೆ ದೊರೆಯುವುದಾದರೆ ಅದೇ ಮಹಾಪದವಿ. ಈ ಪದವಿ ದೊರೆಯುವುದಕ್ಕೂ ಹರಿಕರುಣೆ ಬೇಕು. ಹರಿಕರುಣೆ ಇಲ್ಲದವರು ಹರಿದಾಸರಾಗಲಾರರು. ಆದ್ದರಿಂದ ಭಗವಂತನ ಕರುಣೆಗಾಗಿ ದಾಸರು ಹಂಬಲಿಸುತ್ತಾರೆ.

೧. ತಂದೆ ನಿನ್ನಯ ಕರುಣ ಉಂಬುವನೆ ಬಹುಧನ್ಯ — ಕೀ.೫೭

೨. ಗೋಗೊಲ್ಲರಲಿ ಕರುಣ ಸುರಿದ ದೀನ ಬಂಧು
ಭಾಗ್ಯ ಪಾಲಿಸು ಭಕ್ತಿಯೋಗವಿತ್ತು — ಕೀ.೫೭

೩. ಗುಣವಿಲ್ಲ ದೋಷಿಲ್ಲದೆಡೆಯಿಲ್ಲ ಎನ್ನಲ್ಲಿ
ದನುಜಾರಿ ನಿನ್ನವರ ಕರುಣ ಉಂಟೊ — ಕೀ.೫೪

೪. ಮರುವೆಂಬ ಮಾರಿಯನು ಪರಿಹರಿಸು ಪರಿಪೂರ್ಣ
ಸುರಿ ನಿನ್ನ ಕರುಣ ರಸ ಪ್ರಾಣನಾಥ — ಕೀ.೫೮

೫. ಮಹಿದಾಸ ಹರಿದಾಸ್ಯ ಮಹಪದವಿ ಕರುಣಿಸಯ್ಯ — ಕೀ.೬೬

೬. ವೃಷಭಾದ್ರಿಪ ಸಖ ಜಯೇಶವಿಠಲನೆ ಕರುಣಾಬ್ಧಿ
ವರ್ಷಿಸೋ ಕೃಪೆವೃಷ್ಟಿ ಮದ್ಭಿಂಬಗಿದು ವಿಹಿತ — ಕೀ.೬೮

ಭಗವಂತ ತನ್ನ ಭಕ್ತರ ವಿಷಯದಲ್ಲಿ ಮಹಾಕರುಣಿ. ಇದು ಆರೋಪಿತ ಕಾರುಣ್ಯವಲ್ಲ. ತಾಯಿ ಮಕ್ಕಳ ಸಂಬಂಧದಂತೆ ಅತ್ಯಂತ ಸಹಜವಾದ ಮಾತೃಕರುಣೆ.

೧. ಮಾಯೇಶ ಮಧುವೈರಿ ತಾಯಿಯಂದದಿ ಕಾಯೋ ಕೀ.೬೦

೨. ಅನುಗಾಲ ಸಲಹುವಿ ತಾಯಿಯಂತೆ ಕೀ.೬೧

೩. ಧೇನುವತ್ಸದ ತೆರದಿ ನೀ ಹಿತತೋರು ಕೀ.೫೮

ಹೀಗೆ ಭಗವಂತನಲ್ಲಿ ಮಾತೃಪ್ರೇಮದ ವಾತ್ಸಲ್ಯವನ್ನು ಜಯೇಶವಿಠಲರು ಗುರುತಿಸುತ್ತಾರೆ. ಮಕ್ಕಳ ದೋಷಗಳನ್ನು ಎಣಿಸದೆ ಅವರನ್ನು ಅಕ್ಕರೆಯಿಂದ ನೋಡುವ, ತಿದ್ದುವ, ರಕ್ಷಿಸುವ ತಾಯಿಯ ಕರುಣೆಯಂತೆಯೇ ಭಗವಂತನ ಕರುಣೆ. ಈ ಕರುಣೆಯನ್ನು ಸಂಪಾದಿಸುವುದೇ ಭಕ್ತನ ಜೀವನದ ಧ್ಯೇಯ ಎಂಬುದು ದಾಸರ ಭಾವನೆ. ಇಂಥ ಆಧ್ಯಾತ್ಮಿಕ ಔನ್ನತ್ಯವನ್ನು ತಲುಪಿದ ಜೀವಿ ದೈವ ಸಾಕ್ಷಾತ್ಕಾರವನ್ನು ಬಿಟ್ಟು ಬೇರೇನನ್ನೂ ಬಯಸುವುದಿಲ್ಲ. ಅಜ್ಞಾನಾದಿ ದೋಷಗಳೆಂಬ ವಕ್ರಮಾರ್ಗರಹಿತವಾದ ಮನಸ್ಸು ಭಗವದ್ವಿಷಯಗಳಲ್ಲಿ ಪ್ರಾಮಾಣಿಕವಾಗಿ ವರ್ತಿಸುತ್ತದೆ.

೧. ಎನ್ನಲ್ಲಿ ನಿನ್ನ ಕ್ರಿಯ ಅನುಭವದಿ ತಿಳಿಸೆನಗೆ<br>ಎನ್ನ ಮನ ಒಡಲಲ್ಲಿ ನಿನ್ನ ಮೂರ್ತಿಯ ತೋರೋ ಕೀ.೭೫

೨. ಹೃದ್ಧಾಮದಲಿ ನಿನ್ನ ದರುಶನವ ನೀಡಯ್ಯ ಕೀ.೭೬

ಹೀಗೆ ಅಪರೋಕ್ಷಾನುಭವ ಪಡೆಯುವುದಕ್ಕೆ ಜೀವ ಹಂಬಲಿಸುತ್ತದೆ. 'ಬಿಂಬ ನೀ ಪ್ರತಿಬಿಂಬ ನಾ ನಿನಗೆ ಎಂದೆಂದು' (ಕೀ.೪೩) ಎಂದು ಭಾವಿಸಿ ತನ್ನ ಬಿಂಬರೂಪಿಯ ಸಾಕ್ಷಾತ್ಕಾರ ಹೊಂದುವುದೇ ಅಪರೋಕ್ಷಾನುಭವ. 'ಬಿಂಬದಲಿ ನಡೆದ ಶ್ರೇಯ ನಿನ್ನದೆಂಬೊ ಜ್ಞಾನ ಬೆಂಬಿಡದೆ ಪಾಲಿಸಿ ಬಿಂಬ ದರುಶನ ನೀಡೊ ' (ಕೀ.೪೩)

ಇದು ಜಯೇಶವಿಠಲರ ಆಧ್ಯಾತ್ಮ ಜೀವನದ ಅಪೇಕ್ಷೆ.

## ರಂಗೇಶ ವಿಠಲರು (೧೮೭೫-೧೯೫೪)

ತಂದೆ ಮುದ್ದುಮೋಹನದಾಸರ ಶಿಷ್ಯರಲ್ಲಿ ಒಬ್ಬರಾದ ರಂಗೇಶವಿಠಲರ ನಿಜನಾಮ ಎ.ಆರ್. ಸಂಜೀವರಾಯರು (ಅರಕೆರೆ ರಾಮಣ್ಣ ಸಂಜೀವರಾವ್) ತುಮಕೂರು-ಮಧುಗಿರಿ ರಸ್ತೆಯಲ್ಲಿರುವ ಅರಕೆರೆ ಇವರ ಜನ್ಮಸ್ಥಳ. ಇವರ ತಂದೆ ರಾಮಣ್ಣ, ತಾಯಿ ಸಂಜೀವಮ್ಮ. ರಾಮಣ್ಣನವರಿಗೆ ಏಳು ಮಂದಿ ಹೆಣ್ಣುಮಕ್ಕಳು ಮತ್ತು ಒಬ್ಬನೇ ಗಂಡು ಮಗ. ಅರಕೆರೆ ರಾಮಣ್ಣನವರು ತಾಲ್ಲೂಕು ಕಛೇರಿಯಲ್ಲಿ ಗುಮಾಸ್ತರಾಗಿದ್ದರು. ರಾಮಣ್ಣನವರ ಹಿರಿಯ ಮಗ ಸಂಜೀವರಾಯರು ಎಸ್.ಎಸ್.ಎಲ್.ಸಿ.ವರೆಗೂ ವಿದ್ಯಾಭ್ಯಾಸ ಮುಗಿಸಿ, ಸಿವಿಲ್ ಇಂಜಿನಿಯರಿಂಗ್‌ನಲ್ಲಿ ಡಿಪ್ಲಮೊ ಮಾಡಿದ್ದರು. ಕೆಲವು ಕಾಲ ಮೈಸೂರು ಸಂಸ್ಥಾನದ ಪಬ್ಲಿಕ್‌ವರ್ಕ್ಸ್ ಇಲಾಖೆಯಲ್ಲಿ ಓವರ್‌ಸೀಯರ್ ಆಗಿ ಕೆಲಸ ಮಾಡಿದರು. ತಮ್ಮ ಮೇಲಿನ ಅಧಿಕಾರಿಯ ಧೋರಣೆ ಹಿಡಿಸದೆ ಅವನ ಜೊತೆ ವಾದಿಸಿ ರಾಜೀನಾಮೆ ಕೊಟ್ಟರು. ಅನಂತರ ಹಲವು ಟೌನ್ ಮುನ್ಸಿಪಾಲಿಟಿಗಳಲ್ಲಿ ಕಾಮಗಾರಿ ಪರಿವೀಕ್ಷಕರಾಗಿ ಕೆಲಸಮಾಡಿದರು.

ಸಂಜೀವರಾಯರ ಬದುಕಿನಲ್ಲಿ ನಡೆದ ಒಂದು ಕಹಿಘಟನೆ ಜೀವನದಲ್ಲಿ ಬೇಸರ ವೈರಾಗ್ಯ ಬರುವಂತೆ ಮಾಡಿತು. ರಾಯರಿಗೆ ಒಬ್ಬಳೇ ಮಗಳು. ಅವಳಿಗೆ ಹತ್ತನೇ ವಯಸ್ಸಿನಲ್ಲಿಯೇ ಮದುವೆಯನ್ನು ಮಾಡಿದರು. ಹನ್ನೊಂದನೇ ವಯಸ್ಸಿನಲ್ಲಿ ಆಕೆ ವಿಧವೆಯಾದಳಂತೆ. ಬದುಕಿನಲ್ಲಿ ಬೇಸತ್ತ ರಾಯರು ದೇಶಾಂತರ ಹೊರಟುಹೋದರು. ಒಂದು ವರ್ಷ ಅವರು ಎಲ್ಲಿದ್ದಾರೆಂದು ಸುಳಿವು ಸಿಗಲಿಲ್ಲ. ಅನಂತರ ತಮ್ಮ ತಂದೆಗೆ ಹೈದ್ರಾಬಾದಿನಿಂದ ಪತ್ರ ಬರೆದು ಅಲ್ಲಿ ಅಂಚೆ ಇಲಾಖೆಯಲ್ಲಿ ಗುಮಾಸ್ತರಾಗಿರುವುದಾಗಿ ತಿಳಿಸಿದರು. ಸ್ವಲ್ಪ ಕಾಲವಾದ ಮೇಲೆ ಆ ಕೆಲಸ ಬಿಟ್ಟು ಕರಾಚಿಗೆ ಹೋಗಿ ಸಿಂಗರ್ ಹೊಲಿಗೆ ಯಂತ್ರದ ಮಾರಾಟ ವಿಭಾಗದಲ್ಲಿ ಕೆಲಸ ಮಾಡಿದರು. ೧೯೧೦ರ ಸುಮಾರಿಗೆ ಮತ್ತೆ ಬೆಂಗಳೂರಿಗೆ ಹಿಂತಿರುಗಿದರು. ಕೆಲವು ವರ್ಷ ಸೌದೆ ಇದ್ದಿಲು ಡಿಪೋ ನಡೆಸಿದರು. ಕೆಲವು

ಕಾಲ ಬೆಂಗಳೂರು ಪ್ರೆಸ್ ಮ್ಯಾನೇಜರಾಗಿದ್ದರು. ಇನ್ನು ಕೆಲವು ದಿನ ಫೋಟೋ ಸ್ಟುಡಿಯೋ ನಡೆಸಿದರು. ೧೯೩೦-೪೨ರವರೆಗೆ ಕುಣಿಗಲ್ ತಾಲ್ಲೂಕು ಕೀಲಾರ ಎಂಬಲ್ಲಿ ಇನಾಂದಾರರೊಬ್ಬರ ಎಸ್ಟೇಟ್ ಮ್ಯಾನೇಜರ್ ಆಗಿ ಕೆಲಸಮಾಡಿದರು. ೧೯೪೨ರ ವೇಳೆಗೆ ತಮ್ಮ ಸ್ವಂತ ಊರು ಅರಕೆರೆಗೆ ಬಂದು ನೆಲೆಸಿದರು. ಸಂಜೀವರಾಯರು ಕಟ್ಟುನಿಟ್ಟಿನ ಮನುಷ್ಯ ಎಂಬುದನ್ನು, ಸ್ವಲ್ಪ ವಿಚಿತ್ರ ಸ್ವಭಾವದವರು ಎಂಬುದನ್ನು ಮೂರು ಪ್ರಸಂಗಗಳೊಂದಿಗೆ ಡಾ॥ ಪ್ರಭುಶಂಕರ[1] ಅವರು ನಿರೂಪಿಸಿದ್ದಾರೆ.

ಹತ್ತು ಹನ್ನೆರಡು ಉದ್ಯೋಗಗಳನ್ನು ನಡೆಸಿದ ಸಂಜೀವರಾಯರು 'ನಾಗರಾಜ', 'ಸುಮಿತ್ರ' ಎಂಬ ಎರಡು ಕಾದಂಬರಿಗಳನ್ನೂ ಬರೆದು ಪ್ರಕಟಿಸಿದರು.[2] ಈ ಮಧ್ಯದಲ್ಲಿ ಆಗಾಗ ದೇಶಾಂತರ ಹೋಗುವುದು, ವರ್ಷಗಳ ಕಾಲ ಕಾಣೆಯಾಗುವುದು ಅವರಿಗೆ ಅಭ್ಯಾಸವಾಗಿಬಿಟ್ಟಿತ್ತು. ೧೯೧೫ರ ಸುಮಾರಿನಲ್ಲಿ ಒಮ್ಮೆ ಹೀಗೆ ನಾಪತ್ತೆಯಾದರು. ಮನೆಯವರಿಗೆಲ್ಲಾ ಇದು ಅಭ್ಯಾಸವಾಗಿತ್ತೊ ಏನೋ ಅವರನ್ನು ಹುಡುಕಿಸುವ ಪ್ರಯತ್ನ ಮಾಡಲಿಲ್ಲ. ದೇವರಾಯನದುರ್ಗದ ಜಾತ್ರೆಯಲ್ಲಿ ದಾಸರ ವೇಷದಲ್ಲಿ ಗೆಜ್ಜೆಕಟ್ಟಿ, ತಂಬೂರಿ ಹಿಡಿದು ಕುಣಿಯುತ್ತಿದ್ದ ಸಂಜೀವರಾಯರನ್ನು ತಾವು ಕಂಡದ್ದಾಗಿ ಪರಿಚಿತರೊಬ್ಬರು ತಿಳಿಸಿದರಂತೆ.

ಸಂಜೀವರಾಯರು ಮುದ್ದು ಮೋಹನದಾಸರಿಂದ ಹರಿದಾಸ ದೀಕ್ಷೆ ಪಡೆದರು.

---

೧. ಡಾ॥ ಪ್ರಭುಶಂಕರ-ಜನಮನ, ೧೯೮೧, ಪು.೯೧

೨. 'ನಾಗರಾಜ ಅಥವಾ ರಾಜಾ ರಾಮನಾಥ' ಎಂಬುದು ಒಂದು ಐತಿಹಾಸಿಕ ಕಾದಂಬರಿ. ೧೯೧೯ರಲ್ಲಿ ಬೆಂಗಳೂರಿನ ಐರಿಶ್ ಮುದ್ರಣಾಲಯದಲ್ಲಿ ಅಚ್ಚಾಯಿತು. 'ಸುಮಿತ್ರಾ' ಸಾಮಾಜಿಕ ಕಥಾವಸ್ತುವನ್ನು ಒಳಗೊಂಡಿದ್ದು, ಅದರಲ್ಲಿ ರೂಪ, ದನಿ, ಆಕಾರಗಳಲ್ಲಿ ಒಂದೇ ರೀತಿಯಾಗಿದ್ದ ಇಬ್ಬರು ಯುವತಿಯರ ಕಥೆ ಬಂದಿದೆ (ಪ್ರಕಟನೆ-೧೯೩೪)

ವರಗುರು ತಂದೆ ಮುದ್ದು ಮೋಹನದಾಸ। ರೆನಗಿತ್ತರು ಲೇಸ
ಪರಮ ಸಂಭ್ರಮದೊಳಿವರ ಸಹವಾಸ ಕರುಣಿಸಿದನು ಶ್ರೀಶ ಕೀ.೧೮೧

ಈ ಕೀರ್ತನೆಯಲ್ಲಿ ತಮಗೆ ಗುರುಗಳ ಅನುಗ್ರಹವಾದ ಸಂದರ್ಭವನ್ನು ದಾಸರು ಸ್ಮರಿಸಿದ್ದಾರೆ. 'ಪರಮಾರ್ಥ ಚಂದ್ರೋದಯ' ಪತ್ರಿಕೆಯ ೧೯೨೮ ರ ಒಂದು ಸಂಚಿಕೆಯಲ್ಲಿ ಈ ಕೀರ್ತನೆ ಪ್ರಕಟವಾಗಿದೆ. ಈ ವೇಳೆಗೆ ಸುಬ್ಬರಾಯದಾಸರು (ತಂದೆ ಮುದ್ದುಮೋಹನವಿಠಲ) ೭೫ ಮಂದಿ ಶಿಷ್ಯರಿಗೆ ಅಂಕಿತೋಪದೇಶವನ್ನು ಮಾಡಿದ್ದರು. ಅಂಕಿತೋಪದೇಶ ಪಡೆದ ಮೊದಲ ಶಿಷ್ಯರು ಬಾಗೇಪಲ್ಲಿ ಶೇಷದಾಸರು. ಸಂಜೀವರಾಯರು ೩೯ನೆಯವರು. ಬಾಗೇಪಲ್ಲಿ ಶೇಷದಾಸರು ೧೯೨೪ರ ರಕ್ತಾಕ್ಷಿ ಸಂವತ್ಸರದ ಭಾದ್ರಪದ ಶುಕ್ಲ ಪೌರ್ಣಮಿಯಂದು ಸ್ವರ್ಗಸ್ಥರಾದ ಸಂಗತಿಯನ್ನು ರಂಗೇಶವಿಠಲರು ತಮ್ಮ ಕೀರ್ತನೆಯೊಂದರಲ್ಲಿ ಸ್ಮರಿಸಿದ್ದಾರೆ. (ಕೀ.೧೮೨) ಇವುಗಳ ಆಧಾರದ ಮೇಲೆ ೧೯೧೫ರ ಸುಮಾರಿನಲ್ಲಿ ಸಂಜೀವರಾಯರಿಗೆ ಅಂಕಿತೋಪದೇಶವಾಯಿತು ಎಂದು ಭಾವಿಸಬಹುದು. ತಂದೆ ಮುದ್ದುಮೋಹನದಾಸರಿಂದ ಅವರು ಪಡೆದ ಅಂಕಿತ 'ರಂಗೇಶವಿಠಲ'. 'ಮಾನನಿಧಿ ರಂಗೇಶವಿಠಲ ಕೇಳೊ' ಎಂಬ ಅಂಕಿತಪದದ ಮೂಲಕ (ಅನುಬಂಧ ೫-ಅ) ತಂದೆ ಮುದ್ದುಮೋಹನವಿಠಲರು ದಾಸದೀಕ್ಷೆ ನೀಡಿದರು ಎಂದು ತಿಳಿದುಬರುತ್ತದೆ.

ರಂಗೇಶವಿಠಲರ ಸುಮಾರು ೧೧೫ ಕೀರ್ತನೆಗಳು ದೊರೆತಿವೆ. ಈ ಕೀರ್ತನೆಗಳ ಶುದ್ಧಪ್ರತಿಯನ್ನು ೧೯೨೫ರಲ್ಲೇ ದಾಸರೇ ಸಿದ್ಧಪಡಿಸಿ ಮುದ್ರಣ ಪ್ರತಿಯನ್ನು ತಯಾರಿಸಿದ್ದರು. ಮೈಸೂರು ಕೃಷ್ಣರಾಜ ಮಿಲ್ಸ್‌ನ ಆಫೀಸ್ ಮ್ಯಾನೇಜರ್ ಆಗಿದ್ದ ಎಸ್. ಬಿಂದುರಾಯರು ಈ ಕೀರ್ತನೆಗಳಿಗೆ ರಾಗ ತಾಳಗಳನ್ನು ನಿರ್ಣಯಿಸಿ ಕೊಟ್ಟಿದ್ದರು. ಉಡುಪಿಯ ಪಾವಂಜೆ ಗುರುರಾಯರು ಈ ಕೀರ್ತನೆಗಳನ್ನು ಪ್ರಕಟಿಸಲು ಒಪ್ಪಿದ್ದರು. ಆದರೆ ಪ್ರಕಟವಾಗಲಿಲ್ಲ. ಸುಮಾರು ೧೯೧೫ರಲ್ಲಿ ದಾಸದೀಕ್ಷೆ ಸ್ವೀಕರಿಸಿದ ರಂಗೇಶವಿಠಲರು ಮುಂದಿನ ಹತ್ತು

ವರ್ಷಗಳಲ್ಲಿ ರಚಿಸಿದ ಕೀರ್ತನೆಗಳು ಇವು. ಆ ಮುಂದಿನ ೩೦ ವರ್ಷಗಳ ಕಾಲ ಇವರು ಕೀರ್ತನೆಗಳನ್ನು ರಚನೆ ಮಾಡಿದರೆ ಇಲ್ಲವೇ ಎಂಬುದು ತಿಳಿದು ಬರುವುದಿಲ್ಲ. ತಂದೆ ಮುದ್ದುಮೋಹನವಿಠಲರು ಮತ್ತು ಅವರ ಶಿಷ್ಯರು ೨೦-೩೦ರ ದಶಕದಲ್ಲಿ ಹರಿದಾಸ ಸಾಹಿತ್ಯ ಆಂದೋಲನವನ್ನೇ ಕೈಗೊಂಡರು. ದೇವರಾಯನದುರ್ಗ ಮತ್ತು ಬೆಂಗಳೂರು ಇವರ ಧಾರ್ಮಿಕ ಮತ್ತು ಸಾಹಿತ್ಯಿಕ ಚಟುವಟಿಕೆಗಳ ಕೇಂದ್ರವಾಗಿತ್ತು. ೧೯೪೦ರಲ್ಲಿ ತಂದೆ ಮುದ್ದುಮೋಹನದಾಸರು ಸ್ವರ್ಗಸ್ಥರಾದ ಮೇಲೆ ದಾಸಕೂಟದ ಚಟುವಟಿಕೆಗಳು ಕ್ಷೀಣಿಸುತ್ತಾ ಬಂದವು. ಸಮಕಾಲೀನ ಹರಿದಾಸರ ಧಾರ್ಮಿಕ ಸಾಹಿತ್ಯದ ಪ್ರಕಟಣೆಗೇ ಮೀಸಲಾಗಿದ್ದ 'ಪರಮಾರ್ಥ ಚಂದ್ರೋದಯ'[೧] ಪತ್ರಿಕೆಯೂ ಸ್ಥಗಿತವಾಯಿತು. ಸ್ವಾತಂತ್ರ್ಯ ಪೂರ್ವದ ಸಾಮಾಜಿಕ, ರಾಜಕೀಯ ಬದಲಾವಣೆಗಳಿಂದಾಗಿ ಹರಿದಾಸರು ಬೇರೆ ಬೇರೆ ಭಾಗಗಳಿಗೆ ಹಂಚಿಹೋದರು. ದಾಸಸಾಹಿತ್ಯದ ರಚನೆಗಳು ಸ್ಥಗಿತಗೊಂಡವು. ರಂಗೇಶವಿಠಲರು ಇದೇ ಪರಿಸರದಲ್ಲಿ ಇದ್ದವರಾದ್ದರಿಂದ ೧೯೨೫ರ ನಂತರ ಅವರು ಕೀರ್ತನೆಗಳ ರಚನೆಯನ್ನು ಮುಂದುವರೆಸಲಿಲ್ಲವೆಂದು ತೋರುತ್ತದೆ. ಕೀರ್ತನೆಗಳಲ್ಲದೆ ಕೇಶವಾದಿ ಚರ್ತುವಿಂಶತಿ ರೂಪ ಲಕ್ಷಣ ವಿವರಣ ಸ್ತೋತ್ರವನ್ನು (೨೫ ಷಟ್ಪದಿಗಳು), ಮಾಸ ನಿಯಾಮಕ ಪರಮಾತ್ಮನ ರೂಪಗಳ ಸ್ತುತಿಯನ್ನು (೧೫ ಭಾಮಿನಿ ಷಟ್ಪದಿಗಳು) ರಚಿಸಿದ್ದಾರೆ. ಈ ಎರಡು ಭಾಮಿನಿ ಷಟ್ಪದಿಗಳನ್ನು ರಚಿಸಿದ್ದು ೧೯೪೦ರಲ್ಲಿ. ದಾಸರು ಕೀಲಾರದಲ್ಲಿ ಇದ್ದಾಗ. ಕೀಲಾರದಿಂದ ತಮ್ಮ ಸ್ವಂತ ಸ್ಥಳ ಅರಕೆರೆಗೆ ಬಂದು ನೆಲೆಸಿದ ಮೇಲೆ ವ್ಯಾಸರಾಜ ಮಠದ ಗುರುಪೀಳಿಗೆ, ಮಂತ್ರಾಲಯ ಮಠದ ಗುರುಪೀಳಿಗೆ, ಉತ್ತರಾದಿಮಠದ ಗುರುಪೀಳಿಗೆ, ಶ್ರೀಪಾದರಾಜ ಮಠದ ಗುರುಪೀಳಿಗೆ ಇವುಗಳನ್ನು (ಭಾಮಿನಿ ಷಟ್ಪದಿ) ೧೯೪೫ರ ಸುಮಾರಿನಲ್ಲಿ ರಚಿಸಿದರು.

---

೧. ಈ ಮಾಸಪತ್ರಿಕೆಯನ್ನು ೧೯೨೮ರಲ್ಲಿ ಹುಟ್ಟುಹಾಕಿದವರು, ದೇವರಾಯದುರ್ಗದಲ್ಲಿ ಪರಮಪ್ರಿಯ ಸುಬ್ಬರಾಯದಿಂದ ಪ್ರೇರಿತವಾದ 'ದಾಸಕೂಟ ಸಭೆ' ಯವರು. ಸುಪ್ರಸಿದ್ಧ ಸಿ. ಹಯವದನರಾಯರು ಕೆಲಕಾಲ ಈ ದಾಸಕೂಟದ ಗೌ. ಕಾರ್ಯದರ್ಶಿಗಳಾಗಿದ್ದರು.

ಆತ್ಮಶೋಧನೆಯ ಕೃತಿಗಳಲ್ಲಿ ರಂಗೇಶವಿಠಲರು ಎಲ್ಲ ಹರಿದಾಸರಂತೆಯೇ ಸಾಂಪ್ರದಾಯಿಕವಾಗಿ ಆತ್ಮವಿಮರ್ಶೆ ಮಾಡಿಕೊಂಡು ತಾವು ಮಾಡಿದ ಅಪರಾಧಗಳನ್ನು ನಿರೂಪಿಸುತ್ತಾರೆ. ದಾರಾಪುತ್ರರು ದಾರಿ ತೋರುವರೆಂದು ನಂಬಿದ್ದು, ಅವರು ಮೋರೆ ತೋರದೆ ಜಾರಿಕೊಂಡದ್ದು, ಶುದ್ಧ ವೈಷ್ಣವನಾಗಿ ಹುಟ್ಟಿ, ನಿಷಿದ್ಧ ಕೂಳನು ತಿಂದು, ಬುದ್ಧಿಪೂರ್ವಕವಾಗಿ ಅನಿರುದ್ಧನ ನೆನೆಯದೆ ಭಂಗಿ ಕೋರನಾಗಿ ಬದುಕನ್ನು ವ್ಯರ್ಥಮಾಡಿಕೊಂಡದ್ದು, ಬಾಯಲಿ ನೀತಿ ಹೇಳುತ್ತ ಹೇಯ ಕರ್ಮಗಳಲ್ಲಿ ಪ್ರೀತಿ ತೋರಿದ್ದು, ರೊಕ್ಕದ ಮದದಲ್ಲಿ ಸೊಕ್ಕಿ ಬಡವರನ್ನು ಲೆಕ್ಕಿಸದೆ ಧಿಕ್ಕರಿಸಿ ಮಾತನಾಡಿದ್ದು, ಹೀಗೆ ದುಷ್ಟ ಮನುಜನಾಗಿ ಭ್ರಷ್ಟ ಜೀವನ ನಡೆಸಿದ್ದರ ಬಗ್ಗೆ ಪಶ್ಚಾತ್ತಾಪಪಡುತ್ತಾರೆ. 'ಹಿಂದೆ ತಪ್ಪಿದೆನಯ್ಯ ಮುಂದೆ ಬುದ್ಧಿಯು ಬಂತು' (ಕೀ.೧೭೯) 'ಹಿಂದೆ ಮಾಡಿದ ಪಾಪಕೀಸು ಬವಣೆಯು ಸಾಕು' (ಕೀ.೧೮೪) ಕಲಿಕಲುಷ ರಾಶಿಗಳನೆಲ್ಲಾ ಕಳೆದು ಸಲಹಯ್ಯ ರಂಗೇಶವಿಠಲ (ಕೀ.೧೯೯) ಎಂದು ದೇವರಿಗೆ ಶರಣಾಗುತ್ತಾರೆ. ತನ್ನ ಹಿಂದಿನ ಅಕೃತ್ಯಗಳನ್ನು ಮರೆತು 'ಮನಸು ವಚನಕಾಯಗಳಿಂದ ನಿನ್ನ ಅನುಚರನಾಗಿಹೆ' (ಕೀ.೧೯೯) 'ನರಹರಿ ನಿನ್ನಯ ಚರಣದ ಮಹಿಮೆಯ ಪರಿಪರಿಯಿಂದ ಪೊಗಳುವ ಮತಿಯಿತ್ತು ಸಲಹು'(ಕೀ.೧೯೭) 'ತನುಮನಗಳನು ನಿನಗರ್ಪಿಸಿದೆನೋ ಮಾನಾಪಮಾನವು ನಿನ್ನದು' (ಕೀ.೧೯೪) 'ನಾ ನಿನ್ನ ಕಾಡಿ ಬೇಡುವುದಿಲ್ಲ ಜ್ಞಾನ ಮಾತ್ರವಿತ್ತು ಕಾಯಬೇಕಲ್ಲ'(ಕೀ.೧೯೦) 'ನಿನ್ನ ಪಾದ ಸರೋಜದಲಿ ಮಂದಮತಿಯ ಮನ ಚಲಿಸದೆ ನಿಲುವಂತೆ ಒಂದು ಬೇಡುವೆನೊ ದೇವ ಬೇರೊಂದು ನಾನೊಲ್ಲೆ' (ಕೀ.೧೮೪) 'ನಿನ್ನ ದಾಸರ ಸೇವೆಯ ಕರುಣಿಸೆನಗೆ' (ಕೀ.೧೯೮) ಎಂದು ಹರಿದಾಸರ ದಾಸ್ಯವನ್ನು ಬೇಡುತ್ತಾರೆ.

ಭಗವಂತನ ಸಂಕೀರ್ತನೆಯ ಕೃತಿಗಳಲ್ಲಿ ಕೀರ್ತನೆಗಳ ಜೊತೆಗೆ ಉಗಾಭೋಗಗಳೂ ಸೇರಿವೆ. ಭಗವಂತನ ಅವತಾರಗಳು, ಅವನ ಲೀಲೆಗಳು, ಅವನ ಭಕ್ತಪರಾಧೀನತೆ ಇವುಗಳನ್ನು ಕೀರ್ತನೆಗಳಲ್ಲಿ ಮತ್ತೆ ಮತ್ತೆ ಪ್ರಸ್ತಾಪಿಸುತ್ತಾರೆ.

ಭಾಗವತ, ಭಾರತ, ರಾಮಾಯಣ, ಪುರಾಣಗಳು–ಇವುಗಳಿಂದ ಅನೇಕ ಉದಾಹರಣೆಗಳನ್ನು ಕೊಟ್ಟು ಹರಿಯ ಹಿರಿಮೆಯನ್ನು ಸ್ತುತಿಸಿದ್ದಾರೆ. ಹರಿಯಂತೆಯೇ ಮಹಾಲಕ್ಷ್ಮಿ, ವಾಯುದೇವರು, ಸರಸ್ವತಿ, ಭಾರತಿ, ರುದ್ರದೇವರು, ಮೊದಲಾದ ದೇವತಾಸ್ತುತಿಗಳನ್ನು ಸಾಂಪ್ರದಾಯಕವಾಗಿ ಮಾಡಿದ್ದಾರೆ. ತತ್ವಚಿಂತನೆಯ ಬಹುಭಾಗ ಪಾಪ, ಪುಣ್ಯ, ಕರ್ಮ, ವಿಧಿ, ಸಂಸಾರ, ಶಾಸ್ತ್ರಚಿಂತನೆ, ಭಕ್ತಿ ಈ ಪರಿಧಿಯಲ್ಲೇ ರಚಿತವಾಗಿದೆ. ನಿತ್ಯ ಜೀವನದ ವ್ಯವಹಾರಗಳಲ್ಲಿ ಮನುಷ್ಯ ಪಾಪ, ಕೋಪ, ದುರ್ಜನರ ಸಹವಾಸ, ಯಾತ್ರೆ, ತೀರ್ಥಸ್ನಾನ, ಪೂಜೆ ಇವು ಮಾಡಲಿ ಮಾಡದಿರಲಿ ಅದು ಮುಖ್ಯವಲ್ಲ,

೧. ಶ್ರೀಪತಿ ರಂಗೇಶವಿಠಲ ಸರ್ವ
ವ್ಯಾಪಾರ ಮಾಡುವನೆಂದು ತಿಳಿದು ನಿ
ರ್ಲೇಪವಾಗಿದ್ದು ಅವನ ಶ್ರೀ ಪಾದ ಪದ್ಮವನು
ಜೋಪಾನವಾಗಿಟ್ಟುಕೊಂಡಿದ್ದರೆ ಸಾಕು

(ಉಗಾಭೋಗ–೨೧೧)

೨. ಸದ್ಗುರುವ ಬುದ್ಧಿವಾದವ ಕೇಳಿ ತನುಮನವ
ತಿದ್ದಿಕೊಳುತ ಸದ್ವಿದ್ಯವ ಕಲಿತು ಹೃದ್ಗುಹದೊಳಾ
ಹದ್ದುವಾಹನ ಅನಿರುದ್ಧನಾಮಕ ಸಿರಿ
ಮುದ್ದು ರಂಗೇಶವಿಠಲನ ಬದ್ಧವಾಗಿ ನಿಲಿಸಿ
ಶುದ್ಧಮನದಿ ಪೂಜಿಸಿ ಇಷ್ಟ ಸಿದ್ಧಿಯ ಪೊಂದಿ

(ಉಗಾಭೋಗ–೨೧೨)

ಇದು ರಂಗೇಶ ವಿಠಲರ ತತ್ವಬೋಧನೆಯ ಸಾರ.

# ದಾಸರ ಲಕ್ಷ್ಮೀನಾರಾಯಣರಾಯರು (೧೮೮೦-೧೯೪೦)

ಪಂಗನಾಮದ ತಿಮ್ಮಣ್ಣದಾಸರ ಪರಂಪರೆಯಲ್ಲಿ ಬಂದ ದೊಡ್ಡಬಳ್ಳಾಪುರದ ದಾಸಕೂಟಸ್ಥರು ಈ ಶತಮಾನದ ಪ್ರಾರಂಭದಲ್ಲಿ ಹರಿದಾಸ ಸಾಹಿತ್ಯ ಮತ್ತು ಸಂಪ್ರದಾಯಗಳನ್ನು ವ್ಯಾಪಕಗೊಳಿಸಿದರು. ಮುದ್ದುಮೋಹನವಿಠಲದಾಸರೆಂದು ಪ್ರಸಿದ್ಧರಾದ ರಾಘವೇಂದ್ರದಾಸರಿಗೆ ೧೨ ಮಂದಿ ಶಿಷ್ಯರಿದ್ದರು. ಇವರಲ್ಲಿ ಒಂದೇ ಕುಟುಂಬದ ನಾಲ್ಕು ಮಂದಿ ಅಣ್ಣತಮ್ಮಂದಿರು ದಾಸತ್ವವನ್ನು ಸ್ವೀಕರಿಸಿ, ಹರಿದಾಸ ಸಾಹಿತ್ಯ ಪ್ರಚಾರಕ್ಕೆ ಬೆಂಗಳೂರನ್ನು ಕೇಂದ್ರವಾಗಿಸಿಕೊಂಡರು. ಈ ವಂಶದಲ್ಲಿ ಬಂದವರೇ ದಾಸರ ಲಕ್ಷ್ಮೀನಾರಾಯಣರಾಯರು.

ಮೂಲತ: ದೊಡ್ಡಬೆಲೆಯವರಾದ ಲಕ್ಷ್ಮೀನಾರಣಪ್ಪ ಎಂಬುವರು ಆತ್ರೇಯಸ ಗೋತ್ರದ ಯಜುಶ್ಶಾಖೆಯ ಮಾಧ್ವ ಅರವತ್ತೊಕ್ಕಲು ಈಚಲು ಮನೆತನದವರು. ಮಹಾರಾಜರ ಆಡಳಿತ ಕಾಲದಲ್ಲಿ ದೊಡ್ಡಬಳ್ಳಾಪುರದ ಸರ್ಕಾರಿ ಕಛೇರಿಯಲ್ಲಿ ರೆಕಾರ್ಡ್ ಕೀಪರ್ ಆಗಿ ಕೆಲಸ ಮಾಡುತ್ತಿದ್ದರು. ಕಥಾ ಕೀರ್ತನೆಗಳನ್ನು ಹೇಳುವ ದಾಸವೃತ್ತಿಯನ್ನೂ ಸ್ವೀಕರಿಸಿದ್ದರು. ಇವರು ರಾಘವೇಂದ್ರದಾಸರ ಹಿರಿಯ ಸಮಕಾಲೀನರು. ಲಕ್ಷ್ಮೀನಾರಾಯಣಪ್ಪನವರಿಗೆ ರಾಮಚಂದ್ರ, ಬಾಲಕೃಷ್ಣ, ರಾಘವೇಂದ್ರ, ವೆಂಕಟರಾಯ ಎಂಬ ನಾಲ್ಕು ಮಂದಿ ಮಕ್ಕಳು. ಇವರೆಲ್ಲರೂ ಮುದ್ದುಮೋಹನದಾಸರಿಂದ ಅಂಕಿತಪಡೆದು ಹರಿದಾಸರಾದರು. ರಾಮದಾಸರೆಂದು ಪ್ರಸಿದ್ಧರಾದ ರಾಮಚಂದ್ರಪ್ಪ (೧೮೩೦-೧೯೧೮)ನವರ ಅಂಕಿತ 'ಕರಿವರವಿಠಲ'. ಇವರು ನಿಷ್ಠಾವಂತ ಹರಿಭಕ್ತರು. ಇವರಿಗೆ ಚಿಕ್ಕವಯಸ್ಸಿನಲ್ಲೇ ಮದುವೆಯಾದರೂ ಹೆಂಡತಿ ಗಂಡನ ಮನೆಗೆ ಬರಲಿಲ್ಲ. ದಾಸರು ಮತ್ತೆ ಮದುವೆಯಾಗದೆ ಹರಿಕಥಾಸೇವೆಗೆ ತಮ್ಮನ್ನು ಸಮರ್ಪಿಸಿಕೊಂಡು ೮೮ ವರ್ಷಗಳ ಕಾಲ ಜೀವಿಸಿದ್ದು ವಿರಕ್ತ ಜೀವನ ನಡೆಸಿದರು.

ಬಾಲಕೃಷ್ಣರಾಯರ (೧೮೩೫-೧೯೧೦)ಅಂಕಿತ 'ಬಾಲಕೃಷ್ಣವಿಠಲ'. ರಾಘವೇಂದ್ರರಾಯರು 'ಕರುಣಾಕರವಿಠಲ' ಎಂಬ, ವೆಂಕಟರಾಯರು

'ಜ್ಞಾನದಾಯಕವಿಠಲ' ಎಂಬ ಅಂಕಿತ ಪಡೆದರು. ಈ ನಾಲ್ಕು ಮಂದಿ ಅಣ್ಣ ತಮ್ಮಂದಿರು ಕೀರ್ತನಕಾರರು; ಗಾಯಕರು; ಮತ್ತು ಹರಿಕಥೆಗಳ ರಚನಕಾರರು. ರಾಘವೇಂದ್ರರಾಯರು ಪಿಟೀಲು ವಿದ್ವಾಂಸರೂ ಆಗಿದ್ದರು. ವೆಂಕಟರಾಯರು ಮುಖವೀಣೆ ನುಡಿಸುತ್ತಿದ್ದರು. ಈ ಸಹೋದರರ ತಂಡ ಒಮ್ಮೆ ಮೈಸೂರು ಅರಮನೆಯಲ್ಲಿ ಕಥಾ ಕೀರ್ತನೆಯನ್ನು ನಡೆಸಿದಾಗ ಚಾಮರಾಜ ಒಡೆಯರು ರೇಷ್ಮೆಯ ಹೂವಿನ ಅಂಗಿಗಳನ್ನು ತೊಡಿಸಿ ಗೌರವಿಸಿದ್ದರಂತೆ. ಇಂಥ ದಾಸಕೂಟದ ಹಿನ್ನೆಲೆಯಿದ್ದ ಬಾಲಕೃಷ್ಣದಾಸರು ಮತ್ತು ಭಾಗೀರತಮ್ಮನವರ ಮೂರನೆಯ ಮಗನೇ ಲಕ್ಷ್ಮೀನಾರಾಯಣದಾಸರು.

ದೊಡ್ಡಬಳ್ಳಾಪುರದಲ್ಲಿ ಜನಿಸಿದ ಲಕ್ಷ್ಮೀನಾರಾಯಣದಾಸರು ಬೆಂಗಳೂರಿನ ಕೋಟೆ ಪ್ರೌಢಶಾಲೆಯಲ್ಲಿ ವಿದ್ಯಾಭ್ಯಾಸ ಮಾಡಿ ಆಗಿನ ಮೆಟ್ರಿಕ್ಯುಲೇಷನ್ ಪರೀಕ್ಷೆಯಲ್ಲಿ ತೇರ್ಗಡೆಯಾದರು. ಶಾಲೆಯಲ್ಲಿ ಓದುತ್ತಿರುವಾಗಲೇ ದಾಸಂಭಟ್ಟ ಎಂಬ ಸಂಸ್ಕೃತ ಪಂಡಿತರ ಬಳಿ ವ್ಯಾಕರಣ ಮತ್ತು ಕಾವ್ಯಗಳ ಅಭ್ಯಾಸ ಮಾಡಿದರು. ಸಂಸ್ಕೃತ ಶ್ಲೋಕಗಳನ್ನು ಕನ್ನಡದ ಭಾಮಿನೀ ಷಟ್ಪದಿಗೆ ಭಾಷಾಂತರ ಮಾಡುವ ಪ್ರಯತ್ನವನ್ನು ಚಿಕ್ಕವಯಸ್ಸಿನಲ್ಲೇ ನಡೆಸಿದರು. ಸಂಸಾರದ ಜವಾಬ್ದಾರಿ ಮತ್ತು ಕಡುಬಡತನದ ಕಾರಣ ವಿದ್ಯಾಭ್ಯಾಸವನ್ನು ಮುಂದುವರೆಸಲಾಗದೆ ರಾಜಾ ಮಿಲ್ಲಿನಲ್ಲಿ ಕೆಲಸಕ್ಕೆ ಸೇರಿದರು. ಅನಂತರ ಐದಾರು ವರ್ಷಗಳ ಕಾಲ ರೈಲ್ವೆ ಇಲಾಖೆಯಲ್ಲಿ ನಗದಿ ಗುಮಾಸ್ತರಾಗಿ ಕೆಲಸ ಮಾಡಿದರು. ಒಂದು ದಿನ ಸರಕು ಸಾಗಣೆಗೆ ಸಂಬಂಧಿಸಿದಂತೆ ಇಲಾಖೆಗೆ ಕಟ್ಟಬೇಕಾಗಿದ್ದ ೧೦೦೦ ರೂಗಳನ್ನು ಕಛೇರಿಯಲ್ಲಿ ಯಾರೋ ಕದ್ದರು. ಕೂಡಲೆ ರಾಯರು ಮನೆಗೆ ಬಂದು ಮನೆಯಲ್ಲಿದ್ದ ಒಡವೆ ವಸ್ತ್ರಗಳನ್ನೆಲ್ಲಾ ಮಾರಿ ಇಲಾಖೆಗೆ ಹಣ ಕಟ್ಟಿ ರಾಜೀನಾಮೆ ಕೊಟ್ಟು ಹೊರಬಂದರು. ಮನೆಗೆ ಬಂದು ದೇವರ ಮುಂದೆ ಕುಳಿತು ಭಗವದ್ಗೀತೆಯನ್ನು ತಲೆಯ ಮೇಲಿಟ್ಟುಕೊಂಡು 'ನನ್ನ ಬದುಕಿನುದ್ದಕ್ಕೂ ಯಾರ ಮರ್ಜಿಯನ್ನೂ ಹಿಡಿಯುವುದಿಲ್ಲ, ಯಾರ ಹಂಗಿನಲ್ಲೂ ಬದುಕುವುದಿಲ್ಲ, ನನ್ನ

ಬದುಕೆಲ್ಲ ಹರಿಸೇವೆಗೇ ಮೀಸಲು' ಎಂದು ಪ್ರಮಾಣ ಮಾಡಿದರು. ಕೊನೆಯವರೆಗೂ ಅದೇ ರೀತಿ ನಡೆದುಕೊಂಡರು.

ತಮ್ಮ ತಂದೆ ಮತ್ತು ಚಿಕ್ಕಪ್ಪಂದಿರು ಬರೆದಿಟ್ಟಿದ್ದ ದಾಸರ ಪದಗಳ ಪ್ರಚಾರ ಮತ್ತು ಪ್ರಕಟಣೆಯ ಕಡೆ ರಾಯರ ಮನಸ್ಸು ಹರಿಯಿತು. ಪ್ರತಿನಿತ್ಯ ಕೀರ್ತನೆಗಳನ್ನು ಪ್ರತಿಮಾಡುವುದರಲ್ಲೇ ಕಾಲಕಳೆದರು. ಖಚಿತವಾದ ಉದ್ಯೋಗವಿಲ್ಲದೆ ಜೀವನ ನಿರ್ವಹಣೆ ತುಂಬ ಕಷ್ಟವಾಗಿತ್ತು. ತಮ್ಮ ಚಿಕ್ಕಪ್ಪ ವೆಂಕಟರಾಯದಾಸರ ಅಳಿಯಂದಿರಾದ ವೆಂಕಣ್ಣದಾಸರು ೮ ರೂಗಳ ಸಂಬಳ ಪಡೆಯುವ ಶಾಲಾ ಅಧ್ಯಾಪಕರಾಕಗಿದ್ದರು. ೧೯೧೬ನೆಯ ಇಸವಿಯಲ್ಲಿ ವೆಂಕಣ್ಣದಾಸರಿಂದ ೧೦೦ ರೂ ಸಾಲಪಡೆದು ತಿಂಗಳಿಗೆ ಮೂರು ರೂಪಾಯಿ ಬಡ್ಡಿಯಂತೆ ವರ್ಷದಲ್ಲಿ ಸಾಲ ತೀರಿಸಿದರು.

ಲಕ್ಷ್ಮೀನಾರಾಯಣರಾಯರು ಒಳ್ಳೇ ಈಜುಗಾರರು. ಪ್ರತಿನಿತ್ಯ ಕೆಂಪಾಂಬುಧಿಕೆರೆಯಲ್ಲಿ ಗಂಟೆಗಟ್ಟಲೆ ಈಜಿ ಬರುವುದು ಅವರಿಗೆ ಹವ್ಯಾಸವಾಗಿತ್ತು. ರಾಯರ ಸ್ನೇಹಿತರಾದ ಶ್ರೀನಿವಾಸರಾವ್ ಎನ್ನುವವರು ಮಕ್ಕಳಿಗೆ ಈಜು ಕಲಿಸುವ ತರಬೇತುದಾರರಾಗಿದ್ದರು. ದಿನವಿಡಿ ಕೆರೆಯ ಬಳಿಯೇ ಕಾಲ ಕಳೆಯುವ ಶ್ರೀನಿವಾಸರಾಯರು ಕೆರೆ ಶ್ರೀನಿವಾಸರಾಯರು ಎಂದೇ ಪ್ರಸಿದ್ಧರಾಗಿದ್ದರು. ಶ್ರೀನಿವಾಸರಾಯರು ಅಧಿಕೃತ ಈಜಿನ ಮೇಷ್ಟು; ಲಕ್ಷ್ಮೀನಾರಾಯಣರಾಯರು ಅನಧಿಕೃತ ಈಜಿನ ಮೇಷ್ಟು ಎನಿಸಿದ್ದರು. ಈ ಅವಧಿಯಲ್ಲಿ ಒಂದು ಅಕಸ್ಮಿಕ ಘಟನೆ ನಡೆಯಿತು. ಮೈಸೂರು ಸರ್ಕಾರದ ಚೀಫ್ ಎಂಜಿನಿಯರ್ ಆಗಿದ್ದ ಕರ್ಪೂರ ಶ್ರೀನಿವಾಸರಾಯರ ಸ್ನೇಹಿತರಾದ ಜನಾರ್ದನರಾವ್ ಎನ್ನುವವರು ಕೆಂಪಾಂಬುಧಿ ಕೆರೆ ಕಟ್ಟೆಯ ಮೇಲೆ ನಡೆದು ಬರುತ್ತಿದ್ದವರು ಆಕಸ್ಮಿಕವಾಗಿ ಕಾಲು ಜಾರಿ ತುಂಬಿದ ಕೆರೆಗೆ ಉರುಳಿದರು. ಲಕ್ಷ್ಮೀನಾರಾಯಣರಾಯರು ತಕ್ಷಣವೇ ಈಜಿ ಹೋಗಿ ಅವರನ್ನು ದಡಕ್ಕೆ ತಂದು ಬದುಕಿಸಿದರು. ಕರ್ಪೂರ

ಶ್ರೀನಿವಾಸರಾಯರಿಗೆ ವಿಷಯ ತಿಳಿಯಿತು. 'ಕೆರೆ ಶ್ರೀನಿವಾಸರಾಯರ ಜೊತೆ ನೀವೂ ಈಜಿನ ಮೇಷ್ಟಾಗಿ' ಎಂದು ನೇಮಕ ಮಾಡಿದರು.

(ಈಜು ಮೇಷ್ಟಾಗಿ ರಾಯರು ಅದ್ಭುತ ಸಾಧನೆಗಳನ್ನು ಮಾಡಿದರು. ತಮ್ಮ ಜೀವದ ಹಂಗು ತೊರೆದು ೨೫-೩೦ ಪ್ರಾಣಗಳನ್ನು ಉಳಿಸಿದ ಕೀರ್ತಿ ರಾಯರದು. ಹರಿದಾಸ ಸಾಹಿತ್ಯದಂತೆಯೇ ಕೆಂಪಾಂಬುಧಿ ಕೆರೆಯೂ ಅವರ ಜೀವನದ ಅವಿಭಾಜ್ಯ ಅಂಗ.) ೧೯೩೬ರಲ್ಲಿ ಪಿ.ಕೆ. ಘೋಷ್ ಎಂಬ ವಿಶ್ವವಿಖ್ಯಾತ ಈಜುಗಾರ ಕೆಂಪಾಂಬುಧಿ ಕೆರೆಯಲ್ಲಿ ೯೪ ಗಂಟೆಗಳ ಕಾಲ ಸತತವಾಗಿ ಈಜಿನ ಪ್ರದರ್ಶನ ನೀಡಿದ. ಅವನೆದುರು ರಾಯರು ತಮ್ಮ ಕೆಲವು ಸಾಧನೆಗಳನ್ನು ಪ್ರದರ್ಶಿಸಿದಾಗ ಅವನು ಅಚ್ಚರಿಗೊಂಡು ರಾಯರನ್ನು ಹೊಗಳಿದ. ಅದಕ್ಕೆ ಅವರು 'ತಾವು ೯೪ ಗಂಟೆಗಳ ಕಾಲ ಕೈಗೆ ಬೇಡಿ ಹಾಕಿಕೊಂಡು ಈಜಿದ್ದೀರಿ, ನಾನು ಕೈಕಾಲು ಎರಡನ್ನೂ ಕಟ್ಟಿಕೊಂಡು ೧೦೦ ಗಂಟೆಗಳಿಗೂ ಹೆಚ್ಚು ಕಾಲ ಆರಾಮವಾಗಿ ತೇಲಬಲ್ಲೆ. ಆದರೆ ನಾನು ಬ್ರಾಹ್ಮಣ ; ಜಲಬಾಧೆಗಳನ್ನು ನೀರಿನಲ್ಲಿ ಮಾಡಿದ ಪಾಪಕ್ಕೆ ಗುರಿಯಾಗಲಾರೆ' ಎಂದರಂತೆ.

ಒಮ್ಮೆ ವರವಣಿ ರಾಮರಾಯರು, ಸುಬೋಧ ರಾಮರಾಯರು ಮತ್ತು ಲಕ್ಷ್ಮೀನಾರಾಯಣರಾಯರು ತುಂಗಭದ್ರೆಯ ನಡುಗಡ್ಡೆಯಲ್ಲಿರುವ ನವಬೃಂದಾವನ ದರ್ಶನಕ್ಕೆ ಹೋದರು. ದೋಣಿಯಲ್ಲಿ ನದಿಯನ್ನು ದಾಟಿ ನಡುಗಡ್ಡೆಯನ್ನು ತಲುಪಬೇಕು. ದೋಣಿ ಬರುವುದು ತಡವಾಯಿತು. ದೋಣಿಗಾಗಿ ಕಾಯುವ ತಾಳ್ಮೆ ಲಕ್ಷ್ಮೀನಾರಾಯಣರಾಯರಿಗೆ ಇರಲಿಲ್ಲ. 'ನೀವಿಬ್ಬರೂ ದೋಣಿಯಲ್ಲಿ ನಿಧಾನವಾಗಿ ಬನ್ನಿ, ನಾನು ಆರಾಮವಾಗಿ ಈಜಿಕೊಂಡು ಬರುತ್ತೇನೆ' ಎಂದು ನೀರಿಗೆ ಧುಮುಕಿಯೇ ಬಿಟ್ಟರು. ಸ್ನೇಹಿತರು ದೋಣಿಯಲ್ಲಿ ಕುಳಿತು ಬರುವ ಹೊತ್ತಿಗೆ ಪೂಜೆಗೆ ಸಿದ್ಧತೆಗಳನ್ನು ಮಾಡಿದ್ದರು.

ಸಾಹಿತ್ಯಸೇವೆ, ಧಾರ್ಮಿಕ ಸೇವೆಗಳಂತೆಯೇ ಸಮಾಜ ಸೇವೆಯಲ್ಲೂ ರಾಯರು ತಮ್ಮನ್ನು ತೊಡಗಿಸಿಕೊಂಡಿದ್ದರು. ಪ್ಲೇಗು, ವಿಷಮಶೀತ ಜ್ವರ ಮುಂತಾದ ಮಾರಕ ರೋಗಗಳ ಉಪಟಳ ಹೆಚ್ಚಾಗಿದ್ದ ಕಾಲದಲ್ಲಿ ಶವ ಸಂಸ್ಕಾರಗಳನ್ನು ಮಾಡಲೂ ಸಹಾ ಜನ ದೊರೆಯದ ಪರಿಸ್ಥಿತಿಯು ೧೯೨೦ರ ಸುಮಾರಿನಲ್ಲಿ ಬೆಂಗಳೂರಿನಲ್ಲಿತ್ತು. ಪರಿಚಿತರಾಗಲೀ, ಅಪರಿಚಿತರಾಗಲೀ, ಎಷ್ಟೇ ದೂರದಲ್ಲಿರಲಿ ಸಾವಿನ ಸುದ್ದಿ ಬಂದ ಕೂಡಲೆ ರಾಯರು ಅಲ್ಲಿ ಹಾಜರಾಗುತ್ತಿದ್ದರು. ಅಂತ್ಯ ಸಂಸ್ಕಾರಕ್ಕೆ ನೆರವಾಗುತ್ತಿದ್ದರು. ಸಾವಿರಕ್ಕೂ ಹೆಚ್ಚು ಅಂತ್ಯ ಸಂಸ್ಕಾರಗಳನ್ನು ಮಾಡಿದ ಹಿರಿಮೆ ಇವರದು. ಒಮ್ಮೆ ವಿಕ್ಟೋರಿಯಾ ಆಸ್ಪತ್ರೆಯ ಮುಂದೆ ಬರುತ್ತಿದ್ದಾಗ ಅಲ್ಲಿ ಯಾರೋ ಒಬ್ಬ ಮಡಿ ಹೆಂಗಸು ಸತ್ತಿದ್ದಾಳೆಂದು, ವಾರಸುದಾರರಿಲ್ಲದ ಆಕೆಯ ಶವವನ್ನು ಮುನ್ಸಿಪಾಲಿಟಿಗೆ ಒಪ್ಪಿಸುತ್ತಾರೆಂದು ತಿಳಿದುಬಂತು. ರಾಯರು ಕೂಡಲೆ ಆಸ್ಪತ್ರೆಯ ಅಧಿಕಾರಿಗಳನ್ನು ಭೇಟಿಯಾಗಿ ಆ ಶವವನ್ನು ತಮ್ಮ ಕಡೆಗೆ ಪಡೆದು ಅಂತ್ಯಸಂಸ್ಕಾರವನ್ನು ನೆರವೇರಿಸಿದರು.

ಬಡತನ ಮತ್ತು ಸಾಲ ಇವು ರಾಯರನ್ನು ನಿರಂತರವಾಗಿ ಕಾಡುತ್ತಿದ್ದ ಶತ್ರುಗಳು. ಅವರ ಹಸ್ತಪ್ರತಿಗಳ ಕೊನೆಯ ಪುಟಗಳಲ್ಲಿ ಅನೇಕ ರೀತಿಯ ಸಾಲದ ಲೆಖ್ಖಗಳು ದೊರೆಯುತ್ತದೆ. ಅದರಲ್ಲಿ ಒಂದು ಉದಾಹರಣೆ ಹೀಗಿದೆ: ೧೭-೧೦-೧೯೩೫ ರಿಂದ ೪-೬-೩೬ ಈ ಎಂಟು ತಿಂಗಳ ಅವಧಿಯಲ್ಲಿ ಸೌ॥ ರೇವಮ್ಮ ಎನ್ನುವರಿಂದ ರಾಯರು ೧೦ ಬಾರಿ ಸಾಲ ಪಡೆದಿದ್ದಾರೆ. ೧೮ ಬೆಳ್ಳಿ ಪಾತ್ರೆಗಳನ್ನು, ಬಂಗಾರದ ಒಡವೆಗಳನ್ನು ಒತ್ತೆಯಿಟ್ಟಿದ್ದಾರೆ. ಒತ್ತೆಯಿಟ್ಟು ಪಡೆದ ಸಾಲದ ಮೊತ್ತ ರೂ. ೯೫-೮ ಆಣೆಗಳು. ಕೊನೆಯಲ್ಲಿ ಬರೆದಿರುವ ಷರಾ ಈ ರೀತಿಯಿದೆ: '೯೫ರೂ ೮ ಆಣೆಗೆ ಬಡ್ಡಿ ೪ ರೂ ೮ ಆಣೆ ಸೇರಿಸಿ ಕೊಡತಕ್ಕದ್ದೆಂದು ನಿಷ್ಕರ್ಷಿಸಿದೆ'. ರಾಯರು ಸಾಲವನ್ನೂ ತೀರಿಸಲಿಲ್ಲ, ಬಡ್ಡಿಯನ್ನೂ ಕೊಡಲಿಲ್ಲ, ಒತ್ತೆಯಿಟ್ಟ ಒಡವೆಗಳು ಹಿಂದಕ್ಕೂ ಬರಲಿಲ್ಲ.

ಚಾಮರಾಜಪೇಟೆಯ ವಾಹಿನಿ ಆಚಾರ್ಯರ ಎಂಬವರು ಕೆಂಪಾಂಬುಧಿ ಕೆರೆ ದಂಡೆಯಲ್ಲಿ ದಾನವಾಗಿ ನೀಡಿದ ನಿವೇಶನದಲ್ಲಿ ರಾಯರು ಒಂದು ಸಣ್ಣ ಹೆಂಚಿನ ಮನೆ ಕಟ್ಟಿಸಿದರು. ಕೊನೆಯವರೆಗೂ ಜೀವನವನ್ನು ಅಲ್ಲಿಯೇ ಕಳೆದರು. ೧೯೪೦ರ ಒಂದು ದಿನ ನಿತ್ಯವಿಧಿಯಂತೆ ಕೆರೆಯಲ್ಲಿ ಈಜಿ ಬಂದರು. ಮನೆಗೆ ಬಂದವರೆ ಸ್ವಲ್ಪ ಆಯಾಸವಾಗುತ್ತಿದೆ ಎಂದರು 'ಇನ್ನು ಐದು ನಿಮಿಷದಲ್ಲಿ ಪ್ರಯಾಣ ಬೆಳೆಸುತ್ತೇನೆ. ಈಗ ನಕ್ಷತ್ರ ಚೆನ್ನಾಗಿಲ್ಲ. ಆಚೆ ಮಲಗಿಸಿ, ಇಲ್ಲದಿದ್ದರೆ ೫ ತಿಂಗಳು ಮನೆ ಬಿಡಬೇಕಾಗುತ್ತೆ, ವರವಣಿ ರಾಮರಾಯರಿಗೆ ಹೇಳಿ ಕಳುಹಿಸಿ' ಎಂದು ತಾವಾಗಿಯೇ ಬಂದು ಹೊರಗೆ ಮಲಗಿದರು. ಸ್ನೇಹಿತರು ಬರುವ ಹೊತ್ತಿಗೆ ಅವರು ಇಹಲೋಕದ ವ್ಯಾಪಾರ ಮುಗಿಸಿದ್ದರು. ಇದು ರಾಯರು ಬದುಕಿದ ರೀತಿ.

(ಹರಿದಾಸರ ಹಿನ್ನೆಲೆಯಲ್ಲಿಯೇ ಬಂದಿದ್ದ ಲಕ್ಷ್ಮೀನಾರಾಯಣರಾಯರು ಹರಿದಾಸರ ಕೀರ್ತನೆಗಳನ್ನು ಸಂಗ್ರಹಿಸುವ, ಶುದ್ಧಪ್ರತಿಗಳನ್ನು ತಯಾರಿಸುವ ಕಾರ್ಯದಲ್ಲಿ ತಮ್ಮನ್ನು ಸಂಪೂರ್ಣವಾಗಿ ತೊಡಗಿಸಿಕೊಂಡರು. ಸುಬೋಧ ಪುಸ್ತಕಮಾಲೆಯಲ್ಲಿ ಪ್ರಕಟವಾದ ಎಲ್ಲ ಹರಿದಾಸರ ಕೃತಿಗಳ ಸಂಗ್ರಹಕಾರರು ದಾಸರ ಲಕ್ಷ್ಮೀನಾರಾಯಣರಾಯರು. ಪರಿಶೋಧಕರು ಬಿ. ನಾಗೇಶರಾಯರು ಮತ್ತು ವರವಣಿ ರಾಮರಾಯರು. ಸಂಪಾದಕರು ಸುಬೋಧ ರಾಮರಾಯರು. ಹೀಗೆ ಈ ನಾಲ್ಕು ಮಂದಿ ಮಹನೀಯರು ಹರಿದಾಸ ಸಾಹಿತ್ಯದ ಪ್ರವರ್ತಕರಾಗಿ ಅಪಾರ ಸಾಹಿತ್ಯ ರಾಶಿಯನ್ನು ಬೆಳಕಿಗೆ ತಂದರು. ಪ್ರಾಚೀನ ವಹಿಗಳಲ್ಲಿ, ಹಸ್ತಪ್ರತಿಗಳಲ್ಲಿ ದೊರೆಯುವ ದಾಸ ಸಾಹಿತ್ಯವನ್ನು ಪ್ರತ್ಯೇಕವಾಗಿ ಪ್ರತಿ ಮಾಡುವುದು, ಇತರ ಮುದ್ರಿತ ಕೃತಿಗಳೊಂದಿಗೆ ಹೋಲಿಸಿ ಪಾಠಾಂತರಗಳನ್ನು ನಿರ್ಧರಿಸುವುದು, ಕೀರ್ತನೆಗಳ ಅಕಾರಾದಿಗಳನ್ನು ತಯಾರಿಸಿ ಅಚ್ಚಿನ ಪ್ರತಿಯನ್ನು ಸಿದ್ಧಮಾಡುವುದು, ಈ ಎಲ್ಲ ಕಾರ್ಯಗಳನ್ನು ಈ ನಾಲ್ಕು ಮಂದಿ ಮಹನೀಯರು ನಿರ್ವಹಿಸುತ್ತಿದ್ದರು. ಈ ಕಾರ್ಯದಲ್ಲಿ ಲಕ್ಷ್ಮೀನಾರಾಯಣರ ಪಾತ್ರವೇನೆಂಬುದನ್ನು ಸುಬೋಧ ರಾಮರಾಯರು ಹೀಗೆ ತಿಳಿಸಿದ್ದಾರೆ.)

"ಹರಿದಾಸ ಕೀರ್ತನ ತರಂಗಿಣಿಯಲ್ಲಿ ಪ್ರಕಟವಾಗುವ ಪದ, ಸುಳಾದಿ, ಉಗಾಭೋಗಗಳು, ಅಲ್ಲಿ ಇಲ್ಲಿ ಛಾಪೆಯಾದ ಪುಸ್ತಕಗಳಿಂದ ಎತ್ತಿ ಬರೆದು ಸಂಗ್ರಹಿಸಿದುವಲ್ಲ. ಶ್ರೀ ವಿಜಯದಾಸರ ಪ್ರಥಮ ಶಿಷ್ಯರೂ, ವೇಣುಗೋಪಾಲ ವಿಠಲಾಂಕಿತರೂ ಆದ ಶ್ರೀ ತಿಮ್ಮಣ್ಣದಾಸರ ಶಿಷ್ಯ ಪರಂಪರೆಯಲ್ಲಿ ಅನೂಚಾನವಾಗಿ ಬರೆದಿಟ್ಟುಕೊಂಡು ಬಂದ ಹಸ್ತಪ್ರತಿಗಳು ಅದೇ ವಂಶೀಕರಾದ ದೊಡ್ಡಬಳ್ಳಾಪುರದ ಬಾಲಕೃಷ್ಣರಾಯರ ಮಕ್ಕಳು ಪ್ರಸ್ತುತಕ್ಕೆ ಬೆಂಗಳೂರಿನಲ್ಲಿರುವ ದಾಸರ ಲಕ್ಷ್ಮೀನಾರಾಯಣರಾಯರಲ್ಲಿ ದೊರೆತವು ...... (ತಮ್ಮಲ್ಲಿದ್ದ ದಾಸರ-ಪದಗಳ ಪುರಾತನ ಪ್ರತಿಗಳನ್ನು ಒದಗಿಸಿಕೊಟ್ಟುದಲ್ಲದೆ, ಎಲ್ಲೆಲ್ಲಿಯೋ ದೊರೆಯುವ ದಾಸರ ಪದಗಳನ್ನು ಸಂಗ್ರಹಿಸಿ ಒದಗಿಸುವ ಮಹತ್ಕಾರ್ಯದಲ್ಲಿ) ದೀಕ್ಷೆಗೊಂಡು ವಾಗ್ದಾನ ಮಾಡಿರುವ ಶ್ರೀ ಲಕ್ಷ್ಮೀನಾರಾಯಣರಾಯರಿಗೆ ಚಿರಕೃತಜ್ಞರಾಗಿದ್ದೇವೆ."

(ಹರಿದಾಸ ಕೀರ್ತನೆಗಳ ಜೊತೆಗೆ ನವಸಾಲಪುರಿ ತಿಪ್ಪಣ್ಣಾರ್ಯನ ಹನುಮದ್ವಿಲಾಸ, ಕುಚೇಲೋಪಾಖ್ಯಾನ, ಕಾಳಿಯ ಮರ್ದನ ಕೃತಿಗಳನ್ನುಮೊದಲ ಬಾರಿಗೆ ಸಂಗ್ರಹಿಸಿ ಪ್ರಕಟಿಸಿದರು. ಹರಿದಾಸ ಸಾಹಿತ್ಯ ಸಂಗ್ರಹಕಾರ್ಯದಲ್ಲಿ ಲಕ್ಷ್ಮೀನಾರಾಯಣ ರಾಯರು ಸಲ್ಲಿಸಿದ ಸೇವೆಯನ್ನು ಗೌರವಿಸಿ ಸುಬೋಧ ರಾಮರಾಯರು ವಿಜಯದಾಸರ ಕೃತಿಗಳ ಸಂಪುಟವನ್ನು ಲಕ್ಷ್ಮೀನಾರಾಯಣರಾಯರಿಗೆ ೧೯೩೦ರಲ್ಲಿ ಅರ್ಪಣೆ ಮಾಡಿದರು.) "ಶ್ರೀ ಕರ್ನಾಟಕ ಹರಿದಾಸ ತರಂಗಿಣಿಯ ಪದಸಂಗ್ರಹಣದಲ್ಲಿ ಪ್ರಾರಂಭದಿಂದಲೂ ಅತ್ಯಾಸಕ್ತಿಯನ್ನು ವಹಿಸಿ ನಿರಂತರ ಪರಿಶ್ರಮ ಮಾಡುತ್ತಿರುವ ಶ್ರೀಮಾನ್ ದಾಸರ ಲಕ್ಷ್ಮೀನಾರಾಯಣ ರಾಯರ ಸನ್ನಿಧಿಯಲ್ಲಿ ಈ ಗ್ರಂಥವು ಸಂಪಾದಕನಿಂದ ಕೃತಜ್ಞತಾಪೂರ್ವಕವಾಗಿ ಸಮರ್ಪಿಸಲ್ಪಟ್ಟಿದೆ" ಎಂದು ತಿಳಿಸಿದ್ದಾರೆ.

(ಹರಿದಾಸರ ಕೃತಿಗಳ ನಿರಂತರವಾದ ಅಧ್ಯಯನದ ಜೊತೆಗೆ ಬಾಲ್ಯದಿಂದಲೂ ಇದ್ದ ಸಂಸ್ಕಾರ, ಸಂಸ್ಕೃತ ಜ್ಞಾನ ಇವುಗಳಿಂದ ಲಕ್ಷ್ಮೀನಾರಾಯಣರಾಯರು ಕೀರ್ತನೆಗಳನ್ನೂ, ಹರಿಕಥೆಗಳನ್ನೂ ರಚಿಸಿದರು. ಅವರ ಪದಗಳ ಅಂಕಿತ

'ಶ್ರೀಕಾಂತ'. ಇದು ಗುರುಗಳಿಂದ ಪಡೆದ ಅಂಕಿತವಲ್ಲ. ಸ್ವಪ್ನಾಂಕಿತ ಎಂದು ಅವರ ವಂಶಸ್ಥರು ಹೇಳುತ್ತಾರೆ.) ತಮಗೆ ಆಕಸ್ಮಿಕವಾಗಿ ಸಾಲಿಗ್ರಾಮವೊಂದು ದೊರೆತಾಗ ರಚಿಸಿದ ಮೊದಲ ಕೀರ್ತನೆ 'ಇಂದು ಕಂಡೆನು ಹರಿಯ' ಅನಂತರ ಹಲವಾರು ಸ್ವತಂತ್ರ ಕೃತಿಗಳನ್ನು ರಚಿಸಿದರು. ತಮ್ಮ ಅಧ್ಯಯನದಿಂದ ದತ್ತವಾಗಿದ್ದ ಜನಪ್ರಿಯ ಮಟ್ಟುಗಳನ್ನು ಅನುಕರಿಸಿದರು.

ವರದಾಚಾರ್ಯರ 'ಮನ್ಮಥ ವಿಜಯ' ನಾಟಕದ 'ಹಾ ಪ್ರಿಯಾ ಪ್ರಶಾಂತ ಹೃದಯಾ' ಎಂಬ ವಿರಹಗೀತೆ ಆ ಕಾಲದಲ್ಲಿ ಅತ್ಯಂತ ಜನಪ್ರಿಯವಾಗಿತ್ತು. ಎಲ್ಲ ಹೆಣ್ಣುಮಕ್ಕಳು ಈ ಶೋಕಗೀತೆಯನ್ನು ಹಾಡುವುದರಲ್ಲಿ ನಿರತರಾಗಿದ್ದಾಗ ಬೇಸರಗೊಂಡ ರಾಯರು 'ಬಂದು ನಿಲ್ಲೋ ಕಣ್ಣು ಮುಂದೆ ಮಂದಹಾಸಮುಖ' ಎಂಬ ಕೀರ್ತನೆಯನ್ನು ರಚಿಸಿದರು. ಮುಂದೆ ಅದೂ ಜನಪ್ರಿಯವಾಯಿತು. ('ಬೆಂಗಳೂರಿನಲ್ಲಿ ತುಂಗರೂಪದಲಿ ಕಂಗೊಳಿಸುವ ಬಸವನಗುಡಿಯ ದೊಡ್ಡಗಣೇಶನ ಸ್ತುತಿಯೇ ಗಣೇಶ ಸ್ತೋತ್ರ.' ಇವರ ಇಂದ್ರಾಕ್ಷಿಸ್ತೋತ್ರ, ನವಗ್ರಹ ಸ್ತೋತ್ರ, ಭವಾನುಭವಸಾರ ಈ ಕೃತಿಗಳು ವಿದ್ವಾಂಸರ ಮನ್ನಣೆಯನ್ನು ಪಡೆದವು. ಗೋವಧೆಯನ್ನು ವಿರೋಧಿಸಿದ ದಾಸರು ೧೦೯ ಸಾಂಗತ್ಯಗಳ ಗೋರಕ್ಷಣ ಗೀತೆಯನ್ನು ರಚಿಸಿ ಪ್ರಕಟಿಸಿದರು.)

(ಹರಿದಾಸರಾದರೂ ರಾಯರು ಕಟ್ಟಾ ಸಂಪ್ರದಾಯವಾದಿಗಳಲ್ಲ. ಕಾಲ, ದೇಶ, ವರ್ತಮಾನಕ್ಕೆ ಹೊಂದುವಂತೆ ನಡವಳಿಕೆ ಮತ್ತು ವೃತ್ತಿಗಳನ್ನು ಬದಲಿಸಿ ಕೊಳ್ಳುವುದು ಶಾಸ್ತ್ರ ವಿರೋಧವೂ ಅಲ್ಲ ಧರ್ಮವಿರೋಧವೂ ಅಲ್ಲ ಎಂದು ಭಾವಿಸಿದ್ದರು.) ತಮ್ಮ ಅಭಿಪ್ರಾಯ ಸಮರ್ಥನೆಗೆ ಅವರು ಕೊಡುತ್ತಿದ್ದ ಉದಾಹರಣೆಗಳು ಅರ್ಥಪೂರ್ಣವಾಗಿವೆ. ಸಹಗಮನ ಬಹಳ ವರ್ಷಗಳ ಕಾಲ ಪದ್ಧತಿಯಾಗಿತ್ತು. ಆದರೆ ಈ ಪದ್ಧತಿ ಸರಿಯಲ್ಲ ಎಂದು ಕಟ್ಟಳೆ ಮಾಡಿದ ಮೇಲೆ ಹಳೆಯ ಪದ್ಧತಿಯನ್ನು ಅನುಸರಿಸಲು ಸಾಧ್ಯವೇ? ಗೋಮೇಧ ಯಜ್ಞವನ್ನು ಶಾಸ್ತ್ರ ಸಮ್ಮತವೆಂದು, ಗೋಹತ್ಯೆಯನ್ನು ಸಮರ್ಥಿಸುವುದಾದರೆ ನರಮೇಧಯಜ್ಞವನ್ನು ಏಕೆ ಸಮರ್ಥಿಸಬಾರದು? ಎಂದು ಪ್ರಶ್ನಿಸಿದರು.

ಹರಿಕಥಾದಾಸರಿಗೆ ಅಗತ್ಯವಾದ ಪೌರಾಣಿಕ ಕಥಾಭಾಗಗಳನ್ನು ಸಿದ್ಧಪಡಿಸಿಕೊಡುವುದರಲ್ಲಿ ರಾಯರು ಪರಿಣತರಾಗಿದ್ದರು. ತಾವು ಸಂಗ್ರಹಿಸಿದ ತಿಪ್ಪಣಾರ್ಯನ ಹನುಮದ್ವಿಲಾಸವನ್ನು ವೆಂಕಣ್ಣದಾಸರಿಗೆ ಹರಿಕಥೆಯ ರೂಪದಲ್ಲಿ ಹೇಳಿಕೊಟ್ಟು ವೆಂಕಣ್ಣದಾಸರು ಅತ್ಯಂತ ಜನಪ್ರಿಯರಾಗುವಂತೆ ಮಾಡಿದರು. ವರವಣಿ ರಾಮರಾಯರು ಬರೆದ 'ಪುರಂದರದಾಸ' ನಾಟಕಕ್ಕೆ ಎಲ್ಲ ಹಾಡುಗಳನ್ನು ಬರೆದುಕೊಟ್ಟರು. ತಾವು ರಚಿಸಿಕೊಟ್ಟ ಹರಿಕಥೆಗಳ ಉಪಕಥೆಗಳ ಮಧ್ಯದಲ್ಲಿ ಸಮಯ ಸಂದರ್ಭ ಉಪಯೋಗಿಸಿಕೊಂಡು ದೇಶಭಕ್ತಿಯನ್ನೂ, ರಾಷ್ಟ್ರೀಯತೆ ಯನ್ನು ಉದ್ದೀಪಿಸುವ ಹಾಡುಗಳನ್ನು ಬರೆದುಕೊಟ್ಟರು. ಹರಿಕಥೆ ಆ ಕಾಲದಲ್ಲಿ ಅತ್ಯಂತ ಪ್ರಭಾವಶಾಲಿಯಾದ ಸಂವಹನ ಮಾಧ್ಯಮವಾಗಿತ್ತು. ತಾವು ನಂಬಿದ್ದ ದೇಶಭಕ್ತಿ, ಸ್ವದೇಶಿ ಚಳುವಳಿ, ಖಾದಿ ಪ್ರಚಾರ, ಸ್ವರಾಜ್ಯಕಲ್ಪನೆ, ಮೊದಲಾದವುಗಳನ್ನು ಹರಿಕಥೆಯ ಮೂಲಕ ಜನರಿಗೆ ತಲುಪಿಸಿದ್ದು ರಾಯರ ವಿಶೇಷ ಸಾಧನೆ. ಇದಕ್ಕಾಗಿಯೇ ಪಂಚವಿಂಶತಿ ರಾಷ್ಟ್ರೀಯ ಗೀತೆಗಳನ್ನು 'ದೇಶಬಾಂಧವರ' ಉಪಯೋಗಕ್ಕಾಗಿ ರಚಿಸಿದರು. ಹರಿದಾಸರ ಪದಗಳ ಶೈಲಿಯಲ್ಲಿಯೇ ಇರುವ ಈ ಕೃತಿಗಳು ಶುದ್ಧ ಲೌಕಿಕ ಆಶಯದ ಕೃತಿಗಳಾಗಿವೆ. ಕೀರ್ತನೆಗಳ ಜೊತೆಗೆ ಸಂಕ್ಷೇಪ ರಾಮಾಯಣ, ವೆಂಕಟೇಶ ಮಹಾತ್ಮೆ, ತುಳಸೀ ಅಷ್ಟೋತ್ತರ, ಮೊದಲಾದ ಕೃತಿಗಳನ್ನು ರಾಯರು ರಚಿಸಿದ್ದಾರೆ. ವಿಷ್ಣು ಸಹಸ್ರನಾಮದ ಅರ್ಥವನ್ನು ಕನ್ನಡದಲ್ಲಿ ಬರೆದಿದ್ದಾರೆ.

'ಶ್ರೀಕಾಂತ' ಅಥವಾ 'ಲಕ್ಷ್ಮೀಕಾಂತ' ಅಂಕಿತದಲ್ಲಿ ಸುಮಾರು ೧೦೦ ಕೀರ್ತನೆಗಳು ದೊರೆತಿವೆ. ಇವುಗಳಲ್ಲಿ ಹಲವಾರು ಕೀರ್ತನೆಗಳು ಬೇರೆ ಬೇರೆ ಹರಿಕಥೆಗಳಲ್ಲಿ ಕಥಾಸಂದರ್ಭಕ್ಕೆ ಅನುಗುಣವಾಗಿ ಬಳಸುವಂತೆ ಬರೆದವುಗಳು. ಸೀಸಪದ್ಯಗಳನ್ನು ಉಗಾಭೋಗಗಳಂತೆ ಅನೇಕ ಕಡೆ ಬಳಸಿದ್ದಾರೆ. ಕೀರ್ತನೆಗಳಲ್ಲಿ ದೇವರನಾಮದ ಗುಂಪಿಗೆ ಸೇರಿದ ರಚನೆಗಳೇ ಹೆಚ್ಚು. ಭಾಷೆ, ಶೈಲಿ, ಮತ್ತು ನಿರೂಪಣೆಗಳಲ್ಲಿ ಸಂಪ್ರದಾಯತೆಯೇ ಹೆಚ್ಚು. ಇಂದು ಕಂಡೆನೊ ಹರಿಯ,

ಕೋಪಮಾಡುವರೆ ಕೃಪಾಳು, ನಾರಸಿಂಹನೇ ರಕ್ಷಿಸೆನ್ನ ಪಕ್ಷಿವಾಹನ, ಸಡಿಲ ಬಿಡದೆ ಕೈಯ ಪಿಡಿದು ಉದ್ಧರಿಸಯ್ಯ, ಇಂದ್ರಾಕ್ಷಿ ಸಲಹೆ ಬಂದು–ಈ ಕೃತಿಗಳಲ್ಲಿ ಬಿಗಿಯಾದ ಬಂಧಗಳನ್ನು ಗುರುತಿಸಬಹುದು. 'ರಮಾಸಮುದ್ರನ ಕುಮಾರಿ ನಿನ್ನ ಸರಿಸಮಾನರಾರಮ್ಮ' ಎಂಬ ಕಮಲೇಶವಿಠಲರ ಮತ್ತು ಪ್ರಾಣನಾಥ ವಿಠಲರ ಕೃತಿಗಳ ಅನುಕರಣೆಯನ್ನು 'ಹಿಮಾಚಲೇಂದ್ರನ ಕುಮಾರಿ ಶಂಕರಿ' ಕೃತಿಯಲ್ಲಿ ಗುರುತಿಸಬಹುದು. ( ಪುರಂದರದಾಸರ ವೈರಾಗ್ಯಕ್ಕೆ ಕಾರಣವಾಯಿತೆನ್ನಲಾದ ಮೂಗುತಿ ಕಥೆಯ ಹಿನ್ನೆಲೆಯಲ್ಲಿ ಪುರಂದರದಾಸರ ಜೀವನ ಮತ್ತು ಸಾಹಿತ್ಯ ಸಾಧನೆಗಳನ್ನು ೨೧ ನುಡಿಗಳಲ್ಲಿ ನಿರೂಪಿಸಿದ್ದಾರೆ. ಈ ಒಂದೊಂದು ನುಡಿಗಳೂ ಪ್ರಾಸಾನುಪ್ರಾಸಗಳಿಂದ ಕೂಡಿದ ಅಷ್ಟಪದಿಗಳಾಗಿವೆ. ಶ್ರೀಪಾದರಾಜರನ್ನು ಕುರಿತ ೯ ನುಡಿಗಳ 'ಗುರುಸ್ತುತಿ'ಯು ಶ್ರೀನಿಧಿತೀರ್ಥರ ಶ್ರೀಪಾದರಾಜಾಷ್ಟಕದ ಅನುವಾದದಂತೆ ಇದೆ. ತತ್ವಚಿಂತನೆ, ಆತ್ಮಶೋಧನೆ ಮತ್ತು ನೀತಿಗೆ ಮೀಸಲಾದ ಕೃತಿ 'ಮಾಧವಗೀತೆ'. ಒಂದೊಂದು ನುಡಿಯೂ ಪ್ರತ್ಯೇಕವಾದ ಮುಕ್ತಕದಂತೆ 'ಮಾಧವ' ಎಂಬ ಅಂಕಿತದೊಂದಿಗೆ ಮುಕ್ತಾಯವಾಗುತ್ತದೆ.) ಭಾಗವತ, ಭಾರತ, ಪುರಾಣಗಳ ಉದಾಹರಣೆಗಳನ್ನು ನೀಡುತ್ತಾ ಭಕ್ತಿ, ಕರ್ಮ, ಪೂಜೆ, ದಾನ, ಅತಿಥಿ ಸತ್ಕಾರ, ಡಾಂಬಿಕ ಆಚಾರಗಳ ವಿಡಂಬನೆ, ಲೋಕನೀತಿ, ಹರಿನಾಮದ ಹಿರಿಮೆ, ದಾಸತ್ವದ ಹಿರಿಮೆ ಮೊದಲಾದ ಸಂಗತಿಗಳನ್ನು ನಿರೂಪಿಸಿದ್ದಾರೆ. ಈ ಯಾವ ಮಾತುಗಳೂ ಹೊಸದಲ್ಲವೆಂದೂ, ತಮ್ಮದೂ ಅಲ್ಲವೆಂದೂ ಕಾಲಕಾಲದಲ್ಲಿ ಸಂತರು ನುಡಿದ ಸೂಕ್ತಿಗಳನ್ನು ಮಾಲೆಗೈದು ಅರ್ಪಿಸುವುದಾಗಿ ತಿಳಿಸಿದ್ದಾರೆ.

ಲಕ್ಷ್ಮೀನಾರಾಯಣರಾಯರು ಯಾವುದೇ ಖಚಿತವಾದ ವೃತ್ತಿಯನ್ನು ಅವಲಂಬಿಸದೆ ಹರಿದಾಸರ ಹಾಡುಗಳ ಸಂಗ್ರಹ ಮತ್ತು ಪ್ರಚಾರದಲ್ಲಿ ಜೀವನವನ್ನು ಸವೆಸಿದ ಸಾಧಕರು. ಅವರನ್ನು ದಾಸಸಾಹಿತ್ಯದ ಪ್ರವರ್ತಕರೆಂದೇ ಅವರ ಸಮಕಾಲೀನರು ಗುರುತಿಸಿದ್ದರು.

# ವರವಣಿ ರಾಮರಾಯರು (೧೮೯೯–೧೯೫೪)

'ಕರಿಗಿರೀಶ' ಅಂಕಿತದ ರಾಮರಾಯರ ಪೂರ್ವಿಕರ ವಾಸಸ್ಥಳ ಕೋಲಾರ ಜಿಲ್ಲೆಯ ಉತ್ತರ ಪಿನಾಕಿನಿ ತೀರದ ವರವಣಿ ಗ್ರಾಮ. ವ್ಯಾಸರಾಜ ಮಠದ ಯತಿಗಳಾಗಿದ್ದ ಜಗನ್ನಾಥತೀರ್ಥರ ಜನ್ಮಸ್ಥಳವಾದ ವರವಣಿ ಒಂದು ಕಾಲದಲ್ಲಿ ಅನೇಕ ವಿದ್ವನ್ಮಣಿಗಳ ಕೇಂದ್ರವಾಗಿತ್ತು. ಮಾಧ್ವರ ಅರವತ್ತೊಕ್ಕಲಿನ ಭಾರದ್ವಾಜ ಗೋತ್ರದ ದೇಶಪಾಂಡೆ ಮನೆತನಕ್ಕೆ ಸೇರಿದ ಗುರುರಾಜರಾಯರಿಗೆ ಸುಬ್ಬರಾಯರು ಮತ್ತು ನರಸಿಂಹಮೂರ್ತಿ ಎಂಬ ಇಬ್ಬರು ಮಕ್ಕಳು. ಇವರಲ್ಲಿ ಸುಬ್ಬರಾಯರು ಲೌಕಿಕ ವೃತ್ತಿಯನ್ನು ಮಾಡದೆ ಹರಿದಾಸ ವೃತ್ತಿಯನ್ನೇ ಕೈಗೊಂಡರು. ವರವಣಿಯ ಉತ್ತರ ಪಿನಾಕಿನಿ ತೀರದಲ್ಲಿ ಮರಳಿನಲ್ಲಿ ಹೂತು ಹೋಗಿದ್ದ ಪ್ರಾಣದೇವರನ್ನು ಪುನಃ ಪ್ರತಿಷ್ಠಾಪನೆ ಮಾಡಿ ಹರಿದಾಸ ವೃತ್ತಿಯನ್ನು ಮುಂದುವರೆಸಿದರು. 'ವಾಮನವಿಠಲ' ಎಂಬ ಅಂಕಿತದಿಂದ ಕೀರ್ತನೆಗಳನ್ನು ರಚಿಸಿದರು.

ಊರಿನ ಶಾನುಭೋಗರಾಗಿ ತಕ್ಕ ಮಟ್ಟಿಗೆ ಅನುಕೂಲಸ್ಥರಾಗಿದ್ದ ಗುರುರಾಜರಾಯರು ತಮ್ಮ ಎರಡನೆಯ ಮಗ ನರಸಿಂಹಮೂರ್ತಿಗೆ ಧಾರ್ಮಿಕ ವಿದ್ಯೆಯ ಜೊತೆಗೆ ಇಂಗ್ಲೀಷ್ ವಿದ್ಯಾಭ್ಯಾಸವನ್ನೂ ಮಾಡಿಸಿದರು. ಬೆಂಗಳೂರು ಮತ್ತು ಮದ್ರಾಸ್‌ಗಳಲ್ಲಿ ವಿದ್ಯಾಭ್ಯಾಸ ಮಾಡಿದ ನರಸಿಂಹಮೂರ್ತಿಗಳು ಆಗಿನ ಮದ್ರಾಸ್ ವಿಶ್ವವಿದ್ಯಾನಿಲಯದ ಪದವಿಯನ್ನು ಪಡೆದರು. ಮೈಸೂರು ಸರ್ಕಾರದ ಅರಣ್ಯ ಇಲಾಖೆಯಲ್ಲಿ ಉನ್ನತ ಅಧಿಕಾರಿಗಳಾದರು. ಪ್ರಾರಂಭದಲ್ಲಿ ಅವರು ಇಂಗ್ಲೀಷ್‌ನಲ್ಲಿ ಪದ್ಯಗಳನ್ನು ಬರೆಯುತ್ತಿದ್ದರು. ಅನಂತರ ಮುದ್ದುಮೋಹನದಾಸರ ಶಿಷ್ಯರಾಗಿ 'ನಾರಸಿಂಹ' ಎಂಬ ಅಂಕಿತ ಪಡೆದು ಅನೇಕ ಕೀರ್ತನೆಗಳನ್ನು ರಚಿಸಿದರು. ಶಶಿರೇಖಾ ಪರಿಣಯ. ಮೂರುವರೆ ವಜ್ರದ ಕಥೆ ಎಂಬ ಕಥಾ ಕೀರ್ತನೆಗಳನ್ನು, ಕಲಿಯುಗ ಮಹಾತ್ಮೆ ಎಂಬ ಖಂಡಕಾವ್ಯವನ್ನು ಬರೆದಿದ್ದಾರೆ.

ನರಸಿಂಹಮೂರ್ತಿಗಳ ಪತ್ನಿ ಮದಗೊಂಡನಹಳ್ಳಿ ಲಕ್ಷಮ್ಮ. ಬೆಂಗಳೂರಿನಲ್ಲಿ ವಾಸವಾಗಿದ್ದ ಈ ದಂಪತಿಗಳಿಗೆ ಮೂವರು ಗಂಡುಮಕ್ಕಳು, ಮೂವರು

ಹೆಣ್ಣುಮಕ್ಕಳು. ಇವರಲ್ಲಿ ರಾಮರಾಯರೇ ಕಿರಿಯರು. ಹೀಗೆ ದಾಸ ಪರಂಪರೆಯ ಹಿನ್ನಲೆಯುಳ್ಳ ಸುಸಂಸ್ಕೃತ ವಿದ್ಯಾವಂತರ ಕುಟುಂಬದಲ್ಲಿ ರಾಮರಾಯರು ಜನಿಸಿದ್ದು ೧೮೯೯ರಲ್ಲಿ. ಇಂಗ್ಲೀಷ್ ವಿದ್ಯಾಭ್ಯಾಸಕ್ಕೆ ತುಂಬ ಪ್ರಾಮುಖ್ಯತೆ ದೊರೆತಿದ್ದ ಕಾಲ ಅದು. ಬೆಂಗಳೂರಿನ ವೆಸ್ಲಿಯನ್ ಮಿಷನ್ ಸ್ಕೂಲ್‌ನಲ್ಲಿ ಮೆಟ್ರಿಕ್ಯುಲೇಷನ್ ಮುಗಿಸಿದ ರಾಮರಾಯರು ಮದ್ರಾಸ್ ವಿಶ್ವವಿದ್ಯಾನಿಲಯದಲ್ಲಿ ಎಫ್. ಎ. ಪದವಿ ಪಡೆದರು. ಅನಂತರ ಮೈಸೂರು ಮಹಾರಾಜ ಕಾಲೇಜಿನಿಂದ ಬಿ.ಎ. ಪದವಿ ಪಡೆದರು. ೧೯೨೪ರಲ್ಲಿ ಸಿವಿಲ್ ಸರ್ವಿಸ್ ಪರೀಕ್ಷೆಯನ್ನು ತೆಗೆದುಕೊಂಡು ರಾಮರಾಯರು ಅಮಲ್ದಾರ್ ಹುದ್ದೆಗೆ ಆಯ್ಕೆಯೂ ಆದರು. ಆದರೆ ಆಡಳಿತ ಮತ್ತು ಅಧಿಕಾರಗಳ ಕಡೆ ಅವರಿಗೆ ಒಲವಿರಲಿಲ್ಲ. ಇಂಗ್ಲೀಷ್ ಮತ್ತು ಕನ್ನಡ ಭಾಷೆಗಳಲ್ಲಿ ಇವರಿಗಿದ್ದ ಪ್ರೌಢಿಮೆಯನ್ನು ಗುರುತಿಸಿದ ಶ್ರೀ. ಸಿ. ಕೆ. ವೆಂಕಟರಾಮಯ್ಯನವರು ಭಾಷಾಂತರ ಇಲಾಖೆಗೆ ಸೇರುವಂತೆ ಸಲಹೆ ಮಾಡಿದರು. ಮೊದಲಿನಿಂದಲೂ ಸಾಹಿತ್ಯ ಸಂಗೀತಗಳಲ್ಲಿ ಒಲವನ್ನು ಬೆಳೆಸಿಕೊಂಡಿದ್ದ ರಾಮರಾಯರು ಸಾಹಿತ್ಯ ಸೇವೆಯನ್ನು ಮುಂದುವರೆಸಲೆಂದು ಭಾಷಾಂತರ ಇಲಾಖೆಯಲ್ಲೇ ಮುಂದುವರೆದರು. ತಮ್ಮ ಸೇವಾ ಅವಧಿಯ ಬಹುಭಾಗವನ್ನು ಬೆಂಗಳೂರಿನಲ್ಲೇ ಕಳೆದದ್ದರಿಂದ ರಾಮರಾಯರ ಸಾಹಿತ್ಯ ಚಟುವಟಿಕೆಗಳಿಗೆ ಉತ್ತಮ ಪರಿಸರ ದೊರೆತಿತ್ತು. ಮೂವತ್ತರ ದಶಕದಲ್ಲಿ ಬೆಂಗಳೂರು ಹಲವಾರು ಸಾಹಿತ್ಯ ಚಟುವಟಿಕೆಗಳ ಕೇಂದ್ರಸ್ಥಾನವಾಗಿತ್ತು. ತಂದೆಮುದ್ದುಮೋಹನದಾಸರು, ರಾಘವೇಂದ್ರದಾಸರು, ವೆಂಕಣ್ಣದಾಸರು ಮೊದಲಾದ ಹರಿದಾಸರ ಪರಿಚಯ, ಸುಬೋಧ ರಾಮರಾಯರು ಮತ್ತು ದಾಸರ ಲಕ್ಷ್ಮೀನಾರಾಯಣರಾಯರ ಸ್ನೇಹ ಇವುಗಳಿಂದ ರಾಮರಾಯರು ಉತ್ತೇಜಿತರಾದರು, 'ಹರಿದಾಸ ಸೇವಾ ಸಮಿತಿ' ಎಂಬ ಸಂಸ್ಥೆಯನ್ನು ಸ್ಥಾಪಿಸಿದರು. ದಾಸರ ಲಕ್ಷ್ಮೀನಾರಾಯಣರಾಯರ ಹಸ್ತಪ್ರತಿ ಸಂಗ್ರಹದಿಂದ ಬೇರೆ ಬೇರೆ ದಾಸರುಗಳ ಕೀರ್ತನೆಗಳನ್ನು ಪ್ರತ್ಯೇಕವಾಗಿ ಸಿದ್ಧಪಡಿಸಿದರು. ಕೀರ್ತನೆಗಳ ಸಂಗ್ರಹ, ಅಧ್ಯಯನ, ಇವುಗಳಲ್ಲಿ ದಾಸರ ಲಕ್ಷ್ಮೀನಾರಾಯಣರಾಯರ ಜೊತೆ ಹಗಲಿರುಳೂ ದುಡಿದರು. ಕಛೇರಿಯ ಕೆಲಸವನ್ನು ಹೊರತುಪಡಿಸಿ ಅವರ ದಿನಚರಿಯ ಬಹುಭಾಗ ದಾಸ ಸಾಹಿತ್ಯಕ್ಕೇ ಮೀಸಲಾಗಿತ್ತು.

ಪ್ರತಿದಿನ ಕಛೇರಿ ಕೆಲಸವನ್ನು ಮುಗಿಸಿಕೊಂಡು ರಾಯರು ನೇರವಾಗಿ ಲಾಲ್‌ಬಾಗ್ ಗುಡ್ಡದ ಕೆಂಪೇಗೌಡನ ಗೋಪುರದ ಹತ್ತಿರ ಬರುತ್ತಿದ್ದರು. ದಾಸರ ಲಕ್ಷ್ಮೀನಾರಾಯಣರಾಯರು ಮುಂಚಿತವಾಗಿಯೇ ಬಂದು ಕಾದಿರುತ್ತಿದ್ದರು. ಕನಿಷ್ಠ ಎರಡು ಮೂರು ಘಂಟೆಗಳ ಕಾಲ ಹರಿದಾಸರ ಕೃತಿಗಳ ಚರ್ಚೆಯಾದ ಮೇಲೆ ಮನೆ ಕಡೆ ಬರುತ್ತಿದ್ದರು. ಬಿಡುವಿನ ದಿನಗಳಲ್ಲಿ ಸುಬೋಧ ರಾಮರಾಯರನ್ನು ಜೊತೆಗೆ ಕರೆದುಕೊಂಡು ಲಾಲ್‌ಬಾಗ್ ಗುಡ್ಡ ಅಥವಾ ಬಸವನಗುಡಿ ದಿಬ್ಬದಲ್ಲಿ ಹರಿದಾಸರ ಕೃತಿಗಳನ್ನು ಚರ್ಚಿಸುತ್ತಿದ್ದರು. ಮುದ್ರಣದ ಪ್ರತಿಗಳನ್ನು ಅಲ್ಲೇ ಸಿದ್ಧಪಡಿಸುತ್ತಿದ್ದರು. ಸುಬೋಧರಾಮರಾಯರು ಪ್ರಕಟಿಸಿದ 'ಹರಿದಾಸ ಸಾಹಿತ್ಯ ತರಂಗಿಣಿ' ಸಂಪುಟಗಳು ಸಿದ್ಧವಾದುದು ಹೀಗೆ.

ದಾಸರ ಲಕ್ಷ್ಮೀನಾರಾಯಣರಾಯರನ್ನು ಸ್ನೇಹಿತರು ಎನ್ನುವುದಕ್ಕಿಂತ ಗುರುಗಳೆಂದೇ ರಾಮರಾಯರು ಭಾವಿಸಿದ್ದರು. ಅವರಿಂದಲೇ 'ಕರಿಗಿರೀಶ' ಎಂಬ ಅಂಕಿತವನ್ನು ಸ್ವೀಕರಿಸಿ ಕೃತಿಗಳನ್ನು ರಚಿಸಿದರು. ಅನೇಕ ಹರಿಕಥೆಗಳನ್ನು ಸಿದ್ಧಪಡಿಸಿದರು. ವೆಂಕೋಬದಾಸರು ಮಾಡುತ್ತಿದ್ದ ಎಲ್ಲ ಹರಿಕಥೆಗಳಿಗೂ ಕಥೆಗಳನ್ನೂ, ಹಾಡುಗಳನ್ನೂ ಸಿದ್ಧಪಡಿಸಿಕೊಟ್ಟವರು ರಾಮರಾಯರೇ. ಭರತನ ಭಕ್ತಿ , ಸುಗ್ರೀವ ಸಖ್ಯ, ರುಕ್ಮಿಣೀ ಕಲ್ಯಾಣ, ಶ್ರೀನಿವಾಸ ಕಲ್ಯಾಣ, ಪುರಂದರದಾಸರು, ವ್ಯಾಸರಾಜರು, ವಾದಿರಾಜರು ಹೀಗೆ ಹಲವು ಹರಿಕಥೆಗಳನ್ನು ಸಿದ್ಧಪಡಿಸಿದರು. ಚಾಮರಾಜಪೇಟೆಯ ಮಾಧ್ವ ಸಂಘದ ಸ್ಥಾಪಕರಲ್ಲಿ ಒಬ್ಬರಾಗಿ ಆ ಸಂಸ್ಥೆಯ ಮೂಲಕ ಅನೇಕ ಹರಿದಾಸ ಗೋಷ್ಠಿಗಳನ್ನು ನಡೆಸಿದರು. ಐವತ್ತರ ದಶಕದಲ್ಲಿ ಪ್ರಸಿದ್ಧವಾಗಿದ್ದ 'ಹರಿದಾಸ ಭಾರತಿ' ಪತ್ರಿಕೆಯಲ್ಲಿ ಅನೇಕ ಲೇಖನಗಳನ್ನು ಬರೆದರು. 'ಹರಿದಾಸರ ಕೃತಿಗಳಲ್ಲಿ ಶ್ರೀ ಮದ್ವಾಚಾರ್ಯರ ಮತ್ತು ಅವರ ಸಿದ್ಧಾಂತ', ವ್ಯಾಸರಾಯರ ವ್ಯಕ್ತಿತ್ವ, ಶ್ರೀ ವ್ಯಾಸರಾಯರ ಕನ್ನಡ ಕೃತಿಗಳ ಸ್ವಾರಸ್ಯ, ಹರಿದಾಸರ ಕೃತಿಗಳಲ್ಲಿ ಶ್ರೀಕೃಷ್ಣ ಚರಿತಾನುವರ್ಣನೆ, ಹೀಗೆ ಲೇಖನ ಮಾಲೆಗಳನ್ನು ಬರೆದು ದಾಸಸಾಹಿತ್ಯದ ಪ್ರಚಾರ ಮಾಡಿದರು. ದಾಸ ಸಾಹಿತ್ಯಕ್ಕೆ ಸಂಬಂಧಿಸಿದಂತೆ ನಾಡಿನ ಬೇರೆ ಬೇರೆ ಕಡೆಗಳಲ್ಲಿ ಉಪನ್ಯಾಸ ನೀಡಿದರು.

ಮೈಸೂರು ಮಹಾರಾಜರಾಗಿದ್ದ ಶ್ರೀ ಜಯಚಾಮರಾಜೇಂದ್ರ ಒಡೆಯರಿಗೆ ಕನ್ನಡ ಮತ್ತು ಇಂಗ್ಲೀಷ್ ಭಾಷೆಗಳಲ್ಲಿ ಭಾಷಣಗಳನ್ನು ಸಿದ್ಧಪಡಿಸಿಕೊಡುವ ಜವಾಬ್ದಾರಿಯನ್ನು ಸರ್ಕಾರ ರಾಮರಾಯರಿಗೆ ವಹಿಸಿತ್ತು. ಧರ್ಮ ಮತ್ತು ಸಾಹಿತ್ಯಪ್ರಿಯತೆಗಳನ್ನು ಸಾಂದರ್ಭಿಕವಾಗಿ ರಾಯರು ಭಾಷಣಗಳಲ್ಲಿ ಅಳವಡಿಸಿದರು. ಬೆಂಗಳೂರಿನ ಜಯನಗರ ಬಡಾವಣೆಗೆ ಮಹಾರಾಜರು ಶಂಕುಸ್ಥಾಪನೆ ಮಾಡಿದಾಗ, ಜಯಗೀತೆಯನ್ನು ರಚಿಸಿದ ರಾಮರಾಯರು ಅದನ್ನು ವೆಂಕೋಬದಾಸರಿಂದ ಹಾಡಿಸಿದರು.

ರಾಮರಾಯರು ಸ್ವರ್ಗಸ್ಥರಾಗಿದ್ದು ೩೧-೧೦-೧೯೫೪ರಲ್ಲಿ. ಆಗ ಅವರಿಗಿನ್ನೂ ೫೫ ವರ್ಷ. ಮಾಧ್ವಸಂಘ ಮತ್ತು ಹರಿದಾಸ ಸಾಹಿತ್ಯ ಇವೆರಡರ ಸೇವೆಗೆ ತಮ್ಮ ಜೀವನದ ಮತ್ತು ಆದಾಯದ ಬಹುಭಾಗವನ್ನು ವಿನಿಯೋಗಿಸಿದ್ದ ರಾಮರಾಯರು ಸ್ವಂತಕ್ಕೆ ಯಾವ ಆಸ್ತಿಯನ್ನೂ ಮಾಡಲಿಲ್ಲ. ಹಸ್ತಪ್ರತಿಗಳ ಮತ್ತು ಗ್ರಂಥಗಳ ಸಂಗ್ರಹವೇ ಅವರ ದೊಡ್ಡ ಆಸ್ತಿಯಾಗಿತ್ತು.

'ಕರಿಗಿರೀಶ' ಅಂಕಿತದಲ್ಲಿ ದೊರೆಯುವ ಅವರ ಕೀರ್ತನೆಗಳ ಸಂಖ್ಯೆ ಸುಮಾರು ೧೧೦. ಇವುಗಳಲ್ಲಿ ದೇವತಾಸ್ತುತಿಗಳೇ ಹೆಚ್ಚು. ಅದರಲ್ಲೂ ರಾಮನಿಗೆ, ರಾಮಾಯಣಕ್ಕೆ ಸಂಬಂಧಿಸಿದ ಕೀರ್ತನೆಗಳೇ ಅಧಿಕ. ರಾಮಾಯಣವನ್ನೂ, ರಾಮಾಯಣದ ಕಥಾಪ್ರಸಂಗಗಳನ್ನೂ ಹಾಡುಗಳಿಗೆ ಅಳವಡಿಸುವ ಮೂಲಕ ರಾಯರು ರಾಮಾಯಣದ ಪ್ರಸಾರ ಕಾರ್ಯವನ್ನೂ ಮಾಡಿದ್ದಾರೆ. ಶ್ರೀ ಹರಿಯ ಸರ್ವೋತ್ತಮತ್ವವನ್ನು ತಿಳಿಸುವ ವಿಶೇಷಣಗಳನ್ನು ಸಂದರ್ಭೋಚಿತವಾಗಿ ಕೀರ್ತನೆಗಳಲ್ಲಿ ಅಳವಡಿಸಿದ್ದಾರೆ. ಹರಿಭಕ್ತಿ ನಿರೂಪಣೆಯಲ್ಲಿ ಹರಿದಾಸರ ಪ್ರಭಾವದಂತೆಯೇ, ಕುಮಾರವ್ಯಾಸ ಮತ್ತು ಲಕ್ಷ್ಮೀಶರ ಕಾವ್ಯಗಳ ಪ್ರಭಾವವನ್ನು ಗುರುತಿಸಬಹುದು.

೧. ಕರಿಗಿರೀಶನ ನಿಜಶರಣರಿಗಪಮಾನ
ನೆರೆ ಉಡಿಯಲಿ ಕಟ್ಟಿಕೊಂಡ ಕೆಂಡ ದಿಟವು (ಕೀ.೩೪೭)

೨. ಉರಿಗಂಜೆ, ಸೆರೆಗಂಜೆ ಹರಣದಾ ಭಯಕಂಜೆ
ಒರೆದ ವಚನಕೆ ಅನೃತ ಸಂಘಟಿಸಲದಕೆ
ನೆರೆ ಅಂಜುವೆನು ನಾನು

ಈ ಮೇಲಿನ ಮಾತುಗಳಲ್ಲಿ ಶಿವಶರಣರ ವಚನಗಳ ಪ್ರಭಾವವನ್ನು ಗುರುತಿಸಬಹುದು.

ಅತಿಯಾದ ಶ್ರೀಮಂತಿಕೆಯನ್ನಾಗಲೀ, ಕಡುಬಡತನವನ್ನಾಗಲೀ ಅನುಭವಿಸದ ಮಧ್ಯಮವರ್ಗದ ಕುಟುಂಬದಿಂದ ಬಂದ ರಾಮರಾಯರ ಕೃತಿಗಳಲ್ಲಿ ನೋವು, ಸಂಕಟ, ದೈನ್ಯತೆ, ಹತಾಶೆಗಳನ್ನು ಕಾಣಲಾರೆವು. ಬದುಕಿನ ಬಗ್ಗೆ ಸಂತೃಪ್ತ ಮನೋಭಾವ ಇದ್ದುದರಿಂದ ಇವರ ಕೃತಿಗಳಲ್ಲಿ ಲೌಕಿಕ ಬವಣೆಗಳ ನಿರೂಪಣೆಗೆ ಅವಕಾಶ ಕಡಿಮೆ. ಅಲ್ಲದೆ ಜೀವನದ ಸಣ್ಣಪುಟ್ಟ ಕಷ್ಟಗಳನ್ನು ಮತ್ತು ಲೋಪಗಳನ್ನು ಹರಿಸ್ತೋತ್ರದಿಂದ ಸರಿಪಡಿಸಿಕೊಳ್ಳುವ, ಹರಿಕರುಣೆಯ ಮೂಲಕ ಪರಿಹಾರವನ್ನು ಕಾಣಬಯಸುವ ಮನೋಭಾವ ಕರಿಗಿರೀಶರದು. ಜ್ಞಾನಮಾರ್ಗ, ಧ್ಯಾನಮಾರ್ಗ ಅಥವಾ ಭಕ್ತಿಮಾರ್ಗದ ಮೂಲಕ, ಭಕ್ತರು ಮಾಡುವ ಸಾಧನೆಗಳಿಗೆ ಕೂಡ ಹರಿಕರುಣೆಯೇ ಕಾರಣ ಎನ್ನುತ್ತಾರೆ.

೧. ನಿನ್ನ ಭಕ್ತರು ಮಾಳ್ಪ ಸಾಧನಂಗಳಿಗೆಲ್ಲ
ನಿನ್ನ ಕಾರುಣ್ಯವೇ ಕಾರಣವಲ್ಲವೇ (ಕೀ.೨೯೦)

೨. ಪತಿತಪಾವನ ನಿನ್ನ ಕರುಣೆಯೊಂದಿಲ್ಲದಿರೆ
ಇತರ ಸಾಧನವೆಲ್ಲ ಗತಿ ತೋರದೋ ಸ್ವಾಮಿ (ಕೀ.೨೯೦)

ಹೀಗೆ ಹರಿಕರುಣೆಯ ಸಂಪಾದನೆಯೇ ಭಕ್ತ ಜೀವನದ ಗುರಿಯೆಂದು ಭಾವಿಸುತ್ತಾರೆ.

ಧಾರ್ಮಿಕ ಸಾಹಿತ್ಯ ರಚನೆ, ಮತ್ತು ಹರಿದಾಸ ಸಂಪ್ರದಾಯಗಳು ಕ್ಷೀಣಿಸುತ್ತಿದ್ದ ಕಾಲದಲ್ಲಿ ಆ ಸಂಪ್ರದಾಯಗಳನ್ನು ಉಳಿಸಲು ಪ್ರಯತ್ನಿಸಿದವರು ರಾಮರಾಯರು.

ರಾಮಾಯಣ, ಭಾರತ, ಭಾಗವತ ಮೊದಲಾದವುಗಳನ್ನು ಅವುಗಳ ಮೂಲ ರೂಪದಲ್ಲಿಯೇ ಅಭ್ಯಾಸ ಮಾಡುವ ಅನುಕೂಲ, ಸಮಯ ಮತ್ತು ಶ್ರದ್ಧೆಗಳು ಇಲ್ಲದೇ ಇದ್ದ ಕಾಲದಲ್ಲಿ ಅವುಗಳನ್ನು ಹರಿಕಥೆ, ಕೀರ್ತನೆಗಳ ಮೂಲಕ ಪ್ರಸಂಗಗಳನ್ನಾಗಿ ಪರಿವರ್ತಿಸಿದರು. ಹರಿದಾಸ ಸಾಹಿತ್ಯದ ಶೋಧನೆ, ಪ್ರಕಟಣೆ ಮತ್ತು ಪ್ರಚಾರ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಪಾವಂಜೆ ಗುರುರಾಯರು, ಗೋರಬಾಳ ಹನುಮಂತರಾಯರು, ಸುಬೋಧರಾಮರಾಯರು ಇವರಂತಯೇ ವರವಣಿರಾಮರಾಯರೂ ಕೂಡಾ ಹರಿದಾಸ ಸಾಹಿತ್ಯ ಪ್ರವರ್ತಕರೆಂದು ಮಾನ್ಯರಾಗಿದ್ದಾರೆ.

## ಆಕರಗಳು ಮತ್ತು ಮಾಹಿತಿಗಳು

ಈ ಸಂಪುಟದ ಸಂಪಾದನ ಕಾರ್ಯಗಳಲ್ಲಿ ಅನೇಕ ಮಹನೀಯರು ನೆರವು ನೀಡಿದ್ದಾರೆ. ಶ್ರೀಯುತರಾದ ಎಸ್. ಜಿ. ರಾಮಚಂದ್ರರಾಯರು ಗುರುಗೋವಿಂದವಿಠಲ ದಾಸರ ಹರಿಭಕ್ತವಿಜಯ ಭಾಗ-೩ರಲ್ಲಿ ಪ್ರಕಟವಾಗಿರುವ ಕೀರ್ತನೆಗಳನ್ನು ಪಾಠನಿರ್ಣಯಕ್ಕೆ ಬಳಸಿಕೊಳ್ಳುವಂತೆ ಸೂಚನೆ ನೀಡಿ ಉಪಕರಿಸಿದ್ದಾರೆ. ಜಯೇಶವಿಠಲರ ಕೃತಿಗಳನ್ನು ಡಾ. ಶ್ರೀನಿವಾಸಹಾವನೂರ ಅವರ ಮಾರ್ಗದರ್ಶನದಲ್ಲಿ ಹಲವು ಮೂಲಗಳಿಂದ ಸಂಗ್ರಹಿಸಿದ್ದೇನೆ.

ಈ ಸಂಪುಟವನ್ನು ಸಿದ್ಧಪಡಿಸಿದ ಮೇಲೆ ದೊರೆತ ಜಯೇಶವಿಠ್ಠಲರ ಕೃತಿಗಳನ್ನು ಅಧಿಕ ಕೃತಿಗಳೆಂದು ಅನುಬಂಧದಲ್ಲಿ ಕೊಡಲಾಗಿದೆ. ಶ್ರೀಮತಿ ಪರಿಮಳಾಬದರೀನಾಥ್ ಮತ್ತು ಶ್ರೀಮತಿ ಸೀತಾ ವಿಠ್ಠಲ್ ಅವರು ಈ ಕೃತಿಗಳನ್ನು ನೀಡಿ ಉಪಕರಿಸಿದ್ದಾರೆ.

ರಂಗೇಶವಿಠಲರ ಕೀರ್ತನೆಗಳ ನೆರಳಚ್ಚು ಪ್ರತಿಯನ್ನು ಮೈಸೂರಿನ ಅರಕೆರೆ ನಾರಾಯಣರಾಯರು ಸ್ವಯಂ ಪ್ರೇರಣೆಯಿಂದ ನೀಡಿದ್ದಾರೆ. ಹಿರಿಯ ಸಾಹಿತಿಗಳಾದ ಶ್ರೀ. ಜೆ. ಆರ್. ಲಕ್ಷ್ಮಣರಾವ್ ಅವರು ಅರಕೆರೆ ಸಂಜೀವರಾಯರ ಜೀವನದ ವಿವರಗಳನ್ನು ನೀಡಿ ಉಪಕರಿಸಿದ್ದಾರೆ. ದಾಸರ

ಲಕ್ಷ್ಮೀನಾರಾಯಣರಾಯರ ಮೊಮ್ಮಕ್ಕಳಾದ ಶ್ರೀಮತಿ ನಾಗಲಕ್ಷ್ಮಿ, ಸರ್ವಶ್ರೀ ಕೃಷ್ಣಮೂರ್ತಿ ಮತ್ತು ಆನಂದ್ ಇವರುಗಳು ದಾಸರ ಸ್ವಹಸ್ತಪ್ರತಿಗಳನ್ನು ನೀಡಿ ಅವರ ಜೀವನದ ಅನೇಕ ಮಾಹಿತಿಗಳನ್ನು ತಿಳಿಸಿದ್ದಾರೆ. ಶ್ರೀ ಅನಂತಸ್ವಾಮಿ ರಾವ್ ಅವರು ತಮ್ಮಲ್ಲಿದ್ದ 'ಶ್ರೀಕಾಂತ' ಅಂಕಿತದಕೀರ್ತನೆಗಳನ್ನು ಕೊಟ್ಟು ಉಪಕರಿಸಿದ್ದಾರೆ. ವರವಣಿ ರಾಮರಾಯರ ಮಕ್ಕಳಾದ ಪ್ರೊ. ಫಣೀಂದ್ರಸಿಂಹ ಅವರು ರಾಯರ ಹರಿಕಥೆಗಳಿಂದ ಕೀರ್ತನೆಗಳನ್ನು ಪ್ರತ್ಯೇಕಿಸಿ ಪ್ರತಿಮಾಡಿ ಕೊಟ್ಟು ಸಂಪಾದನ ಕಾರ್ಯದಲ್ಲಿ ನೆರವಾಗಿದ್ದಾರೆ.

ಪ್ರೊ. ಜಿ. ಅಶ್ವತ್ಥನಾರಾಯಣ, ಡಾ. ಅರಳುಮಲ್ಲಿಗೆ ಪಾರ್ಥಸಾರಥಿ, ಶ್ರೀ ಎಸ್.ಬಿಳಿಗಿರಿವಾಸನ್ ಮತ್ತು ಶ್ರೀ ಚಂದ್ರಶೇಖರ್ ಅವರು ಈ ಸಂಪುಟದ ಸಿದ್ಧತೆಯಲ್ಲಿ ಹಲವು ರೀತಿಯ ಸಹಾಯ ಮಾಡಿದ್ದಾರೆ. ಈ ಸಂಪುಟದ ಸಂಪಾದನಾ ಕಾರ್ಯವನ್ನು ನನಗೆ ವಹಿಸಿ ಪ್ರತಿ ಹಂತದಲ್ಲೂ ಮಾರ್ಗದರ್ಶನ ಮತ್ತು ಪ್ರೋತ್ಸಾಹ ನೀಡಿದವರು ಡಾ॥ ಶ್ರೀನಿವಾಸ ಹಾವನೂರ ಅವರು. ಪದವಿಪೂರ್ವ ಶಿಕ್ಷಣ ಇಲಾಖೆಯ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಕಾರ್ಯದರ್ಶಿಗಳು ಮತ್ತು ಬಿ.ಎಸ್.ಎಸ್. ಆಡಳಿತ ಮಂಡಲಿಯ ಕಾರ್ಯದರ್ಶಿಗಳು ನೀಡಿದ ಸಹಕಾರದಿಂದ ಈ ಸಂಪುಟದ ಕಾರ್ಯ ನಿರ್ವಹಣೆಯನ್ನು ನಿಗದಿತ ಅವಧಿಯಲ್ಲಿ ನಿರ್ವಹಿಸಲು ಸಾಧ್ಯವಾಯಿತು. ಈ ಎಲ್ಲ ಮಹನೀಯರಿಗೂ ನಾನು ಅತ್ಯಂತ ಕೃತಜ್ಞನಾಗಿದ್ದೇನೆ.

ಹರಿದಾಸ ಸಾಹಿತ್ಯ ಮತ್ತು ಸಂಪ್ರದಾಯಗಳು ೨೦ನೆಯ ಶತಮಾನದಲ್ಲಿ ಹಲವಾರು ಮಿತಿಗಳಿಗೆ ಒಳಪಟ್ಟರೂ ನವೋದಯ ಕವಿಗಳ ಕಾಲದವರೆಗೂ ಸಾಗಿ ಬಂದಿತು ಎಂಬುದಕ್ಕೆ ಈ ಸಮಕಾಲೀನ ಹರಿದಾಸರ ಕೃತಿಗಳು ಸಮರ್ಥನೆ ನೀಡುತ್ತವೆ. ಆದ್ದರಿಂದ ಈ ದಾಸರುಗಳ ಸಾಹಿತ್ಯ ಸೇವೆ ಹರಿದಾಸ ಸಾಹಿತ್ಯ ಚರಿತ್ರೆಯಲ್ಲಿ ಉಲ್ಲೇಖನೀಯವಾಗಿದೆ.

–ಅನಂತಪದ್ಮನಾಭರಾವ್

# ಕೀರ್ತನೆಗಳ ಕ್ರಮಸೂಚಿ


| ಕೀರ್ತನೆ ಸಂಖ್ಯೆ | ಕೀರ್ತನೆಗಳ ಮೊದಲ ಸಾಲು | ಪುಟ ಸಂಖ್ಯೆ |
|---|---|---|

**ವಿಜಯ ರಾಮಚಂದ್ರ ವಿಠಲರು ( ಕೀರ್ತನೆ ೧ ರಿಂದ ೩೯)**

| | | |
|---|---|---|
| **ಗಣೇಶ ಪ್ರಾರ್ಥನೆ** | | ೩ |
| ೧. | ವಿಘ್ನೇಶ ಪಾಹಿಮಾಂ | |
| **ಭಗವಂತನ ಸಂಕೀರ್ತನೆ** | | |
| ೨. | ಇನ್ನುಪೇಕ್ಷೆಯ ಮಾಡೆ | ೪ |
| ೩. | ಓಂಕಾರ ಪ್ರತಿಪಾದ್ಯ ಶಂಖ ಚಕ್ರಾಭಯಕರ | ೫ |
| ೪. | ನಾರಸಿಂಹ ನಾರಸಿಂಹ ನಾರಸಿಂಹ | ೬ |
| ೫. | ಬಾರನಲ್ಲೇ ಸಖಿ ಪರಿಪೂರ್ಣ ಕಾಮನು | ೭ |
| ೬. | ಬಾರೊ ಗೋಪಿನಾಥ ನಿನ್ನಗಲಿರಲಾರೆನೊ | ೮ |
| ೭. | ಬಾರೊ ಗೋವಿಂದ ಹೃತ್ಸರೋಜಕೆ | ೯ |
| ೮. | ಬಿಟ್ಟಿರಲಾರೆ ಬಾ ಗೋಪಿಕಂದ ಸೃಷ್ಟೀಶಾನಂದ | ೯ |
| ೯. | ಯಾಕೆ ಬರವಲ್ಲಿ ಭಕುತನವಸರಕೆ | ೧೧ |
| ೧೦. | ರಾಮ ಬಂದ ಎಮ್ಮ ಪ್ರೇಮ ಬಂದಾನೊ | ೧೨ |
| ೧೧. | ಸುದ್ದಿಯ ಕೊಟ್ಟು ಬಾರೆ | ೧೨ |
| ೧೨. | ಹ್ಯಾಗೆ ಬರುವ ವೇದ ವೇದ್ಯ | ೧೩ |

| ಕೀರ್ತನೆ ಸಂಖ್ಯೆ | ಕೀರ್ತನೆಗಳ ಮೊದಲ ಸಾಲು | ಪುಟ ಸಂಖ್ಯೆ |
|---|---|---|
| **ಮಹಾಲಕ್ಷ್ಮಿ** | | |
| ೧೩. | ಇಂದಿರೆ ಚಂದಿರವದನೆ ಮಂದಗಮನೆ | ೧೪ |
| **ವಾಯುದೇವರು** | | |
| ೧೪. | ಕರುಣಿಸು ಭಾರತೀರಮಣ ಕರುಣಿಸು | ೧೫ |
| ೧೫. | ನೀನ್ಯಾಕೊ ನಿನಗೊಡವ್ಯಾಕೊ ಹನುಮೇಶ | ೧೬ |
| ೧೬. | ಮಧ್ವರಾಯರಿಗೆ ನಮೋ ನಮೋ | ೧೭ |
| ೧೭. | ಮರುದಂಶ ಭಾರತೀಶ | ೧೭ |
| **ರುದ್ರ** | | |
| ೧೮. | ರುದ್ರ ಮಹದೇವ ವೀರಭದ್ರ | ೧೮ |
| **ತುಳಸಿ** | | |
| ೧೯. | ಮಂಗಳಂ ಮಂಗಳಂ ತುಲಸಿ ದೇವಿಗೆ | ೧೯ |
| **ಗಂಗೆ** | | |
| ೨೦. | ಬಿಡನೆ ಬಿಡನೆ ನಿನ್ನ ಕೂಡ ವಾಸ | ೨೦ |
| **ಗುರುಸ್ತುತಿ** | | |
| ೨೧. | ಸ್ಮರಿಸಿ ಸೇವಿಸಿ ವೆಂಕಟರಾಯದಾಸರ | ೨೧ |
| ೨೨. | ಇಷ್ಟವಿಲ್ಲದ ಕಾರ್ಯ ಕಟ್ಟುಣಿಸುವುದು | ೨೨ |
| ೨೩. | ಗುರುಭಕ್ತಿ ಮನವೆ ಮಾಡು | ೨೩ |
| ೨೪. | ರಮಾನುತ ಪಾದ ಪಲ್ಲವ ಶ್ರೀಕರ | ೨೫ |
| **ಆತ್ಮನಿವೇದನೆ** | | |
| ೨೫. | ಇದನಾ ಬೇಡಿದವನಲ್ಲ | ೨೫ |
| ೨೬. | ಏನು ಕಾರಣ ಹರಿಯೆ ಅನುಮಾನಿಸಿದಿ ದೊರೆಯೆ | ೨೬ |
| ೨೭. | ಏನು ಮಾಡಿದರೆ ನಿನ್ನ ಕಾಣವೊ ಸನ್ಮಾರ್ಗ ದೊರೆವುದೊ | ೨೭ |
| ೨೮. | ಸುಮ್ಮನೆ ಹರಿದಾಸರೆಂಬಿರಿ ನಮ್ಮನೆಲ್ಲಾ | ೨೭ |
| ೨೯. | ಹ್ಯಾಗೆ ಸದ್ಗತಿ ಆಗುವುದೆನಗೆ | ೨೮ |

| ಕೀರ್ತನೆ ಸಂಖ್ಯೆ | ಕೀರ್ತನೆಗಳ ಮೊದಲ ಸಾಲು | ಪುಟ ಸಂಖ್ಯೆ |
|---|---|---|
| **ಲೋಕನೀತಿ** | | |
| ೩೦. | ಕವನ ಪೇಳು ನೀ ಮನವೆ | ೩೦ |
| ೩೧. | ನೆನಸದಿರು ಎಲೆ ಮನವೆ ಅನುದಿನ | ೩೧ |
| ೩೨. | ಬೆದರದಿರು ಚಿನ್ನಾ ನೀ ಬೆದರದಿರು | ೩೨ |
| ೩೩. | ಭಾವ ವೈರಾಗ್ಯದಿಂದ ಭಜಿಸು | ೩೩ |
| ೩೪. | ಸುತ್ತಬೇಕು ಜನ್ಮವೆತ್ತಬೇಕು | ೩೪ |
| **ತತ್ವ** | | |
| ೩೫. | ನಂಬಿದೆ ನಾನಿನ್ನ ಚರಣವನಂಬಿಗ | ೩೫ |
| ೩೬. | ಪತಿ ಪೋದನೆಂದು ಶೋಕಿಸುವುದ್ಯಾತಕೆ | ೩೬ |
| ೩೭. | ಬಲ್ಲೆನೆಂಬೊ ಮಮಕಾರ ಬಿಡು | ೩೭ |
| ೩೮. | ಹರಿಕರ್ತ ನಾನಲ್ಲೆಂದು ಹಿರಿಯರಾಡಿದ ಮಾತು. | ೩೮ |
| **ವಿಶೇಷ ಸಂದರ್ಭ** | | |
| ೩೯. | ಕರುಣಿಸು ಜಯೇಶ ವಿಠಲ<br>(ಜಯೇಶವಿಠಲರಿಗೆ ಅಂಕಿತ ನೀಡಿದ ಸಂದರ್ಭ) | ೩೯ |
| **ಜಯೇಶವಿಠಲರು ( ಕೀರ್ತನೆ ೪೦ ರಿಂದ ೧೦೧)** | | |
| **ಗಣೇಶ ಸ್ತುತಿ** | | |
| ೪೦. | ಗಣನಾಥ ಮಣಿವೆನೊ ಗಣನಾಥ | ೪೩ |
| **ಭಗವಂತನ ಸಂಕೀರ್ತನೆ** | | |
| ೪೧. | ಇಂದಿರಾನಂದ ಉದಧಿವರ್ಧನನೆಂದು | ೪೩ |
| ೪೨. | ಎಂತು ಜೀವಿಸಲಯ್ಯ ಯಾದವೇಶ | ೪೪ |
| ೪೩. | ಎನ್ನೊಡನೆ ಹುಟ್ಟಿದ ಹರಿಯೆ ಪಾಹಿ | ೪೫ |
| ೪೪. | ಎಲ್ಲಾ ದೇವರ ಗಂಡ ಕೃಷ್ಣ | ೪೬ |
| ೪೫. | ಏಕಿಷ್ಟು ಕರುಣವೊ ಶ್ರೀಕೃಷ್ಣದೇವ | ೪೭ |

| ಕೀರ್ತನೆ ಸಂಖ್ಯೆ | ಕೀರ್ತನೆಗಳ ಮೊದಲ ಸಾಲು | ಪುಟ ಸಂಖ್ಯೆ |
|---|---|---|
| ೪೬. | ಕಣ್ಣಿನಾಕರಿರಟ್ಟ ಸುಟ್ಟು ಬೂದಿಯ ಮಾಡಿ | ೪೮ |
| ೪೭. | ಕರುಣಾ ಸಾಗರ ವಿಶ್ವ ಕಾಯೊ ಎನ್ನ | ೪೮ |
| ೪೮. | ಕವಿವರರ ಕವನದಲಿ ಕವಿ ಕವಿದು ಪೊಳೆವ | ೫೦ |
| ೪೯. | ಕರ್ಮನಾಮಕ ಧರ್ಮಕಾರಿ | ೫೧ |
| ೫೦. | ಕುಡಿಸೆನಗೆ ಹರಿ ನಿನ್ನ ನಾಮ ರಸವ | ೫೨ |
| ೫೧. | ಕ್ರಿಯಾರೂಪ ಗುಣನಾಮ ದರ್ಶನ ಕರ್ತಾ | ೫೨ |
| ೫೨. | ಖ್ಯೋಡಿಗುಣ ಜಗದಲ್ಲಿ ಹೂಡಿ ನೀ ನಲಿವಾಗ | ೫೩ |
| ೫೩. | ಗುರುನಿಕರ ಸಂಸೇವ್ಯ ಸತಿಪತಿಯ ಬಿಂಬ | ೫೪ |
| ೫೪. | ಜೀವ ಕರ್ತೃತ್ವದ ಭ್ರಮೆಯ ಬಿಡಿಸೊ | ೫೫ |
| ೫೫. | ಜ್ಞಾನದಾಯಕ ಜಗಕೆ ನೀನೆ ಶೌರಿ | ೫೬ |
| ೫೬. | ನಾನು ನನ್ನದು ಎಂಬ ಜಾಣ ಶೌರಿ | ೫೬ |
| ೫೭. | ನಿನ್ನ ಕೃಪೆ ಕಾಣದ ಕಾಲ ವ್ಯರ್ಥ | ೫೭ |
| ೫೮. | ನಿನ್ನ ಪ್ರೇಮದ ಭೋಗ ಇನ್ನಿಲ್ಲದ ಮನುಜ | ೫೮ |
| ೫೯. | ನಿನ್ನ ಮರೆದಿಹ ಜನಕೆ ಮಂಗಳವು ಎಂತೊ | ೫೯ |
| ೬೦. | ನೀಯೆನ್ನ ಸದ್ಭಾಗ್ಯ ಆನಂದ ನಿಧಿಯೊ | ೬೦ |
| ೬೧. | ನೀ ಕೊಟ್ಟಿದುಣುವಲ್ಲಿ ಭಕ್ತಿ ಹರುಷ | ೬೦ |
| ೬೨. | ನೀ ಬುದ್ಧಿ ಕೊಡದಿರಲು ಮನುಜ ಪಶುವೊ | ೬೧ |
| ೬೩. | ಪತಿತ ಪಾವನರಂಗ ಸತತ ಕಾಯೊ | ೬೨ |
| ೬೪. | ಪರಮಪುರುಷನೆ ಕೃಷ್ಣ ಕಣ್ತೆರದು ನೋಡು | ೬೩ |
| ೬೫. | ಪೂರ್ಣ ಲಕ್ಷ್ಮೀರಮಣ ನಿತ್ಯ ವಿಭವ | ೬೩ |
| ೬೬. | ಭಕ್ತಿಯಲಿ ತನುಮನವು ಸತತ ಬಗ್ಗಿರಲಯ್ಯ | ೬೪ |
| ೬೭. | ಭಾವದಲ್ಲಿಯೆ ಪೊರೆಯೊ ದೇವ ದೇವ | ೬೫ |

| ಕೀರ್ತನೆ ಸಂಖ್ಯೆ | ಕೀರ್ತನೆಗಳ ಮೊದಲ ಸಾಲು | ಪುಟ ಸಂಖ್ಯೆ |
|---|---|---|
| ೬೮. | ಭಾವವೇ ಕಾರಣವೊ ಭವಕೆ ದೇವ | ೬೫ |
| ೬೯. | ಮಧುಹರನಿಗರ್ಪಿತವು ಸರ್ವಕರ್ಮ | ೬೬ |
| ೭೦. | ಲಕುಮಿ ಸಾಮ್ರಾಜ್ಯ ಶರಧಿಗಮೃತಾಂಶು ನೇತ್ರ | ೬೭ |
| ೭೧. | ಶಿಲೆಯ ನಾರಿಯ ಮಾಡ್ದ ಹನುಮ ನಿಲಯಾ | ೬೭ |
| ೭೨. | ಶ್ರೀ ವೇಣುಗೋಪಾಲ ಶುಕಮುನಿಯ ಬಿಂಬ | ೬೮ |
| ೭೩. | ಶ್ರುತಿರಾಸಿ ಸನ್ನುತ ಸತತ ಸದ್ಗುಣಪೂರ್ಣ | ೬೯ |
| ೭೪. | ಸರ್ವಕ್ಕೂ ನೀ ಮೂಲ ಹರಿಯೆ ಕೇಳೊ | ೭೦ |
| ೭೫. | ಸರ್ವೇಶ ಸುಲಭತಮ ಶೌರಿ ನೀನು | ೭೦ |
| ೭೬. | ಸರ್ವೇಶ ಹರಿ ನೀನು ಸರ್ವಾತ್ಮ ಶೌರಿ | ೭೧ |
| ೭೭. | ಸಾಧನದ ಚಿಂತೆ ಎನಗ್ಯಾಕೊ ದೇವ | ೭೨ |
| ೭೮. | ಹರಿ ನೀ ನೋಡದಿರೆ ಬಾಳಬಹುದೆ | ೭೩ |
| ೭೯. | ಹರಿ ಹರಿ ಎನ್ನ ದೋಷವಳಿಯೊ | ೭೪ |
| **ಮಹಾಲಕ್ಷ್ಮಿ** | | |
| ೮೦. | ಬುದ್ಧಿಮಾನಿಯೆ ಎನ್ನ ಉದ್ಧರಿಸು ತಾಯೆ | ೭೪ |
| ೮೧. | ಸಂಕರ್ಷಣನ ರಾಣಿ ವೀರದುರ್ಗೆ | ೭೫ |
| **ವಾಯುದೇವರು** | | |
| ೮೨. | ಕಪ್ಪುಗೊರಳ ಬಿಂಬ ಅಪ್ಪ ಸಲಹೊ | ೭೬ |
| ೮೩. | ಭಾರತೀಶನೆ ಎನ್ನ ಭಾರ ನಿನ್ನದು ತಂದೆ | ೭೭ |
| ೮೪. | ಶ್ರೀಹರಿಗೆ ಪ್ರಥಮಾಂಗ ಮಧ್ವಮೂರ್ತಿ | ೮೫ |
| **ರುದ್ರದೇವರು** | | |
| ೮೫. | ಬಿನ್ನಹಕೆ ಬಾಯಿಲ್ಲ ಭೂತನಾಥ | ೮೭ |
| ೮೬. | ಮನದಧಿಪ ಮರೆಹೊಕ್ಕೆ ಮಹದೇವ ಪಾಹಿ | ೮೮ |
| ೮೭. | ಮನದಧಿಪ ಮಹದೇವ ಮೊರೆಯ ಕೇಳೊ | ೮೯ |
| ೮೮. | ಮಹದೇವ ಮದ್ರೋಗ ಮೂಲವಳಿಯೊ | ೯೦ |

| ಕೀರ್ತನೆ ಸಂಖ್ಯೆ | ಕೀರ್ತನೆಗಳ ಮೊದಲ ಸಾಲು | ಪುಟ ಸಂಖ್ಯೆ |
|---|---|---|
| **ಪಾರ್ವತಿ** | | |
| ೮೯. | ಗೌರಿ ಗಜಮುಖನ ಮಾತೆ | ೯೧ |
| **ಗುರುಸ್ತುತಿ** | | |
| ೯೦. | ನಂಬು ನಂಬು ನಂಬು ಮನವೆ | ೯೨ |
| ೯೧. | ಪರಶು ಮುಟ್ಟಲು ಲೋಹ ಸ್ವರ್ಣವಾಗುವ ಪರಿ | ೯೪ |
| ೯೨. | ಭವಸಿಂಧು ಶೋಷಿಪೇಕ್ಷಣ ಕಲ್ಯಾಣಗಾತ್ರ | ೯೪ |
| ೯೩. | ವಿಜಯದಾಸರ ದಿವ್ಯ ವಿಜಯ ನೆನೆವರ | ೯೫ |
| ೯೪. | ವಿಜಯವಿಠಲರಾಯನಂಘ್ರಿಯುಗ ಭಜಿಸುವ | ೯೬ |
| ೯೫. | ಗುರು ರಾಘವೇಂದ್ರ ಶರಣರ ಸುರತರುವೆ | ೯೮ |
| ೯೬. | ವಾಜಿ ವದನಾರ್ಚಕ ಶ್ರೀ ವಾದಿರಾಜ | ೯೯ |
| ೯೭. | ಜಯರಾಯ ಭವಹರಣ ಪಾಲಿಸೆಮ್ಮ | ೧೦೦ |
| **ವಿಶೇಷ ಸಂದರ್ಭ** | | |
| ೯೮. | ಅಪರಾಧ ಎನ್ನದಯ್ಯ ಹೇ ಗುರುವರ್ಯ | ೧೦೨ |
| ೯೯. | ಪ್ರಸನ್ನವಿಠಲ ಪಾಲಿಸಿವನ | ೧೦೨ |
| ೧೦೦. | ಶ್ರೀಗುರು ಜಯೇಶವಿಠಲನೆ ಪಾಲಿಸಯ್ಯ | ೧೦೩ |
| ೧೦೧. | ಶ್ರೀ ಪರಾತ್ಪರವಿಠಲ ಪಾಲಿಸಿವರ | ೧೦೪ |


## ರಂಗೇಶವಿಠಲರು ( ಕೀರ್ತನೆ ೧೦೨ ರಿಂದ ೨೧೭)


| | | |
|---|---|---|
| **ಗಣೇಶಸ್ತುತಿ** | | |
| ೧೦೨. | ದಂತಿವದನ ವಿಘ್ನದಂತಿನಿಚಯಕೆ ಹರಿ | ೧೦೭ |
| ೧೦೩. | ಶರಣು ಗಜಾನನನೆ ಶರಣು ಲಂಬೋಧರನೆ | ೧೦೭ |
| **ಭಗವಂತನ ಸಂಕೀರ್ತನೆ** | | |
| ೧೦೪. | ಅನ್ಯ ದೇವರ ನಾನರಿಯೆ ಸಿರಿಹರಿಯೆ | ೧೦೮ |
| ೧೦೫. | ಆರತಿ ಮಾಡಿರೆ ನೀರೆಯರೆಲ್ಲರು | ೧೦೯ |

| ಕೀರ್ತನೆ ಸಂಖ್ಯೆ | ಕೀರ್ತನೆಗಳ ಮೊದಲ ಸಾಲು | ಪುಟ ಸಂಖ್ಯೆ |
|---|---|---|
| ೧೦೬. | ಎಂಥ ಶೂರನೊ ರಾಮ ಎಂಥ ಧೀರನೊ | ೧೦೯ |
| ೧೦೭. | ಏನು ಕರ್ಮವ ಮಾಡಿ ನಾನಿನ್ನ ಒಲಿಸಲಿ | ೧೧೦ |
| ೧೦೮. | ಏನೇನು ಪಾಟು ಬಿದ್ದರು ಮುನ್ನ | ೧೧೧ |
| ೧೦೯. | ಏಳು ರಂಗಯ್ಯ ನೀನೇಳು ಕೃಷ್ಣಯ್ಯ | ೧೧೨ |
| ೧೧೦. | ಕಂಡು ಹೇಳಿಕೊಂಡೆನೆನ್ನ ಕಷ್ಟವ | ೧೧೩ |
| ೧೧೧. | ಕಂಡೆನೆನ್ನ ದೊರೆಯ ಲಕುಮಿಯ | ೧೧೩ |
| ೧೧೨. | ಕಮಲಮಾರ್ಗಣಪಿತ ನಿನ್ನ | ೧೧೪ |
| ೧೧೩. | ಕರುಣಿಸು ಕರುಣಿಸು ಪರಮ ಪುರುಷ | ೧೧೫ |
| ೧೧೪. | ಕಾವೇರಿ ತೀರದಲಿ ನಿಂದಿರುವ ರಂಗಯ್ಯ | ೧೧೬ |
| ೧೧೫. | ಕೋಲು ಕೋಲೆನ್ನ ಕೋಲೆ ರನ್ನದಾ | ೧೧೬ |
| ೧೧೬. | ಗರುಡನೇರಿ ಬಂದ ಸಿರಿರಮಣನು ತಾನು | ೧೧೮ |
| ೧೧೭. | ಚಿಕ್ಕ ಮಗುವಾದ ಪ್ರಹ್ಲಾದ ದೇವನನು | ೧೧೯ |
| ೧೧೮. | ಚಿತ್ತೈಸಬೇಕೆನ್ನ ಮಾತು ಕೇಳಯ್ಯ | ೧೨೦ |
| ೧೧೯. | ಜಯ ಮಂಗಳಂ ನಿತ್ಯ ಶುಭ ಮಂಗಳಂ | ೧೨೧ |
| ೧೨೦. | ಜೋ ಜೋ ಜೋ ರಂಗ ಜೋ ಮುದ್ದುರಂಗ | ೧೨೨ |
| ೧೨೧. | ಜೋ ಜೋ ರಂಗಯ್ಯ ಜೋಜೋ ಕೃಷ್ಣಯ್ಯ | ೧೨೨ |
| ೧೨೨. | ಧರಾ ರಮಣ ಸ್ವಾಮಿ ಪುಷ್ಕರಣೀ ತೀರದೊಳಿರುತಿಹನೆ | ೧೨೩ |
| ೧೨೩. | ಧ್ಯಾನ ಮಾಡಿರೊ ರಂಗಯ್ಯನ | ೧೨೩ |
| ೧೨೪. | ನರಹರಿ ದೀನ ದಯಾಳೊ | ೧೨೫ |
| ೧೨೫. | ನಾರಾಯಣ ತನ್ನ ನಂಬಿದ ಭಕುತರ | ೧೨೬ |
| ೧೨೬. | ನಿನ್ನಭಯವೇನೆನಗೆ ನೀ ನೀರೊಳಿರುವೆ | ೧೨೭ |
| ೧೨೭. | ನೋಡಯ್ಯ ಹರಿಯೆ | ೧೨೮ |

| ಕೀರ್ತನೆ ಸಂಖ್ಯೆ | ಕೀರ್ತನೆಗಳ ಮೊದಲ ಸಾಲು | ಪುಟ ಸಂಖ್ಯೆ |
|---|---|---|
| ೧೨೮. | ಪಂಕಜನಾಭನಂಕಿತನಾದವಗೆ | ೧೨೮ |
| ೧೨೯. | ಪದುಮನಾಭನೆ ಪಾಲಿಸಯ್ಯ | ೧೨೯ |
| ೧೩೦. | ಪಾಪ ಪುಣ್ಯ ಫಲ ಲೇಶವಿಲ್ಲದವ | ೧೨೯ |
| ೧೩೧. | ಬಂಡು ಮಾಡುವರಲ್ಲೊ ರಂಗಯ್ಯ | ೧೩೦ |
| ೧೩೨. | ಬಂದನು ರಘುವೀರ ರಣಧೀರ | ೧೩೧ |
| ೧೩೩. | ಬಾ ಬಾ ಬಾರಯ್ಯ ಶ್ರೀ ಗಿರಿದೊರೆಯೆ | ೧೩೩ |
| ೧೩೪. | ಬಾರೊ ನೀ ಭಕುತರ ಸುರಧೇನು | ೧೩೫ |
| ೧೩೫. | ಬೇಗನೆ ಬಾರೊ ದೇವ | ೧೩೫ |
| ೧೩೬. | ಬ್ರಹ್ಮಾದಿದೇವಗಣ ನಮಿತ ಪಾದಯುಗಳನೆ | ೧೩೬ |
| ೧೩೭. | ಮಂಗಳಂ ಶ್ರೀರಂಗನಿಗೆ | ೧೩೭ |
| ೧೩೮. | ಮಧುವೈರಿ ಬಂದನಕೊ ದಧಿ ಕಡೆವ ವೇಳೆಗೆ | ೧೩೭ |
| ೧೩೯. | ಮರೆವನೆ ನಾನಿನ್ನ ಕರಿಗಿರಿ ದೊರೆ | ೧೩೮ |
| ೧೪೦. | ಮಾತು ಮಾತಿಗೆ ಮರೆಯಬೇಡ ಸೀತಾರಾಮನ | ೧೩೯ |
| ೧೪೧. | ಮಾಸ ನಿಯಾಮಕ ದೇವತೆಗಳ ವರ್ಣಿಸುವೆನು | ೧೩೯ |
| ೧೪೨. | ಯಾಕೆನ್ನೊಳಿಂತು ನಿರ್ದಯವೆಲೊ ದೇವ | ೧೪೧ |
| ೧೪೩. | ರಂಗಬಾರನ್ಯಾತಕೆ ಸಖಿಯೆ | ೧೪೧ |
| ೧೪೪. | ರಥವನೇರಿ ಬರುವ ರಂಗನಾಥನ ನೋಡಿ | ೧೪೨ |
| ೧೪೫.. | ರಾಮನ ನೋಡಿದೆ ರಘುಕುಲ ತಿಲಕನ | ೧೪೩ |
| ೧೪೬. | ವೆಂಕಟೇಶ ತೋರೊ ಪಾದ ಪಂಕಜವನು | ೧೪೫ |
| ೧೪೭. | ಶೇಷಾಚಲನಿಲಯನಾಗಿರುತ ಭಕುತರ | ೧೪೬ |
| ೧೪೮. | ಶ್ರೀ ಕರಾರ್ಚಿತ ಪರಮಪುರುಷ ಶೋಕವರ್ಜಿತ | ೧೪೬ |
| ೧೪೯. | ಶ್ರೀನಿವಾಸ ನೀನೆಮ್ಮ ಪೊರೆಯೊ ನಿರುತ | ೧೪೭ |

| ಕೀರ್ತನೆ ಸಂಖ್ಯೆ | ಕೀರ್ತನೆಗಳ ಮೊದಲ ಸಾಲು | ಪುಟ ಸಂಖ್ಯೆ |
|---|---|---|
| ೧೫೦. | ಶ್ರೀ ರಂಗೇಶವಿಠಲ ಪೊರೆಯೆನ್ನ | ೧೪೯ |
| ೧೫೧. | ಶ್ರೀ ಸದನ ನಿನ್ನ ಸುಗುಣಗಳ ಪೊಗಳುವಡೆ | ೧೫೦ |
| ೧೫೨. | ಸಮಯಕ್ಕೊದಗುವ ನೆಂಟ | ೧೫೧ |
| ೧೫೩. | ಸರಿಯಾರೊ ನಿನಗೆ ಪರಮ ಕರುಣಾನಿಧೆ | ೧೫೧ |
| ೧೫೪. | ಸರುವದ ಪಠಿಸಿರೆಚತುರವಿಂಶತಿ ನಾಮ | ೧೫೨ |
| ೧೫೫. | ಸಾಧನವು ಮತ್ತೇನಾಗಬೇಕು ನಿನಗೇ | ೧೫೩ |
| **ಮಹಾಲಕ್ಷ್ಮಿ** | | |
| ೧೫೬. | ಏಳಮ್ಮ ತಾಯೆ ಮುದದಿಂದೆಮ್ಮನು ಕಾಯೆ | ೧೫೩ |
| ೧೫೭. | ಕರುಣಿಸೆ ಕೋಮಲಗಾತ್ರೆ ಕಂಜಜಮಾತೆ | ೧೫೪ |
| ೧೫೮. | ಬಾರಮ್ಮ ಲೋಕಮಾತೆ ಆನಂದಪ್ರದಾತೆ | ೧೫೫ |
| ೧೫೯. | ಮಂಗಳಂ ಮಹಿಜಾತೆಗೆ | ೧೫೬ |
| ೧೬೦. | ಮಲಗು ಮಲಗಮ್ಮ ತಾಯೆ | ೧೫೬ |
| ೧೬೧. | ಸರಸಿಜಾಲಯೆ ಪೊರೆಯೆ | ೧೫೭ |
| **ವಾಯುದೇವರು–ಹನುಮಂತ** | | |
| ೧೬೨. | ಏಳಯ್ಯ ಭಾರತಿ ಮೋಹನ | ೧೫೮ |
| ೧೬೩. | ಕರುಣದಿ ಪೊರೆಯೆನ್ನ ಪ್ರಭುವೆ | ೧೫೯ |
| ೧೬೪. | ಕರುಣೆ ತೋರೋ ಕಣ್ಣ ತೆರೆದು | ೧೬೦ |
| ೧೬೫. | ಕೋರಿ ಬಂದೆನೊ ನಾನು | ೧೬೮ |
| ೧೬೬. | ಗುರು ಮುಖ್ಯಪ್ರಾಣ ಕರವೆತ್ತಿನಿಂದ | ೧೬೯ |
| ೧೬೭. | ಭಾರತೀಶನೆ ಕಾಯೊ | ೧೭೦ |
| ೧೬೮. | ಮಂಗಳಂ ಶುಭ ಮಂಗಳಂ | ೧೭೨ |
| ೧೬೯. | ಮಾರಪಿತನ ತೋರಿದಲ್ಲದೆ ನಾ ಬಿಡೆ ನಿನ್ನ ಪಾದವ | ೧೭೩ |

| ಕೀರ್ತನೆ ಸಂಖ್ಯೆ | ಕೀರ್ತನೆಗಳ ಮೊದಲ ಸಾಲು | ಪುಟ ಸಂಖ್ಯೆ |
|---|---|---|
| ೧೭೦. | ಮಲಗು ಮಲಗಯ್ಯ ಹನುಮ | ೧೭೪ |
| **ಸರಸ್ವತಿ** | | |
| ೧೭೧. | ನೆಲಸೆನ್ನ ವದನದಿ ವಾಣಿ ಬ್ರಹ್ಮಾಣಿ | ೧೭೫ |
| ೧೭೨. | ವಾಣಿ ನೀ ಬಾರೆ ಪನ್ನಗವೇಣಿ | ೧೭೫ |
| ೧೭೩. | ವಾರಿಜನ ಹೃದಯೇಶ್ವರಿ ಸರ್ವ ವಿದ್ಯಕಾಧಾರಿ | ೧೭೬ |
| **ಭಾರತಿ** | | |
| ೧೭೪. | ಕರುಣದಿ ಪೊರೆಯೆ ಭಾರತಿ | ೧೭೭ |
| ೧೭೫. | ತೋರೆ ನಿನ್ನ ಪದಸರಸಿಜವನು ತಾಯೆ | ೧೭೭ |
| **ರುದ್ರದೇವರು** | | |
| ೧೭೬. | ಕಾಮಪಿತ ಪದ ಸರಸಿರುಹ ಭೃಂಗ | ೧೭೮ |
| ೧೭೭. | ಸಕಲ ಭೂತಗಣಕಧಿನಾಥ ನೀನೆ | ೧೭೯ |
| **ಪಾರ್ವತಿ** | | |
| ೧೭೮. | ಉಮಾ ಹಿಮಗಿರಿ ಸಮಸ್ತ | ೧೮೦ |
| ೧೭೯. | ಮೋಸ ಪೋದೆಯಲ್ಲೆ ಭಾಸುರಾಂಗಿ | ೧೮೦ |
| ೧೮೦. | ಶೈಲರಾಜಸುತೆಯೆ ಗೌರಿ | ೧೮೨ |
| **ಗುರುಸ್ತುತಿ** | | |
| ೧೮೧. | ವರಗುರು ತಂದೆ ಮುದ್ದು ಮೋಹನದಾಸ | ೧೮೨ |
| ೧೮೨. | ತೆರಳಿ ಪೋದರಿಂದು ಪರಮ ಪದವನರಸುತ | ೧೮೩ |
| ೧೮೩. | ನೀನಲ್ಲದಿನ್ನಾರು ಸಲಹುವರೊ ಎನ್ನ | ೧೮೪ |
| **ಆತ್ಮಶೋಧನೆ** | | |
| ೧೮೪. | ಈ ಸಂಸಾರ ಸುಖವು ಬೇಸರಾಯ್ತೆನಗೆ | ೧೮೬ |
| ೧೮೫. | ಎಂದಿಗೆ ಕಾಂಬುವೆ ನಿನ್ನ ಚರಣವ | ೧೮೭ |
| ೧೮೬. | ಎನಗೆಲ್ಲಿಯ ಕೊರತೆ ನಿನ ನಂಬಿದ ಮೇಲೆ | ೧೮೭ |
| ೧೮೭. | ಎಲ್ಲರೂ ದಾಸರಹರೇ | ೧೮೮ |

| ಕೀರ್ತನೆ ಸಂಖ್ಯೆ | ಕೀರ್ತನೆಗಳ ಮೊದಲ ಸಾಲು | ಪುಟ ಸಂಖ್ಯೆ |
|---|---|---|
| ೧೮೮. | ಏನಬೇಡಲೊ ಕೃಷ್ಣ ನಾಚಿಕಿಲ್ಲದೆ | ೧೮೯ |
| ೧೮೯. | ಕಾಯೊ ಕರುಣದಿಂದೆನ್ನನು ತೋಯಜಾಕ್ಷನೆ | ೧೯೦ |
| ೧೯೦. | ತಂದೆ ನೀನೆಂದು ನಾ ಬಂದೆ ರಕ್ಷಿಸೆಂದು | ೧೯೦ |
| ೧೯೧. | ತಾರೊ ನಿನ್ನಯ ಕರವಾರಿಜವನು ಕೃಷ್ಣ | ೧೯೧ |
| ೧೯೨. | ದುಷ್ಟ ಮನುಜನೆ ಕೇಳೊ | ೧೯೨ |
| ೧೯೩. | ಪೊರೆಯೊ ಶ್ರೀಶನೆ ಸರುವ ಲೋಕ ಪೊರೆವನೆ | ೧೯೩ |
| ೧೯೪. | ಬೇಡಿಕೊಂಬೆನೊ ದೇವ ಮಹಾನುಭಾವ | ೧೯೪ |
| ೧೯೫. | ವೇದ ಓದಿದರೇನು ನಮ್ಮ | ೧೯೫ |
| ೧೯೬. | ಶ್ಯಾಮಸುಂದರ ಮಾಮನೋಹರ ತಾಮರಸಾಕ್ಷ | ೧೯೫ |
| ೧೯೭. | ಸಲಹಯ್ಯ ಲಕ್ಷ್ಮೀರಮಣ | ೧೯೬ |
| ೧೯೮. | ಹರಿ ನಿನ್ನ ದಾಸರ ಸೇವೆಯ ಕರುಣಿಸೆನಗೆ | ೧೯೭ |
| ೧೯೯. | ಹರಿಯೇ ಪೊರೆಯದಿಹುದು ಸರಿಯೆ | ೧೯೭ |
| **ಲೋಕನೀತಿ** | | |
| ೨೦೦. | ಏನಿದ್ದರೇನಯ್ಯ ಜ್ಞಾನವಿಲ್ಲದ ಮೇಲೆ | ೧೯೮ |
| ೨೦೧. | ಬಡಿವಾರವಿದ್ಯಾಕೊ ದಡಿಗ ಮಾನವನೆ | ೧೯೯ |
| ೨೦೨. | ಫಲವೇನೊ ಫಲವೇನೊ ಫಲವೇನೊ ಮನುಜ | ೨೦೦ |
| ೨೦೩. | ಮರೆಯದಿರು ಮರೆಯದಿರು ಹರಿಯನು ಪಾಪಿ | ೨೦೦ |
| ೨೦೪. | ಸಂಸಾರ ಶರಧಿಯೊಳಗೆ ಮುಳುಗಿ ಆಡಬೇಡವೊ | ೨೦೧ |
| ೨೦೫. | ಸುಖವನು ಸರ್ವದ ಬಯಸಲದೇನೆಂದು | ೨೦೨ |
| **ತತ್ವಚಿಂತನೆ** | | |
| ೨೦೬. | ಅಚ್ಯುತಾನಂತನ ಅಚ್ಚಿನ್ನ ಭಕ್ತರ | ೨೦೩ |
| ೨೦೭. | ಧನ್ಯನಲ್ಲವೆ ಅವನು ಧನ್ಯನಲ್ಲವೆ | ೨೦೪ |
| ೨೦೮. | ನಾನು ನಾನು ಎಂದು ನೀನೇಕೆ ಬಡುಕೊಂಬಿ | ೨೦೪ |

| ಕೀರ್ತನೆ ಸಂಖ್ಯೆ | ಕೀರ್ತನೆಗಳ ಮೊದಲ ಸಾಲು | ಪುಟ ಸಂಖ್ಯೆ |
|---|---|---|
| ೨೦೯. | ನೀನು ನಾನು ಸಮನೆಂತಹವು ಕಾಣೆನಯ್ಯ | ೨೦೫ |
| ೨೧೦. | ನೀನೆ ನಾನೆಂಬುವ ಮಾನವಾಧಮನನ್ನು | ೨೦೫ |
| ೨೧೧. | ಪಾಪ ಮಾಡಿದರೇನು ಮಾಡದಿದ್ದರೇನು | ೨೦೬ |
| ೨೧೨. | ಮಧ್ವಾರಾಯರ ಸಿದ್ಧಾಂತ ಪದ್ಧತಿಯನು | ೨೦೭ |
| ೨೧೩. | ಮುನ್ನ ಮುರಾರಿಯ ನಿಂದಿಸಿ | ೨೦೭ |
| ೨೧೪. | ರಂಗನಾ ಒಲುಮೆಯಿರಲು | ೨೦೮ |
| ೨೧೫. | ಸಕಲ ಕರ್ಮಗಳ ಮಾಡಿ ಮಾಡಿಸುವೆ ನೀನು | ೨೦೮ |
| ೨೧೬. | ಸ್ವಾಮಿಯು ನೀನಲ್ಲವೊ ಪಾಮರನೆ | ೨೦೯ |
| ೨೧೭. | ಹಠವ ಮಾಡದಿರು ಕೇಳೆಲೊ ಮೂಢ | ೨೧೦ |

## ದಾಸರ ಲಕ್ಷ್ಮೀನಾರಾಯರಾಯರು ( ಕೀರ್ತನೆ ೨೧೮ ರಿಂದ ೨೭೭)

### ಗಣೇಶ ಸ್ತುತಿ

೨೧೮. ಶ್ರೀ ಸಿದ್ಧಿಗಣಪ ಕೊಡು ನಿನ್ನ ನೆನಪ ೨೧೩

೨೧೮(ಅ).

ಮಂಗಳಾರತಿ ಬೆಳಗಿರೆ ೨೧೬

### ಭಗವಂತನ ಸಂಕೀರ್ತನೆ

೨೧೯. ಅಂದು ಶ್ರುತಿರಾಶಿಯನು ತಂದು ಕೊಟ್ಟವರಾರು ೨೧೭

೨೨೦. ಅಚ್ಚರಿಯೊಳಚ್ಚರಿಯು ಅಚ್ಯುತನ ನಾಮವಿದು ೨೧೭

೨೨೧. ಆರತಿಯನೆತ್ತಿರೆ ಅಚ್ಯುತನಿಗೆ ಅನಂತನಿಗೆ ೨೧೮

೨೨೧(ಅ).ಆರೈದು ಸಲಹೊ ಎನ್ನ ೨೧೯

೨೨೨. ಇಂದು ಕಂಡೆನು ಹರಿಯ ಭವ ಹಾರಿಯ ೨೧೯

| ಕೀರ್ತನೆ ಸಂಖ್ಯೆ | ಕೀರ್ತನೆಗಳ ಮೊದಲ ಸಾಲು | ಪುಟ ಸಂಖ್ಯೆ |
|---|---|---|
| ೨೨೩. | ಈ ಮಾಧವ ದೇವಾಧಿದೇವ | ೨೨೧ |
| ೨೨೩(ಅ). | ಏನೆಂದು ಪೇಳಲೊ ರಾಮ | ೨೨೧ |
| ೨೨೪. | ಕರುಣಕೆ ಎಣೆಗಾಣೆ ಶ್ರೀಕಾಂತನ | ೨೨೨ |
| ೨೨೫. | ಕೋಪ ಮಾಡುವರೆ ಕೃಪಾಳು ನೀನು | ೨೨೨ |
| ೨೨೬. | ಗಂಗೆಯನು ಪಡೆದ ಉತ್ತುಂಗದುಂಗುಟನಿಂಗೆ | ೨೨೩ |
| ೨೨೬(ಅ). | ಗೋಪಾನಕುಲ ಬಾಲಗೋವಿಂದ | ೨೨೪ |
| ೨೨೭. | ಜಯ ಜಯ ರಮಾಕಾಂತ | ೨೨೫ |
| ೨೨೭(ಅ). | ಜಯಜಯತು ಶ್ರೀರಾಮ | ೨೨೫ |
| ೨೨೭(ಆ). | ಜಯ ಮಂಗಳ ನಾಮ | ೨೨೬ |
| ೨೨೮. | ದಾಸರ ದಾಸರ ದಾಸನೆಂದೆನಿಸುವ | ೨೨೬ |
| ೨೨೯. | ಧ್ಯಾನವ ಕೊಡು ಹರಿಯೆ ನಿರಂತರ | ೨೨೭ |
| ೨೩೦. | ನಾಮಕೆಣೆ ಕಾಣೆ ಮುಕುಂದನ | ೨೨೮ |
| ೨೩೧. | ನಾರಸಿಂಹನೆ ಎನ್ನ ದುರಿತೌಘಗಳನು | ೨೨೯ |
| ೨೩೨. | ನಿನಗೆ ನಿದ್ರೆಯು ಎಂತು ಬರುವುದೊ ಶ್ರೀಕಾಂತ | ೨೩೧ |
| ೨೩೩. | ನೀರಧಿಶಯನ ಮುಕುಂದ | ೨೩೧ |
| ೨೩೪. | ಪಂಡರಿನಾಥ ಪಾವನ ಸುಚರಿತ | ೨೩೨ |
| ೨೩೪(ಅ). | ಪರತರ ಕರುಣಾಕರ ವಿಧಿಮುಖ | ೨೩೩ |
| ೨೩೫ | ಪರಮ ಕೃಪಾನಿಧೆ ಗೋಪಾಲ ದೇವ | ೨೩೩ |
| ೨೩೫(ಅ) | ಪರತರ ಪಾವನ ಶ್ರೀರಾಮಜಯ | ೨೩೪ |
| ೨೩೬. | ಪರಿಪಾಲಿಸೈ ವರ ವೆಂಕಟೇಶ | ೨೩೪ |
| ೨೩೬(ಅ). | ಹರಿಪಾಲಯ ಶರಣಾಭರಣ | ೨೩೫ |
| ೨೩೭. | ಬಂದು ನಿಲ್ಲೊ ಕಣ್ಣಮುಂದೆ | ೨೩೬ |

| ಕೀರ್ತನೆ ಸಂಖ್ಯೆ | ಕೀರ್ತನೆಗಳ ಮೊದಲ ಸಾಲು | ಪುಟ ಸಂಖ್ಯೆ |
|---|---|---|
| ೨೩೮. | ಬಾ ಬಾ ಬಾ ಬಾ ಭಕ್ತಾಧಾರ | ೨೩೬ |
| ೨೩೯. | ಬಾರೊ ಬಾರೊ ಬಾರೊ ಶ್ರೀಹರಿ | ೨೩೭ |
| ೨೩೯(ಅ). | ಬಾರೊ ವರಶೂರ ಕುಮಾರ | ೨೩೮ |
| ೨೪೦. | ಮರೆವರೇನೋ ರಾಮ ನಿನ್ನ ಚರಣ ಸೇವಕರನ್ನು | ೨೩೮ |
| ೨೪೧. | ಮನ್ನಿಸೆನ್ನ ವೆಂಕಟರನ್ನ | ೨೩೯ |
| ೨೪೧(ಅ). | ಮಾಡುವುದೊ ಕೃಪೆ ದಾಸನೊಳು | ೨೩೯ |
| ೨೪೨. | ಮುರಹರ ನಗಧರ ಪಾಹಿಮಾಂ ಕೃಷ್ಣ | ೨೪೦ |
| ೨೪೨(ಅ). | ಯಾಕೆ ಬಾರದೋ ದಯವು ಶ್ರೀ ಹರಿ | ೨೪೧ |
| ೨೪೨(ಆ). | ಯಾದವ ಕುಲದೀಪ | ೨೪೧ |
| ೨೪೩. | ರಕ್ಷಿಸು ಕಮಲಾಕ್ಷ ಶ್ರೀವಕ್ಷ | ೨೪೨ |
| ೨೪೪. | ರಕ್ಷಿಸೆನ್ನ ಪಕ್ಷಿವಾಹನ ಅಕ್ಷಯ ಗುಣಪೂರ್ಣ | ೨೪೩ |
| ೨೪೫. | ರಾಧಾಕೃಷ್ಣ ದಯದಿ ನೋಡೆನ್ನ | ೨೪೪ |
| ೨೪೫(ಅ). | ರಾಮ ಸದ್ಗುಣಧಾಮ | ೨೪೪ |
| ೨೪೬. | ಸಡಿಲ ಬಿಡದೆ ಕೈಯ ಪಿಡಿದು ಉದ್ಧರಿಸಯ್ಯ | ೨೪೫ |
| ೨೪೬(ಅ). | ಸರಿ ಯಾರೋ ಜಗದೊಳಗೆ | ೨೪೮ |
| ೨೪೬(ಆ). | ಶ್ರೀನಾಥ ಯದುನಾಥ | ೨೪೯ |
| ೨೪೭. | ಶ್ರೀಶಾ ಹೃಷಿಕೇಶ | ೨೪೯ |
| ೨೪೮. | ಶ್ರೀರಾಮ ಎನ್ನಿರೊ ಶ್ರೀರಾಮ ಎನ್ನಿರೊ | ೨೫೦ |
| ೨೪೮(ಅ). | ಹರಿ ವಿಠಲ ವಿಠಲ ಜಯ ವಿಠಲಾ | ೨೫೧ |
| **ಮಹಾಲಕ್ಷ್ಮಿ** | | |
| ೨೪೯. | ಆರತಿಯ ಎತ್ತಿರಮ್ಮ ವರಮಹಾಲಕ್ಷ್ಮಿಗೆ | ೨೫೨ |
| ೨೫೦. | ಕಮಲಾಕ್ಷಿ ತಾಯೆ ಕಾಮಿತ ದಾಯೆ | ೨೫೨ |
| ೨೫೧. | ಮಂಗಳಾರತಿಯನೆತ್ತಿರೆ ನಿತ್ಯ ಸುಮಂಗಳೆಗೆ | ೨೫೩ |
| ೨೫೨. | ಯಾಕೆ ನಡುಗುವೆ ತಾಯೆ ಭೂಕಾಂತೆಯೆ | ೨೫೪ |
| ೨೫೩. | ವಾರಿಧಿ ಸಂಭೂತೆ ಚಾರು ಗುಣಾನ್ವಿತೆ | ೨೫೪ |

| ಕೀರ್ತನೆ ಸಂಖ್ಯೆ | ಕೀರ್ತನೆಗಳ ಮೊದಲ ಸಾಲು | ಪುಟ ಸಂಖ್ಯೆ |
|---|---|---|
| **ವಾಯುದೇವರು** | | |
| ೨೫೪. | ಭಾರತಿ ರಮಣ ಪಾಲಿಸು ಕರುಣ | ೨೫೫ |
| ೨೫೫. | ಮೂರುತಿಯ ತೋರೊ ಮಾರುತಿ | ೨೫೬ |
| ೨೫೬. | ಹನುಮಂತ ದೇವನ ನೋಡಿ | ೨೫೬ |
| **ಸರಸ್ವತಿ** | | |
| ೨೫೭. | ಆರತಿ ಬೆಳಗಿರೆ ಶಾರದೆಗೆ | ೨೫೭ |
| **ರುದ್ರದೇವರು** | | |
| ೨೫೮. | ಓ ದೇವ ನೀನೆಂತ ಕರುಣಾಳೊ | ೨೫೮ |
| ೨೫೯. | ಕಾಪಾಡು ಎನ್ನನು ಕೃಪಣ ವತ್ಸಲ | ೨೫೯ |
| ೨೬೦. | ರಕ್ಷಿಸು ಪರಮೇಶ್ವರ ದೇವ | ೨೬೦ |
| ೨೬೧. | ಶಂಕರ ಲೋಕ ಶಂಕರ | ೨೬೧ |
| ೨೬೧(ಅ). | ಶಂಭೋ ಅಂಬಾ ಮನೋಹರ | ೨೬೨ |
| ೨೬೨. | ಶಶಿಕಲಾಭೂಷಣನೆ ಶಂಕರನೆ | ೨೬೩ |
| **ಪಾರ್ವತಿ** | | |
| ೨೬೩. | ಆರತಿಯನೆತ್ತಿರೆ ನಾರೇರೆಲ್ಲರು | ೨೬೩ |
| ೨೬೪. | ಇಂದ್ರಾಕ್ಷಿ ಸಲಹೆ ಬಂದು | ೨೬೪ |
| ೨೬೫. | ಬೇಡುತಿರ್ದೆನು ಕರುಣದಿ ನೋಡು | ೨೭೦ |
| ೨೬೬. | ಹಿಮಾಚಲೇಂದ್ರನ ಕುಮಾರಿ ಶಂಕರಿ | ೨೭೧ |
| **ನವಗ್ರಹ ಸ್ತುತಿ** | | |
| ೨೬೭. | ವಂದಿಸಿ ಬೇಡುವೆ ನವಗ್ರಹ | ೨೭೨ |
| **ಗುರುಸ್ತುತಿ** | | |
| ೨೬೮. | ಗುರು ರಾಘವೇಂದ್ರರ ಚರಣವ ಸ್ಮರಿಸಿರೊ | ೨೭೩ |
| ೨೬೮(ಅ). | ಗುರುರಾಯರ ನಂಬಿದೆ | ೨೭೪ |

| ಕೀರ್ತನೆ ಸಂಖ್ಯೆ | ಕೀರ್ತನೆಗಳ ಮೊದಲ ಸಾಲು | ಪುಟ ಸಂಖ್ಯೆ |
|---|---|---|
| ೨೬೯. | ಗುರು ಪುರಂದರರಾಯ ದುರಿತ ತಿಮಿರಕೆ ಸೂರ್ಯ | ೨೭೪ |
| ೨೭೦. | ವ್ಯಾಸರಾಜ ಪರಿವ್ರಾಜ ಮಹಾರಾಜ | ೨೮೧ |
| ೨೭೧. | ಶ್ರೀಪಾದರಾಜರ ಶ್ರೀಪಾದಾರ್ಚನೆ ಮಾಳ್ವ | ೨೮೩ |
| ೨೭೧(ಅ). | ಜಯತೀರ್ಥರಾಯಾ ಗುರುವರ್ಯ | ೨೮೫ |
| **ಲೋಕ ನೀತಿ** | | |
| ೨೭೨. | ಅಟ್ಟ ಮೇಲೆ ಒಲೆಯ ಉರಿವಂತೆ ಎನಗಿನ್ನು | ೨೮೬ |
| ೨೭೩. | ಎನ್ನಿಳೆಯೊಳು ನಿಂದು ಎನ್ನ ಬೆಳೆಯ ತಿಂದು | ೨೮೬ |
| ೨೭೪. | ಮಧ್ವಮತವ ಪೊಂದಿ ಭಜಿಸಿರೊ | ೨೮೭ |
| ೨೭೫. | ಯಾತಕೆ ಚಿಂತಿಪೆ ಬಿಡು ನೀ | ೨೮೮ |
| ೨೭೫(ಅ). | ಯಾಕೆ ಮೂಕನಾದೆ | ೨೮೮ |
| ೨೭೬. | ವಿಧಿ ನಿಷೇಧವು ನಿನ್ನ ಸ್ಮರಣೆ ವಿಸ್ಮರಣೆ | ೨೮೯ |
| ೨೭೭. | ಶರಣು ಹರಿಗೆ ಶರಣು ಸಿರಿಗೆ | ೨೯೦ |


**ವರವಣಿ ರಾಮರಾಯರು ( ಕೀರ್ತನೆ ೨೭೮ ರಿಂದ ೩೭೪)**


| | | |
|---|---|---|
| ೨೭೮. | ಅಗಲಿರಲಾರೆನೋ ಹರಿಯೆ ನಿನ್ನನು | ೩೧೧ |
| ೨೭೯. | ಅಪರಾಧ ಕ್ಷಮಿಸಿ ನೀ ಕೃಪೆಯಿಂದ ಸಲಹಯ್ಯ | ೩೧೨ |
| ೨೮೦. | ಆದಿ ಮೂಲ ಪಾಲಯಾ ಮಾಂ | ೩೧೨ |
| ೨೮೧. | ಆನೆಂತು ವರ್ಣಿಸಲಿ ಆ ದಿವ್ಯ ಮೂರುತಿಯ | ೩೧೩ |
| ೨೮೨. | ಆರೋಗಣೆಯ ನೀ ಮಾಡಯ್ಯ ಯದುಕುಲವಾರಿಧಿ ಚಂದ್ರಮನೆ | ೩೧೪ |
| ೨೮೩. | ಈತನೇ ಪರಾತ್ಪರನು ಖ್ಯಾತ ನಿಗಮ ಸನ್ನುತ | ೩೧೪ |
| ೨೮೪. | ಉಪಕೃತಿ ಎನ್ನದಲ್ಲ ನರಹರಿ | ೩೧೫ |
| ೨೮೫. | ಎಂತು ಜೀವಿಪೆನಯ್ಯ ನಿನ್ನನಗಲಿ ನಾನು | ೩೧೫ |
| ೨೮೬. | ಎಂಥ ಸ್ಥಿತಿಯೆ ಶ್ರೀರಾಮಗೆ | ೩೧೭ |

| ಕೀರ್ತನೆ ಸಂಖ್ಯೆ | ಕೀರ್ತನೆಗಳ ಮೊದಲಸಾಲು | ಪುಟ ಸಂಖ್ಯೆ |
|---|---|---|
| ೨೮೭. | ಏಕ ಬಾಣ ಬಿಟ್ಟನು ಜಾಣ | ೩೧೭ |
| ೨೮೮. | ಏನ ಪೇಳಲಿ ಹರಿಯ ವ್ಯಾಪಾರ ಮಹಿಮೆ | ೩೧೮ |
| ೨೮೯. | ಏನು ಕರುಣೆಗೈದೆ ನಳಿನಾಕ್ಷ | ೩೧೯ |
| ೨೯೦. | ಏನು ಪುಣ್ಯವ ಮಾಡಿ ನಾನಿಂದು ನಿನ್ನ ಕಂಡೆ | ೩೧೯ |
| ೨೯೧. | ಕಂಡೆ ಕಂಡೆನು ಸ್ವಾಮಿಯ ಸುಪ್ರೇಮಿಯ | ೩೨೦ |
| ೨೯೨. | ಕರುಣವೇಕೆ ಬಾರದಯ್ಯ ಕರಿವರದನೆ | ೩೨೧ |
| ೨೯೩. | ಕರುಣಾಕರ ಕೃಷ್ಣ | ೩೨೨ |
| ೨೯೪. | ಕಳವಳಿಪುದೆನ್ನ ಮನ ಕಮಲಾಕ್ಷ ಬಾರದಿರೆ | ೩೨೩ |
| ೨೯೫. | ಕಾಪಾಡೆಲೊ ದೇವ ಕರುಣಾರ್ಣವ | ೩೨೪ |
| ೨೯೬. | ತೋರಿಸೊ ತವರೂಪ ತೋಯಜ ನೇತ್ರ | ೩೨೪ |
| ೨೯೭. | ದೇವಾದಿ ದೇವ ನಮೋ ಶ್ರೀ ಸತ್ಯದೇವ | ೩೨೫ |
| ೨೯೮. | ದೇವಾದಿ ದೇವ ನೀನವಧರಿಸು ಬಿನ್ನಪವ | ೩೨೬ |
| ೨೯೯. | ನಂದನಂದನ ಗೋವಿಂದ ಹರಿ | ೩೨೭ |
| ೩೦೦. | ನಾಗವೇಣಿಯೆಂದರೆ ಹೀಗೇಕೆ ಮಾಳ್ಪಿರಿ | ೩೨೭ |
| ೩೦೧. | ನಾ ಧನ್ಯ ನಾ ಧನ್ಯ ನಾ ಧನ್ಯನಿಂದು | ೩೨೯ |
| ೩೦೨. | ನಾರದ ಮುನಿವರರೇ ಸದ್ಗುರುವರ | ೩೩೦ |
| ೩೦೩. | ನಿನ್ನದೇ ಸಕಲ ಸೌಭಾಗ್ಯ ಸಾಧನವು ಹರಿಯೆ | ೩೩೧ |
| ೩೦೪. | ನಿನ್ನ ಬಿಟ್ಟಿರಲಾರೆ ನೀರಜಾಕ್ಷ | ೩೩೧ |
| ೩೦೫. | ನೀನಾರು ಪೇಳೆನಗೆ ನಿರುಪಮ ಬಲಪೂರ್ಣ | ೩೩೨ |
| ೩೦೬ | ನೀರಜಾಕ್ಷ ರಾಮ ಲೋಕಾಭಿರಾಮ | ೩೩೩ |
| ೩೦೭ | ನೀಲ ಗಗನ ನಿಭ ನಿರ್ಮಲಗಾತ್ರನೆ | ೩೩೩ |
| ೩೦೮ | ಪದುಮನಾಭನ ಚರಿತೆಯು ಪರಮಾದ್ಭುತವು | ೩೩೪ |
| ೩೦೯ | ಪರಮ ಪುರುಷ ಯದುಕುಲೇಶ | ೩೩೫ |
| ೩೧೦. | ಪುಂಡರೀಕನಯನ ಕೃಷ್ಣ | ೩೩೬ |

| ಕೀರ್ತನೆ ಸಂಖ್ಯೆ | ಕೀರ್ತನೆಗಳ ಮೊದಲ ಸಾಲು | ಪುಟ ಸಂಖ್ಯೆ |
|---|---|---|
| ೩೧೧. | ಬಂದ ಶ್ರೀ ಹರಿ ದಯದಿಂದ ಆನಂದದಿಂದ | ೩೩೬ |
| ೩೧೨. | ಬಂದೆಯಾ ಬಂಧುವೆ ಭಾಗ್ಯದ ನಿಧಿಯೆ | ೩೩೭ |
| ೩೧೩. | ಬಾರಯ್ಯ ಬಾ ಬಾ ಯದುಕುಲರಾಯ | ೩೩೮ |
| ೩೧೪. | ಭೂಷಿತ ವನಮಾಲಾ ಶ್ರೀ ಲೋಲ | ೩೩೮ |
| ೩೧೫. | ಮನ್ನಿಸೊ ಅಪರಾಧ ಮನ್ಮಥ ಜನಕನೆ | ೩೩೯ |
| ೩೧೬. | ಮೋಹನ ನವ ಭವನ ಪರೇಶನ | ೩೪೦ |
| ೩೧೭. | ಶರಣಾಗತ ರಕ್ಷಾಮಣಿಯೆ ಶ್ರೀ ಹರಿಯೆ | ೩೪೦ |
| ೩೧೮. | ಶ್ರೀ ಮನೋಹರ ಹರಿಯಾಪಾರ ವ್ಯಾಪಾರ | ೩೪೨ |
| ೩೧೯. | ಶ್ರೀ ಲಲಾಮನೆ ನಿನ್ನ ಚರಣಾಬ್ಜಗಳಿಗೆ ನಮೋ | ೩೪೨ |
| ೩೨೦. | ಶ್ರೀವರನೆ ಪರತರನೆ | ೩೪೩ |
| ೩೨೧. | ಶ್ರೀ ಹರಿವ್ಯಾಪಾರ ಅಪಾರ | ೩೪೪ |
| ೩೨೨. | ಸರಸಿಯೊಳಗಂದು ಮಕರ ಬಾಧೆಗೆ ಸಿಲುಕಿ | ೩೪೪ |
| ೩೨೩. | ಸಾರಸನಯನ ನಮೋ ನಮೋ | ೩೪೫ |
| ೩೨೪. | ಹರಿಯೆ ಹದಿನಾಲ್ಕು ಲೋಕದ ದೊರೆಯೆ | ೩೪೬ |
| ೩೨೫. | ಹರಿಹರಿ ಕೃಷ್ಣ ಗೋವಿಂದ | ೩೪೬ |
| **ಮಹಾಲಕ್ಷ್ಮಿ** | | |
| ೩೨೬. | ಆವಿರ್ಭವಿಸಿದಳಾಗ ಜಗನ್ಮಾತೆ | ೩೪೭ |
| ೩೨೭. | ರುಕ್ಮಿಣಿಯ ದಿವ್ಯತರ ರೂಪವನು ವರ್ಣಿಸಲು | ೩೪೮ |
| ೩೨೮. | ದೇವಿ ಶ್ರೀ ತುಳಸಿ ದುರಿತೌಘವಿನಾಶಿ | ೩೪೯ |
| ೩೨೯. | ವೃಂದಾವನದೊಳು ಶೋಭಿಸುತಿರುವಳು | ೩೪೯ |
| **ವಾಯುದೇವರು** | | |
| ೩೩೦. | ಪ್ರಾಣನಾಥ ಪಾವನಗಾತ್ರ | ೩೫೦ |

| ಕೀರ್ತನೆ ಸಂಖ್ಯೆ | ಕೀರ್ತನೆಗಳ ಮೊದಲ ಸಾಲು | ಪುಟ ಸಂಖ್ಯೆ |
|---|---|---|
| **ರುದ್ರದೇವರು** | | |
| ೩೩೧. | ಪಾರ್ವತಿರಮಣ ಕರುಣಾಭರಣ | ೩೫೧ |
| ೩೩೨. | ಪಾಲಿಸು ಪರಮೇಶ ಪಾಪ ವಿನಾಶ | ೩೫೧ |
| ೩೩೩. | ವೃಷಭವಾಹನ ಪಶುಪತಿ ಬಂದ | ೩೫೨ |
| **ಗುರುಸ್ತುತಿ** | | |
| ೩೩೪. | ಗುರುವೇ ತವ ಚರಣ ಕಮಲ ಷಟ್ಚರಣನೆನಿಸೊ | ೩೫೩ |
| ೩೩೫. | ನಮಿಸುವೆ ಗುರುರಾಜ | ೩೫೪ |
| ೩೩೬. | ವೃಂದಾವನ ಪ್ರವೇಶಿಸಿದಂದವ | ೩೫೫ |
| ೩೩೭. | ಏನೆಂದು ಬಣ್ಣಿಪೆನು ಶ್ರೀಗುರುವರನ | ೩೫೮ |
| ೩೩೮. | ಗುರುವಾದಿರಾಜರ ಸ್ಮರಣೆಯ ಮಾಡಿರೊ | ೩೫೯ |
| ೩೩೯. | ಶರಣು ಶರಣು ವಾದಿರಾಜ | ೩೫೯ |
| ೩೪೦. | ಶ್ರೀ ಚಂದ್ರಿಕಾಚಾರ್ಯ ಗುರುವೆ | ೩೬೦ |
| ೩೪೧. | ಪರಮಹಂಸ ಪರಿವ್ರಾಜಕ ಗುರುವರ್ಯ | ೩೬೧ |
| **ಆತ್ಮಶೋಧನೆ** | | |
| ೩೪೨. | ನಾನಪರಾಧಿ ಶ್ರೀನಿಧಿದೇವ | ೩೬೧ |
| ೩೪೩. | ಪರಮಪುರುಷ ಕೇಳು ಒರೆದ ಮಾತಿಗೆ ನಾನು | ೩೬೨ |
| ೩೪೪. | ಪೇಳಲೇನು ವಿಧಿಯ ಲೀಲೆಯ ಮಹಿಮೆ | ೩೬೩ |
| ೩೪೫. | ಪ್ರಳಯರುದ್ರನ ಕೋಪಕ್ಕಿಮ್ಮಡಿಯ ಕೋಪದಿಂ | ೩೬೪ |
| ೩೪೬. | ಸಿರಿನರಸಿಂಹನೆ ಕರಿಗಿರಿ ನಿಲಯನೆ | ೩೬೪ |
| ೩೪೭. | ಸುರರಾಜ ವಜ್ರಘಾತಕ್ಕಂಜುವ ನಾನಲ್ಲ | ೩೬೬ |
| **ಲೋಕನೀತಿ** | | |
| ೩೪೮. | ದುರುಳ ಬುದ್ಧಿಯನು ತೋರಿಸಬೇಡವೊ | ೩೬೬ |
| ೩೪೯. | ಬಿಡೋ ಇನ್ನು ಬಿಡೋ ಇನ್ನು | ೩೬೭ |
| ೩೫೦. | ಮೀರಲು ಬಹುದೇ ದೈವ ಸಂಕಲ್ಪವ | ೩೬೮ |
| ೩೫೧. | ಸರಸಿಜಾಸನ ಮೊದಲು ಸ್ತಂಭ ಪರ್ಯಂತವು | ೩೬೮ |

| ಕೀರ್ತನೆ ಸಂಖ್ಯೆ | ಕೀರ್ತನೆಗಳ ಮೊದಲ ಸಾಲು | ಪುಟ ಸಂಖ್ಯೆ |
|---|---|---|
| **ಕಥನಾತ್ಮಕ ಹಾಡುಗಳು** | | |
| ೩೫೨. | ಅರಸಕೇಳಲ್ಕೆ ಸರಸಿಯೊಳಗೆ | ೩೬೯ |
| ೩೫೩. | ಎಲೆ ಮಹಾತ್ಮರೆ ನೀವು | ೩೭೧ |
| ೩೫೪. | ಏನು ಕರುಣವೊ ಕೃಷ್ಣ ಎಮ್ಮ ಮೇಲೆ | ೩೭೧ |
| ೩೫೫. | ಏನು ಸಾಹಸವಂತ ಈ ನಮ್ಮ ಹನುಮಂತ | ೩೭೨ |
| ೩೫೬. | ಏಳು ನೀ ಭೋಜನಕೆ ಯದುಕುಲೋತ್ತುಂಗ | ೩೭೩ |
| ೩೫೭. | ಕನ್ಯಾರತ್ನವನಿತ್ತನು ಹರಿಗೆ ಸತ್ರಾಜಿತರಾಯನು | ೩೭೪ |
| ೩೫೮. | ಕುಶಲವರೆ ಲಾಲಿಸಿರಿ ಕಥೆಯನೆಲ್ಲವ ಪೇಳ್ವೆ | ೩೭೫ |
| ೩೫೯. | ಜಲನಿಧಿಯ ಮಧ್ಯದಿಂ ಜಗದ ಜನನಿಯು ಜನಿಸೆ | ೩೭೭ |
| ೩೬೦. | ಧರಣಿ ಮೊರೆಯನು ಕೇಳಿ ಸರಸಿಜಾಸನ ಸಕಲ | ೩೭೮ |
| ೩೬೧. | ಪರಮ ಸಾಹಸವಂತ ಧೀಮಂತ ಹನುಮಂತ | ೩೭೯ |
| ೩೬೨. | ಪಾದುಕೆಗಳ ದಯಪಾಲಿಸು ಪರಮಪಾವನ ಮಹಿಮ | ೩೭೯ |
| ೩೬೩. | ಬಂದ ಗೋವಿಂದ ವಾರಣೇಂದ್ರನ ಬಳಿಗಾಗ | ೩೮೦ |
| ೩೬೪. | ಬಂದಾನು ಬಂದನು ಬಂದನಾಗ ಗೋವಿಂದ | ೩೮೧ |
| ೩೬೫. | ಬಂದ ಸುಂದರವದನ | ೩೮೨ |
| ೩೬೬. | ಮಾತನಾಡಿಸೋ ತಮ್ಮ ಮೃದುವಚನದಿ | ೩೮೩ |
| ೩೬೭. | ಮಾಣು ಮಾಧವ ಮಾಯ ಜಾಲಗಳ್ | ೩೮೩ |
| ೩೬೮. | ಯಾರೆಂದು ತಿಳಿದಿಯೊ ಈತನ ನೀನು | ೩೮೫ |
| ೩೬೯. | ರಘುವೀರನ ಕಂಡನು ಕಪಿವೀರ | ೩೮೫ |
| ೩೭೦. | ರಾಮ ರಮಾರಮ ರಾಮ ಶ್ರೀರಾಮ | ೩೮೬ |
| ೩೭೧. | ಲಾಲಿಸಿ ರಘುವರನ ಚರಿತೆಯ ಸಾರ | ೩೮೭ |
| ೩೭೨. | ಸಾರಸ ನಯನ ಶ್ರೀರಾಮಚಂದ್ರನ ಚರಿತೆ | ೩೮೯ |
| ೩೭೩. | ಸಾರಿದ ಸಿರಿವರ ಸಡಗರದಿಂದಲಿ | ೩೯೧ |
| ೩೭೪. | ಹರಿಯೆ ನಿನ್ನಯ ಗುಣ ಸರಸಿಜ ಭವ ಮುಖ್ಯ | ೩೯೨ |

# ಅನುಬಂಧಗಳು

೧. ಕಠಿಣ ಶಬ್ದಗಳ ಅರ್ಥ

೨. ಟಿಪ್ಪಣಿಗಳು

೩. ಅಂಕಿತನಾಮಸೂಚಿ

೪. ಜಯೇಶವಿಠಲರ ಅಧಿಕ ಕೃತಿಗಳು

೫ ಗುರುಜಯೇಶವಿಠಲ ಅಂಕಿತದ ಕೆಲವು
ಕೃತಿಗಳು (ಜಯೇಶವಿಠಲರ ಪತ್ನಿ)

೬. ರಂಗೇಶವಿಠಲರಿಗಿತ್ತ ಅಂಕಿತದ ಪದ

೭. ದಾಸರ ಲಕ್ಷ್ಮೀನಾರಾಯಣರಾಯರ
ಇತರ ಕೃತಿಗಳು

೮. ಕೀರ್ತನೆಗಳ ಅಕಾರಾದಿ ಸೂಚಿ

# ಅನುಬಂಧ-೧

## ಕಠಿಣ ಶಬ್ದಗಳ ಅರ್ಥ

ಅಂಗಜ – ಮನ್ಮಥ
ಅಂಕ – ತೊಡೆ
ಅಂಕುರ – ಮೊಳಕೆ
ಅಂಗಜನಯ್ಯ – ವಿಷ್ಣು
ಅಂಗಳು – ತಾಳುಗೆ
ಅಂಡಜ – ಗರುಡ
ಅಂಡಜವಾಹನ– ವಿಷ್ಣು
ಅಂತಃಸ್ತಾಪ – ಮನಸ್ಸಿನ ಬೇಗುದಿ
ಅಂಬರಾಧಿಪ – ಅಂತರಿಕ್ಷಾಭಿಮಾನಿಯಾದ ಗಣೇಶ
ಅಂಬಿಗ – ನಾವಿಕ
ಅಂಬುಕಣ – ನೀರಹನಿ
ಅಂಬುಗುಳ್ಳೆ – ನೀರುಗುಳ್ಳೆ
ಅರ್ಕ – ಸೂರ್ಯ
ಅಕ್ಷತೆ – ಹಣೆಯ ಬೊಟ್ಟು
ಅಕ್ಷಯಾಂಬರ – ಅಕ್ಷಯವಸ್ತ್ರ
ಅಖಣಾತ್ಮಕಾಯ – ವಜ್ರಶರೀರಿ
ಅಗ್ನಿನೇತ್ರ – ಶಿವ
ಅಘ – ಪಾಪ
ಅಘಹಾರಿಣಿ – ಪಾಪನಾಶಿನಿ
ಅಚಲ – ಪರ್ವತ
ಅಚಲೋದ್ಧರಣ– ಕೂರ್ಮಾವತಾರಿ ಶ್ರೀಹರಿ
ಅಚ್ಯುತ – ನಾಶವಿಲ್ಲದವನು
ಅಜ – ಜನನರಹಿತನಾದ ಶ್ರೀಹರಿ, ಬ್ರಹ್ಮ
ಅಜತಾತ – ಬ್ರಹ್ಮನ ತಂದೆ
ಅಜನಯ್ಯ – ಶ್ರೀಹರಿ
ಅಜಪಿತ – ಬ್ರಹ್ಮನ ತಂದೆಯಾದ ಶ್ರೀಹರಿ
ಅಜಸುತ – ಅಜಮಹಾರಾಜನ ಮಗನಾದ ದಶರಥ
ಅಜಿನ – ಜಿಂಕೆ ಚರ್ಮ
ಅರ್ಣವ – ಸಾಗರ
ಅರ್ತಿ – ಪ್ರೀತಿ, ನೋವು, ವ್ಯಥೆ
ಅದಟು – ಪರಾಕ್ರಮ
ಅದ್ರಿಕುವರಿ – ಪಾರ್ವತಿ
ಅಧ್ವರ – ಯಾಗ
ಅಧ್ವರ್ಯು – ಮುಂದಾಳು
ಅನಲ – ಬೆಂಕಿ
ಅನಲಾಕ್ಷ – ಶಿವ
ಅನಲಾಕ್ಷ ಕಾರ್ಮುಕ– ಶಿವಧನಸ್ಸು
ಅನಲಾಕ್ಷಧನು – ಶಿವಧನಸ್ಸು
ಅನಿಮಿಷ – ದೇವತೆ
ಅನಿಮಿಷರು – ದೇವತೆಗಳು

## ೧

ವಿಘ್ನೇಶ ಪಾಹಿಮಾಂ
ವಿಘ್ನ ನಿವಾರಕ ನಿರ್ವಿಘ್ನದಾಯಕ ಪ

ಭಗ್ನದಂತಾಕಾಶಾಭಿಮಾನಿ
ಮಗ್ನಂ ಕೃತ್ವಾವೋ ಮನ
ಅಗ್ನಿ ನೇತ್ರಸುತ ತವ ಪದದೆ ಅ.ಪ

ಕುಕ್ಷಿ ಮಹಾಲಂಬೋದರ ಇಕ್ಷುಚಾಪಹರ
ಅಕ್ಷತ ಶೋಭಿತ ಗಜಪಾಲ
ರಾಕ್ಷಸ ಮದಹರ ಅಂಕುಶಪಾಶ
ಯಕ್ಷ ಕಿನ್ನರ ವಂದಿತ ಚರಣ ೧

ಗಜಾನನ ಮನೋಹರ ಗಾತ್ರ
ಅಜಿನ ಬದ್ಧ ಪ್ರಲಂಬ ಪವಿತ್ರ
ಭಜಕೇಷ್ಟದ ಪರಮ ಸೂತ್ರ
ಸುಜನ ಪಾಪ ಪರ್ವತ ವೀತಿ ಹೋತ್ರ ೨

ಚತುರ್ಹಸ್ತ ಮೂಷಕ ಗಮನ
ವಾಯುಭುಗ್ ಭೂಷ ಆದಿಪೂಜ್ಯ
ವಿತತ ಮಹಿಮ ಏಕದಂತ ಗಂಧಲೇಪಿತ ವಕ್ಷ
ಪತಿತ ಪಾವನ ವಿಶ್ವೋಪಾಸ್ಯ ೩

ವ್ಯಾಸೋಕ್ತ ಪುರಾಣ ಲಿಖಿತನೆ ಶೂರ
ವಿಂಶತ್ಸೇಕ ಮೋದಕ ಭಕ್ಷ

ವಾಸುಕಿ ಬದ್ಧ ಕಟಿ ವಿರಾಜಿತ ಕ್ಲೇಶನಾಶನ ಸುಂದರ
ಆಶಾಪಾಶ ರಹಿತ ಭೂತ ಗಣೇಶ ೪

ಹಾಟಕ ಮಣಿಮಯ ಮಕುಟ
ತಟಿತ್ತೇಜ ನಿತ್ಯವಹಿರೂಪ
ಪಟಪಟ ಶಬ್ದಘಟಿತ ಗಜಕರ್ಣ
ನಿಟಿಲಾಕ್ಷ್ಯವಂದ್ಯ ವಿಜಯರಾಮಚಂದ್ರ
ವಿಠಲ ಪೂಜಕ ಶತಸ್ಥ ೫

## ೨

ಇನ್ನುಪೇಕ್ಷೆಯ ಮಾಡೆ ಎನ್ನ ಕಾಯುವರಿಲ್ಲ
ಮನ್ನಿಸಿ ಸಲಹೊ ದಯದಿ ಪ

ಪನ್ನಗಾದ್ರಿನಿಲಯ ಆಪನ್ನ ಪರಿಪಾಲ
ಶ್ರೀನಿವಾಸ ಅಖಿಳಾಮರೇಶ । ಶ್ರೀಶಾ ಅ.ಪ

ಕ್ರೂರತರ ಸಂಸಾರ ದಾವಾಗ್ನಿ ಮೇರೆಯಿಲ್ಲದೆ ಸುಟ್ಟು
ಘೋರ ದುಃಖ ಬಿಡಿಸುತಿಹುದೊ
ವಾರಿಜಾಕ್ಷ ನಿನ್ನ ನಾಮಾಮೃತವೆಂಬ ಮಳೆಗರೆದು
ಹರಸಿ ಪೊರೆಯಯ್ಯ । ಜೀಯ ೧

ಸತಿಸುತರ ಹಿತಕಾಗಿ ಅತಿ ನೀಚವೃತ್ತಿಲಿ ನಡೆದು
ಪತಿತ ನಾನಾದೆನಯ್ಯ
ಪತಿತಪಾವನ ನಿನ್ನ ಕಥೆಗಳನು ನುಡಿಸಿ ಸ-
ದ್ಗತಿಯ ಪಾಲಿಸಯ್ಯ । ಪ್ರೀಯ ೨

ಆರು ಮಂದಿಗಳೆಂಬ ವೈರಿಗಳೆನ್ನನು ಸೇರಿ
ಗಾರು ಮಾಡುತಲಿಹರೊ

ಮೀರಿದವರ ಬಡಿವ ಕಂಸಾರಿ ಮುರವೈರಿ
ಸೇರಿದೆ ಪರಿಹರಿಸೊ ಕಷ್ಟ । ನಿನ್ನಿಷ್ಟ ೩

ವಿಷಯದಾಸೆಗಳೆಂಬ ಪಶುಪತಿ ಘುಡುಘುಡಿಸಿ
ವ್ಯಸನದಿಂ ಕೊಲ್ಲುತಿಹುದೋ
ಶ್ವಸನ ಅಂತರ್ಯಾಮಿ ನಿಶಾಚರ ವೈರಿ
ವಶಮಾಡಿ ಎನ್ನ ಪೊರೆಯೊ । ಕಾಯೊ ೪

ಅತಿತ್ತ ಪೋಗದಲೆ ಹಿತವಾದ ಚಿಂತೆಯೊಳು
ರತನಾಗಿ ಖತಿಗೊಳ್ಳುತಿಹೆನೊ
ಚ್ಯುತದೂರ ಅಚ್ಯುತಾನಂದ ಗುಣಪೂರ್ಣ ನಿನ್ನ
ಸ್ಮೃತಿಯಿತ್ತು ಪಾಲಿಸೊ । ಸಲಿಸೊ ೫

ಒಂದು ಕ್ಷಣವಾದರು ಕುಂದು ಮಾಳ್ಪಾಲೋಚನೆ
ಯಿಂದ ಮನ ಹಿಂದಾಗದೊ
ಆನಂದ ಮುನಿವಂದ್ಯ ದ್ವಂದ್ವತಪ ಪಾದದಿ ಮನ
ಹೊಂದುವಂದದಿ ಮಾಡೊ । ಎನ್ನ ಕೂಡೊ ೬

ಬಹುವಿಧದ ಐಹಿಕ ಸುಖ ಬಯಸಿ ಲೋಕದ
ವಿಹಿತಗಳೆಲ್ಲ ಮರೆದೆ
ಅಹಿ ತಲ್ಪ ವಿಜಯರಾಮಚಂದ್ರವಿಠಲ
ಪಾಹಿ ಸತತಯೆನ್ನ । ಮುನ್ನ ೭

## ೩

ಓಂಕಾರ ಪ್ರತಿಪಾದ್ಯ ಶಂಖಚಕ್ರಾಭಯಕರ
ಬಿಂಕದಿಂದ ಬಾಕು ಟೊಂಕದಿ ಕಟ್ಟಿ ಮೆರೆವ ದೇವ ೧

ಇಷ್ಟು ಜನರ ರೋಗ ತೊಟ್ಟಿ ತೀರ್ಥದಿಂದ ಕಳೆವ
ಕಷ್ಟದ ಕಂಕಣ ಕಟ್ಟಿ ಮೆರೆವ ದೇವಾ ೨

ದೇಶದೇಶದಿ ಬರುವ ದಾಸ ಜನರ ಅರ್ಥಿ
ಕಾಸುವೀಸಕೆ ಕೊಟ್ಟು ಲೇಸಾಗಿರುವಿಯಿಲ್ಲಿ ೩

ನಾಮ ತೀರ್ಥ ಪ್ರಸಾದ ಕಾಮಿಸೆ ವಿಕ್ರಯಿಸುವ
ನೇಮಗಳನೆ ಕೊಟ್ಟು ತ್ರಿಧಾಮ ನಿಲಯನೆ ೪

ಮಂಗಳ ಮಹಿಮನೆ ಗಂಗಾಜನಕನೆ
ಅಂಗಜನಯ್ಯನೆ ವೆಂಕಟರಮಣನೆ ೫

ತಾಳ ತಂಬೂರಿ ದಮ್ಮಡಿ ಮೇಳದೊಳು ದಾಸರು
ವೇಳೆ ವೇಳೆಗೆ ಸೇವಿಸೆ ಕಾಳ ದೋಷವ ಕಳೆವ ೬

ರಮಾ ಸೇವಿತ ವಿಜಯ ರಾಮಚಂದ್ರವಿಠಲ
ನೇಮದಿಂದಲಿ ನಿತ್ಯ ನಿನ್ನ ನಾಮಗಳನೆ ನುಡಿಸೊ ೭

## ೪

ನಾರಸಿಂಹ ನಾರಸಿಂಹ ನಾರಸಿಂಹ ಪ

ನಿತ್ಯದಲಿ ಬರುವ ಅಪಮೃತ್ಯುವಿನ ಬಾಧೆಯ
ಕೃತ್ತಿ ಒತ್ತಿ ಪರಿಹರಿಸಿ
ಭೃತ್ಯನಾದ ಜೀವನ್ನ ತೃಪ್ತಿಪಡಿಸುವ ದೇವ
ಭಕ್ತವತ್ಸಲ ನಾರಸಿಂಹ ೧

ಅಂದು ಸ್ವಪ್ನದಿ ಬಂದೆ ದ್ವಂದ್ವ ಪಾದಕ್ಕೆರಗಿ
ನಿಂದು ನಾ ನಿನ್ನ ಬೇಡೆ

ಸಂಧಿಸಿ ಕ್ರೂರ ದೃಷ್ಟಿಯಿಂದ ನೋಡಿ
ಮಂದೀಗೆ ಕುಂದು ಮಾಡಬ್ಯಾಡೆಂದೆ ೨

ಅಂದಿನಾರಭ್ಯ ಬಲು ಬಂಧನಕೆ ಸಿಲ್ಕಿ ನಾ
ನೊಂದ ಪರಿ ಪೇಳಲಾರೆ
ಹಿಂದಿನ ಅಘವೆಣಿಸದೆ ಬಂದು ನಾರಿ ಸಹಿತ
ತಂದೆ ಈ ಸುತನ ಕಾಯೋ ೩

ತಂದೆ ತಾಯಿಯು ನೀನೆ ಬಂಧು ಬಳಗವು ನೀನೆ
ಎಂದು ಎನ್ನಗಲದೆ
ಬಂದು ನೆಲಸೆನ್ನಲ್ಲಿ ಅಜ್ಞಾನ ಕೊಡದಿರು
ವಂದಿಸುವೆನು ನಾರಸಿಂಹ ೪

ಮುಂದಾದರು ಹೃನ್ಮಂದಿರದಿ ನೆಲೆಗೊಂಡು
ಸಂದರ್ಶನವನೀಯೊ ದೇವ
ಕಂದರ್ಪಹರ ವಿಜಯ ರಾಮಚಂದ್ರವಿಠಲರೇಯ
ವಂದೆ ಭಕ್ತಿಯ ಪಾಲಿಸು ೫

## ೫

ಬಾರನಲ್ಲೆ ಸಖಿ ಪರಿಪೂರ್ಣ ಕಾಮನು ಪ

ತೋರನಲ್ಲೆ ಅವನ ಚರಣ ಕಮಲವನ್ನು ಅ.ಪ

ಪತಿಸುತರ ಬಿಟ್ಟು ಕೃಷ್ಣನೆ ಗತಿಯೆಂದು ನಂಬಿದ
ಸತಿಯರ ದಣಿಸುವುದು ಲಕ್ಷ್ಮೀಪತಿಗೆ ಸರಿಯೆ ನಲ್ಲೆ ೧

ಸರಸಿಜಾಕ್ಷಿಯರ ಕೂಡ ಅವನೂ ಸರಸವಾಡುವ
ತುರುಗಳಲ್ಲಿ ಗುಡುಗ್ಯಾಡಿ ಕರುಗಳನು ಬಿಚ್ಚುವ ೨

ಒರಳನೆಳೆದು ಮರವನ್ನು ಮುರಿದು ನಿಲ್ಲುವ
ಅರಿಯದಬಲೆಯರ ಸೀರೆ ಮರಕೆ ಕಟ್ಟಿ ಪೋಗುವ ೩

ವ್ರಜದ ನಾರೇರ ಬಿಟ್ಟು ಕುಬುಜೆ ಗಂಧವ ಬೇಡುವ
ಭುಜಬಲವನ್ನು ತೋರಿ ನಿಜ ವೈರಿಯರ ಕೊಲ್ಲುವ ೪

ಏಸು ಕಾಲದಿಂದ ಅವನ ಬಯಸಿ ನಾ ಬೇಡುವೆ
ವಾಸುದೇವ ವಿಜಯ ರಾಮಚಂದ್ರವಿಠಲನ ೫

೬

ಬಾರೊ ಗೋಪಿನಾಥ ನಿನ್ನಗಲಿರಲಾರೆನೊ ಪ

ವಾರೆ ನೋಟದಿ ನಾರೇರ ಮನ ಸೆಳೆವೊ ಶೌರಿ ಅ.ಪ

ವಾರಿಚರ ಕೂರ್ಮನೆ ಧಾರುಣಿ ತಂದನೆ
ತೋರ ಕೊರಳ ಹಾರ ವರಮೃಗರೂಪನೆ ೧

ಭೂದಾನವ ಬೇಡಿ ಮೇದಿನಿ ಪಾಲಕರ ಕೊಂದು
ಆ ದಶಾಸ್ಯನಳಿದ ಸೋದರ ಮಾವನ ವೈರಿ ೨

ಬೆತ್ತಲೆ ನಿಂತು ದುಷ್ಕೃತ್ಯ ಮಾಳ್ಪರ ಕೊಂದು
ಉತ್ತಮ ತುರಗವೇರಿದ ಭೃತ್ಯವತ್ಸಲ ದೇವ ೩

ವಿಜಯ ರಾಮಚಂದ್ರವಿಠಲರಾಯನೆ
ಸುಜನ ವಂದಿತ ನಿನ್ನ ಭಜನೆಯ ಪಾಲಿಸೊ ೪

## ೭

ಬಾರೊ ಗೋವಿಂದ ಹೃತ್ಸರೋಜಕ್ಕೆ ಪ

ಧರಾದೇವಿ ರಮಣ ಸುರವರಾರ್ಚಿತ ಚರಣ ಶೃಂ–
ಗಾರ ಗುಣಪೂರ್ಣ ಮಾರಜನಕನೆ ಅ.ಪ

ಅಂಡಜವಾಹನ ಬ್ರಹ್ಮಾಂಡ ಗುಣಪೂರ್ಣ
ತೊಂಡರ ಪಾಲಿಪೊ ಪುಂಡರೀಕಾಕ್ಷನೆ ೧

ತುಂಗವಿಕ್ರಮನೆ ಸಂಗೀತಲೋಲನೆ
ಮಂಗಳಮಹಿಮನೆ ಗಂಗೆಯ ಪಿತ ಹರಿ ೨

ದುರಿತದೂರನೆ ಸಿರಿ ಸಹಿತ ನಿಲಯನೆ
ಕಿರೀಟಿ ಸಖ ಶೌರಿ ವಾರಿಜದಳ ನಯನ ೩

ವಿಜಯ ರಾಮಚಂದ್ರವಿಠಲರಾಯನೆ
ಅಜವಂದಿತ ನಿನ್ನ ಭಜನೆಯ ಪಾಲಿಸೊ ೪

## ೮

ಬಿಟ್ಟಿರಲಾರೆ ಬಾ ಗೋವಿಂದಾ ಸೃಷ್ಟಿಶಾನಂದ ಪ

ಬಿಟ್ಟಿರಲಾರೆ ಮನಮುಟ್ಟಿ ಭಜಿಪೆನಯ್ಯ
ಅಷ್ಟಮಹಿಷೇರ ಸಹಿತ ನಾಟ್ಯವಾಡುತ ಬೇಗ ಬಾ ಅ.ಪ

ಗೊಲ್ಲರ ಮನೆ ಪೊಕ್ಕು ಪಾಲ್ಬೆಣ್ಣೆಗಳ ಮೆದ್ದು
ಚೆಲ್ವ ಲಲನೇರ ಗಲ್ಲ ಮುದ್ದಾಡುತ ಬೇಗ ೧

ಮಂದಗಮನೆಯರ ಮಂದಹಾಸದಿ ಅಪ್ಪಿ
ದ್ವಂದ್ವ ಕುಚದಲ್ಲಿಟ್ಟ ನಂದಜ ಕರಗಳಿಂದ ೨

ಮಿರಿಮಿರಿ ಮಿಂಚುವ ಕಿರೀಟ ಕುಂಡಲ
ಧರಿಸಿ ವಾರೆ ನೋಟದಿ ನಾರೇರ ಮನ ಸೆಳೆವ ೩

ಸುಮನಸರೊಂದಿತ ಯಮುನಾ ಪುಳಿನದಿ
ವಿಮಲ ವೇಣುಸ್ವರದಿ ಕಮಲಾಕ್ಷಿಯರೊಲಿಸಿದ ೪

ಶ್ರೀವತ್ಸ ಕೌಸ್ತುಭ ಪವಳ ಮುತ್ತಿನಹಾರ
ನ್ಯಾವಳ ಸರಿಗಿಟ್ಟು ಗೋವಳರೊಡಗೂಡಿ ೫

ತುತ್ತೂರಿ ಝಾಂಗಟೆ ಒತ್ತಿ ಪಿಡಿದಿಹ ಕಹಳೆ
ಬತ್ತೀಸ ರಾಗದಿ ತತ್ಥೈವಾದ್ಯದೀ ೬

ಎತ್ತಿ ಪಿಡಿದಿಹ ಛತ್ರಿ ಸುತ್ತು ಮಾಗಧ ಮಂದಿ
ಸ್ತೋತ್ರವ ಮಾಡೆ ನೇತ್ರೋತ್ಸವ ತೋರುತ ೭

ದಿವಪನ ಸೋಲಿಪ ನವ ಪೀತಾಂಬರ ಧರಿಸಿ
ಭುವನವ ಮೋಹಿಪ ನವ ಸುವಿಶೇಷನೆ ೮

ವಿಜಯ ರಾಮಚಂದ್ರವಿಠಲರಾಯನೆ
ನಿಜ ಪರಿವಾರದಿಂ ಭಜಕರ ಪಾಲಿಪ ೯

## ೬

ಯಾಕೆ ಬರವಲ್ಲಿ ಭಕುತನವಸರಕೆ ಪ

ಬೇಕಿಲ್ಲೆ ಭಕ್ತವತ್ಸಲನೆಂಬ ಬಿರುದೀಗ ಅ.ಪ

ಸುರಮುನಿ ನುಡಿಕೇಳಿ ನಾರಿ ಸತ್ಯಭಾಮೆ
ಹರಿ ನಿನ್ನ ದಾನಮಾಡೆ
ವರ ವೀಣ ಪುಸ್ತಕ ಹೊರಿಸಿ ಕರೆದೊಯ್ದನೇನೊ ೧

ಮಾತೆಯ ಹಂಗಣೆಯ ಮಾತಿಗೆ ಖತಿಗೊಂಡು
ಪೋತ ಧ್ರುವ ಅರಣ್ಯ ಪೋಗೆ
ಪ್ರೀತಿಯಿಂದಲವನ ಕಾಯ ಪೋದ್ಯಾ ೨

ಕುರುಪ ಧರ್ಮಾದ್ಯರ ಕರೆಸಿ ಪಗಡೆಯಾಡೆ
ಸರಸಿಜಾಕ್ಷಿಯ ಸೀರೆಯ
ದುರುಳ ಸೆಳೆಯೆ ಕಾಯ ಪೋದ್ಯಾ ೩

ಹಿರಣ್ಯಾಕ್ಷನನುಜ ತರಳನ ಬಾಧಿಸೆ
ಘೋರ ಕಂಬದಿ ಒಡೆದು
ನರಮೃಗ ರೂಪನಾಗಿ ಪೋದ್ಯಾ ೪

ನೀರಡಿಸಿ ಗಜರಾಜ ಸರೋವರಕೆ ಬರಲು
ಕ್ರೂರ ನಕ್ರ ಪಿಡಿದೆಳೆಯೆ
ಮೊರೆಯಿಡೆ ಕಾಯ ಪೋದ್ಯಾ ೫

ವರವೇದ ಶಾಸ್ತ್ರ ತೊರದು ಪರಮ ನೀಚಳ ಕೂಡಿ
ಮರಣ ಕಾಲದಲ್ಲಜಮಿಳ
ನಾರಗನೆಂದು ಕರೆಯೆ ಪೋದ್ಯಾ ೬

ಕರುಣಿ ವಿಜಯ ರಾಮಚಂದ್ರವಿಠಲ ಅವರ
ಸರಿ ನಾನಲ್ಲವೊ ತವ
ಚರಣ ಸೇವಕರ ಸೇವಕನೊ ೭

## ೧೦

ರಾಮ ಬಂದ ನಮ್ಮ ಪ್ರೇಮ ಬಂದಾನೊ ಪ

ಕೋಮಲಾಂಗ ಕಮಲಾಪತಿ ಬಂದಾನೊ ಅ.ಪ

ಸರಸಿಜನಾಭ ಬಂದ ಕರಿವರದನು ಬಂದ
ಕರುಣಾಕರ ನರಹರಿಯು ತಾ ಬಂದನೊ ೧

ಕಂಸ ಮರ್ದನ ಬಂದ ಹಂಸ ದೇಹನು ಬಂದ
ಮೋಸಗೊಳಿಸಿ ದೈತ್ಯರ ವಂಚಿಸಿದಾತ ಬಂದನೊ ೨

ಚಕ್ರಪಾಣಿಯು ಬಂದ ವಕ್ರೆಗೊಲಿದವ ಬಂದ
ತ್ರಿವಿಕ್ರಮ ವಿಜಯ ರಾಮಚಂದ್ರವಿಠಲ ಬಂದಾನೊ ೩

## ೧೧

ಸುದ್ದಿಯ ಕೊಟ್ಟು ಬಾರೆ
ಬುದ್ಧಿ ಶರಧಿ ಸುಮ ಗಂಭೀರೆ ನೀರೆ ಪ

ಹದ್ದನೇರಿ ಮೆರೆವ ಮುದ್ದು ಮೋಹನ್ನ
ಇಂದುವದನ ಗೋಪಾಲಕೃಷ್ಣಗೆ ಅ.ಪ

ಮುಟ್ಟಳು ಅನ್ನ ಆಹಾರವನ್ನು
ಬಿಟ್ಟಳು ಇಷ್ಟ ಪದಾರ್ಥವೆಲ್ಲ
ದೃಷ್ಟೀಸಿ ನೋಡಳನ್ಯರು
ಸೃಷ್ಟೀಲಿ ಭಾರಜೀವಿತ
ಕಷ್ಟದೆಶೆಯಲಿರುವುಳೆಂದು ೧

ಇಡಳು ಕನಕಾಭರಣಂಗಳು
ತೊಡಳು ವರವಸ್ತ್ರಂಗಳು
ಬಡುವಾಗಿ ನಡು ಬಳುಕುತಿಹಳು
ಒಡೆಯ ನೀ ಬಾರದಿರಲು ಪ್ರಾಣ
ಬಿಡುವಳು ನಿಶ್ಚಯವೆಂದು ೨

ಬಯಸುವಳು ನಿನ್ನ ಆಗಮನವನ್ನು
ಸಯಿಸಳು ವಿರಹ ತಾಪ
ಧ್ಯೇಯ ವಿಜಯ ರಾಮಚಂದ್ರವಿಠಲ
ಕೈಯಿ ಸೇರೆ ಸರ್ವಾವಯವ
ಕಾಯ ಸಮರ್ಪಿಸುವಳೆಂದು ೩

## ೧೨

ಹ್ಯಾಗೆ ಬರುವ ವೇದ ವೇದ್ಯ
ನಾಗವೇಣಿ ಶುಕವಾಣಿ ಸಖಿ ಪ

ಭೋಗ ಭಾಗ್ಯ ಬಯಸುವ । ಕು
ಯೋಗ ಕುತ್ಸಿತಳಲಿ ಅ.ಪ.

ಅಗಣಿತ ಗುಣಾರ್ಣವಗೆ
ಸುಗುಣನೆಂದರಿತು ನಾ ಮಣಿಯಲರಿಯೆ
ಬಗೆ ಬಗೆ ಕುಸುಮಂಗಳನು ಸೊಗಸಿನಿಂದಲಂಕರಿಸಿ
ನಗಧರನ ಸ್ತುತಿಸಲರಿಯದವಳಲ್ಲಿ ೧

ರಮಾಭಿಮಾನ್ಯನಂತಾಸನ ಸದನಗೆ
ಕಮಲಾಸನವಿತ್ತು ಪ್ರೇಮ ಮಾಡಲರಿಯೆ
ಸೋಮ ಸೂರ್ಯನಂತರುಧಾಮದಿ ಬೆಳಗುತ್ತಿರೆ
ನೇಮದಿಂದ ದೀಪದಾರತಿಯ ಮಾಡುವಳಲ್ಲಿ ೨

ಸಿರಿಭವಾದ್ಯರೆ ಆಭರಣ ಉಳ್ಳವಗೆ
ಕರಗುವ ಕನಕ ತೊಡಿಸಲರಿಯೆ
ಕರಿವರದ ವಿಜಯ ರಾಮಚಂದ್ರವಿಠಲನ್ನ
ಅರಿತು ಒಲಿಸಲರಿಯದವಳಲ್ಲಿ ೩

## ೧೩

ಇಂದಿರೆ ಚಂದಿರವದನೆ ಮಂದಗಮನೆ
ಕಂದರ್ಪ ಕೋಟಿ ಲಾವಣ್ಯೆ ಪ

ಮಂದನಾಗಿ ಭವಸಿಂಧುವಿಲಿ ಪೊಂದಿದೆ
ಬಂದು ನೀ ಕರಪಿಡಿದು ಮುಂದಕೆ ಕರೆಯೆ ಅ.ಪ.

ನಾಗವೇಣಿಯೆ ಸುರಶ್ರೇಣಿ ಅಗಣಿತಗುಣಮಣಿಯ
ಹೊಗಳುವ ಮತಿ ನೀಡೆ ಕಲ್ಯಾಣಿ
ಹಗಲಿರುಳು ನಡೆಯುವ ಬಗೆ ಬಗೆ ಕ್ರಿಯೆಗಳು
ನಗಧರನೆ ಮಾಳ್ಪಾನೆಂಬ ಮಿಗೆ ಜ್ಞಾನ ಪಾಲಿಸೆ ೧

ಸರಸಿಜೋದ್ಭವ ಮಾತೆ ವಿಖ್ಯಾತೆ
ಸುರ ನಿಕರ ಸನ್ನುತೆ ಕಂಕಣಾಭರಣ ಭೂಷಿತೆ
ಕರೆ ಕರೆಗೊಳಿಸುವ ಅಹಂ ಮಮತೆ ಶರಧಿಯು
ತೆರೆಯಂತೆ ಬರುವುದು ಮರೆಸಿ ನೀ ಪೊರೆಯೆ ೨

ಹರಿಗುಣ ಮಣಿಯೆಣಿಸುವ ಧೀರೆ
ಪರಿಪರಿ ಅಲಂಕಾರೆ ಸ್ಮರಿಸದವರಿಗೆ ದೂರೆ
ಅರಿದೂರ ವಿಜಯ ರಾಮಚಂದಿರವಿಠಲನ
ನಿರುತ ಧೇನಿಸುವಂತೆ ಮರೆಯದೆ ಮಾಡೆ ತಾಯೆ ೩

## ೧೪

ಕರುಣಿಸು ಭಾರತೀರಮಣ ಕರುಣಿಸು ಪ

ಕರುಣಿಸು ಭಾರತಿ ರಮಣಾ ನಿನ್ನ
ಚರಣಕ್ಕೆ ನಮೊ ಎಂಬೆ ಪರಣ । ಆಹ
ಪರಮದಯಾದಿಂದ ಹರಿಯನ್ನ ತೋರಿಸು
ದುರುಳರೊಳಡಗಿದೆ ನಿಲಿಸೊ ಜ್ಞಾನಿಗಳಲ್ಲಿ ಅ.ಪ

ತ್ರೇತಾಯುಗದಲ್ಲವತರಿಸಿ । ಕಪಿ
ವ್ರಾತ ಶಿರೋಮಣಿ ಎನಿಸಿ । ಪಕ್ಷ –
ಚೂತ ಫಲಗಳನ್ನು ಸಲಿಸಿ । ಭೂಮಿ –
ಜಾತೆಯ ಪಾದಕ್ಕೆ ನಮಿಸೀ । ಅಹ
ಘಾತಿಸಿ ಖಳರನ್ನು ಸೀತಾಪತಿ । ಮನೋ
ರಥವನು ಸಲಿಸಿದ ಮಾತರಿಶ್ವನೆ ನೀ ೧

ಕುಂತಿಯ ಉದರದಿ ಜನಿಸಿ । ಬಹು
ಪಂಥದಿ ವನವ ಸಂಚರಿಸಿ । ಸಿರಿ –
ಕಾಂತನ ಪಾದಕ್ಕೆ ನಮಿಸಿ । ಮಡದಿ
ಚಿಂತೆಯನು ದೂರಗೈಸಿ । ಅಹ
ಸಂತಾಪಗೊಳುತಿಪ್ಪ ದಂತಿಪುರಾಧಿಪನ
ತಂತುಗೆಡಹಿತ ಬಲವಂತ ಶಿರೋರನ್ನ ೨

ಕಲಿಯುಗದಲುದ್ಭವಿಸಿ । ಬಹು
ಲೀಲೆಯೊಳನ್ಯರ ಜಯಿಸಿ । ಸತ್ಯ
ಶೀಲರನ್ನುದ್ಧರಿಸಿ । ಸಿರಿ
ಲೋಲನೆ ಪರದೈವವೆನಿಸಿ । ಆಹ
ಬಾಲ ರವಿ ತೇಜ ವಿಜಯ ರಾಮಚಂದಿರವಿ –
ಠಲನ್ನ ಪೂಜಿಸುವಂಥ ಆಲವ ಬೋಧಾಯನೆ ೩

## ೧೫

ನೀನ್ಯಾಕೊ ನಿನ್ನ ಗೊಡಿವ್ಯಾಕೊ ಹನುಮೇಶ ಪ

ಅನ್ಯಮತಿ ಪೊಂದಿ ಮಿಥ್ಯಾಜ್ಞಾನಿಯಾಗದೆ
ಮಾನ್ಯ ಶ್ರೀಮದಾನಂದರ ಪಾದ ಪೊಂದಿದ್ದರೆ ಸಾಕೊ ಅ.ಪ

ಜೀವೋತ್ತಮರ ಭಾವವನನುಸರಿಸಿ
ನೋವಾಗುವ ಮಾರ್ಗವ ಜರಿದು
ಭಾವಜನಯ್ಯ ನಿನ್ನ ಭಾವವ ಕಂಡು
ಆವಾಗಲು ಸುಖಿಪರ ಗೃಹ ಕಾವನಾದರೆ ಸಾಕು ೧

ದೇಹಸ್ಥಿರವಲ್ಲ ದಹನಶೀಲಭವ
ಇಹಸುಖ ಹೇಯವೆಂದು
ಮೋಹಪಾಶಕೆ ಸಿಗಿಸದೆ ನಿನ್ನನುಪಮ
ಮಹಿಮೆಗಳ ಕೇಳುತ ಆನಂದವಾದರೆ ಸಾಕು ೨

ಮೋದತೀರ್ಥರೆ ಸದ್ಗುರು ಭೇದ ಜ್ಞಾನವೆ ಗತಿಪ್ರದ
ವೇದ ಸಚ್ಛಾಸ್ತ್ರಂಗಳೆ ಸತ್ಯ ತಿಳಿದು
ಆದಿ ವಿಜಯ ರಾಮಚಂದ್ರವಿಠಲನೆ ಅಗಾಧಮಹಿಮ
ಮಮ ಪ್ರೀಯನೆಂಬ ಭಕ್ತಿ ಇತ್ತರೆ ಸಾಕೊ ೩

## ೧೬

ಮಧ್ವರಾಯರಿಗೆ ನಮೋ ನಮೋ ಪ

ಮಾಯವಾದಿಗಳ ಮತವ ಸೋಲಿಸಿ
ಸುಯತಿಗಳಿಗೆ ಸದ್ಗತಿ ಮಾರ್ಗವ ತೋರಿದ ಅ.ಪ

ದೈತ್ಯ ರಾವಣಗೆ ಹಲವು ಭೀತಿ ತೋರಿಸಿ
ಮಾತೆ ಜಾನಕಿಯಿಂದ ಖ್ಯಾತಿ ಪಡೆದ ಗುರು ೧

ಮಂದ ಜರಾಸಂಧನಂಗವ ಸೀಳಿ
ತಂದ ಕಪ್ಪವನ್ನು ಬಂದು ಧರ್ಮಗಿತ್ತ ೨

ಕುಜನಾದಿಗಳ ನಿಜವಚನದಿ ಸೋಲಿಸಿ
ವಿಜಯ ರಾಮಚಂದ್ರವಿಠಲ ಸರ್ವೋತ್ತಮನೆನಸಿದ ೩

## ೧೭

**ಮಟ್ಟತಾಳ**

ಮರುದಂಶ ಭಾರತೀಶ ತ್ರಾಹಿ
ಉರಗ ಗರುಡಾದಿ ಪೂಜ್ಯ ಚರಣ ಭಾಸಾ
ಧೂರಿಕೃತ ಭಯಾಜ್ಞಾನ ಲೇಶ
ಪರಮೋತ್ತಮ ಜ್ಞಾನ ವಿಲಾಸ
ಸರಸಿಜಾಂಡಾಂತ ಬಹಿರ್ವಾಸ
ಹರಿ ಪೂಜಾದಿ ಗುಣಭರಿತ ಪ್ರಾಣೇಶ ೧

**ತಾಳ**

ಅಂಜನಿಗರ್ಭ ಸುಧಾಂಬುಧಿ ಸಂಜಾತ
ಮಂಜುಳ ಭಾಷಣ ಕಂಜನೇತ್ರ ಶ್ರೀರಾಮದೂತ

ವಜ್ರಮುಷ್ಟಿ ಪ್ರಹಾರೇಣ ಹತ ರಾಕ್ಷಸ
ರಾಜಿತ ಕರಧೃತ ಸಂಜೀವ ಪರ್ವತ
ಉಜ್ಜೀವಿತ ಕಪಿನುತ ಪುಂಗವ
ಭರ್ಜಿತ ರಾವಣ ಮದ ಗರ್ವ ಹೇ ಹನುಮನ್ ೨

**ತ್ರಿಶ್ರಗತಿ ತಾಳ**

ಇಂದು ಮೌಳಿ ಪಾದದ್ವಂದಾರಾಧಕ ಜರಾ –
ಸಂಧಾದಿ ಸುರ ವೈರ ವರ್ಗ ಮಾತಂಗ ವೈರಿ
ಇಂದುಮುಖಿ ಯುಗ್ಮಭೈಷ್ಮೀಸತ್ಯ
ಸ್ಕಂದ ನಿಹಿತ ಬಾಹುಜಿತ ಕಂದರ್ಪ ಶೃಂಗಾರ ಗುಣ
ಸಿಂಧು ಶ್ರೀ ಕೃಷ್ಣದಾಸ ಭೀಮ ೩

**ಝುಂಪೆತಾಳ**

ಧರ್ಮರತ ಮೌನಿಜ ನಿರ್ಮಮಾದಿ ಗುಣಪೂರ್ಣ
ದುರ್ಮತಿ ವಾದಿ ವಾಗ್ಯುದ್ಧ ಕೋಲಾಹಲ ಅ–
ಧರ್ಮ ರಚಿತ ದುಶ್ಶಾಸ್ತ್ರ
ನಿರ್ಮೂಲೀಕೃತ ಯತಿರಾಜ
ಭರ್ಮವರ್ಣ ವಿಜಯ
ರಾಮಚಂದ್ರವಿಠಲ ಭಕ್ತ ಆನಂದಮುನೇ ೪

## ೧೮

ರುದ್ರ ಮಹದೇವ ವೀರಭದ್ರ
ಭದ್ರ ಮಾರ್ಗೋಪದೇಶಿ ಅದ್ರಿಕುವರಿ ವಲ್ಲಭ ಪ

ಕ್ಷುದ್ರ ಖಳರ ಉಪದ್ರವ ಪರಿಹರಿಸಿ
ಉದ್ರೇಕ ಮಾಡು ಸುಜ್ಞಾನ ಭಕ್ತಿ ವೈರಾಗ್ಯವ
ಕದ್ರುಜಧಾರಿ ರೌದ್ರ ಮೂರುತಿಯೆ ಅ.ಪ

ಪೊಂದಿಸು ಹರಿಭಕ್ತರ ಸಂದಣಿ । ತ್ರಿಶೂಲಪಾಣಿ
ವಂದಿಪೆನು ಸುರಾಗ್ರಣಿ
ಬಂದಿಹ ವ್ಯಾಧಿಯ ಕಳೆಯೊ
ಕಂದರ್ಪಹರ ಕರುಣಾಕರ ಶಿವನೆ ೧

ಶಿತಕಂಠ ಭಸಿತ ಭೂಷಿತ । ದಾತ ಸಂಭೂತ
ಭೂತಗಣಾಧೀಶ ವಿಖ್ಯಾತ
ವಾತನೊಡೆಯನ ಗುಣ ಸಂಪ್ರೀತಿಯಲಿ ಪೊಗಳುವಂತೆ
ಆತುರಮನ ನೀಡೊ ಯಾತರವನಲ್ಲವೊ ೨

ನಿಟಿಲಾಕ್ಷಾಂಧಕಾಸುರ ಸಂಹಾರಿ । ಜಟಮಕುಟಧಾರಿ
ಸ್ಫಟಿಕ ಹಾರಾಲಂಕಾರಿ
ವಟು ವಿಜಯ ರಾಮಚಂದ್ರವಿಠಲನ ಸಂ
ಪುಟದೊಳು ನಟಿಪಂತೆ ಪಟುತರ ಮಾಡೋ ೩

## ೧೯

ಮಂಗಳಂ ಮಂಗಳಂ ತುಲಸಿದೇವಿಗೆ ಪ

ಮಂಗಳಂ ರಂಗನ ಅರ್ಧಾಂಗಿಗೆ
ಮಂಗಳ ಮಾಧವ ಪ್ರಿಯಳಿಗೆ
ಮಂಗಳ ಭಕ್ತರ ಸಲಹುವ ತಾಯಿಗೆ
ಮಂಗಳ ಮಹಿಷಾಸುರಮರ್ದಿನಿಗೆ ೧

ಮಂಗಳ ಮಂದಾರ ವನವಾಸಿಗೆ
ಮಂಗಳ ಶರಧಿ ಉದ್ಭವಳಿಗೆ
ಮಂಗಳ ರಾಮದಾಸಗಭಯವಿತ್ತವಳಿಗೆ
ಮಂಗಳ ಸಂಜೆಯೊಳ್ ಪೂಜೆಗೊಂಬುವಳಿಗೆ ೨

ಮಂಗಳ ನಾರದನುತ ಅಂಬೆಗೆ
ಮಂಗಳ ಸೇವಿತ ಸುರ ಸಮುದಾಯಗಳಿಗೆ
ಮಂಗಳ ಮನೋಭೀಷ್ಟದಾಯಕಳಿಗೆ
ಮಂಗಳ ಹರಿದ್ರಾ ಕುಂಕುಮನಿಡುವಳಿಗೆ ೩

ಮಂಗಳ ಕೃಷ್ಣನ ಅಂತಸ್ಥಿತಳಿಗೆ
ಮಂಗಳ ಜಗನ್ಮೋಹನ ದೇವಿಗೆ
ಮಂಗಳ ಹಾಟಕ ಸಮಕಾಂತ್ಯಾವಳಿಗೆ
ಮಂಗಳ ಬೃಂದಾವನ ದೇವಿಗೆ ೪

ಮಂಗಳ ಕಮಲ ಲೋಚನದೇವಿಗೆ
ಮಂಗಳ ಪೀತಾಂಬರಧಾರಿ ಸುಂದರಿಗೆ
ಮಂಗಳ ಸರ್ವಾಭರಣ ಭೂಷಿತಳಿಗೆ
ಮಂಗಳ ವಿಜಯ ರಾಮಚಂದ್ರವಿಠಲನ ರಾಣಿಗೆ ೫

## ೨೦

ಬಿಡನೆ ಬಿಡನೆ ನಿನ್ನ ಕೂಡ ವಾಸ
ಮೃಡನ ಜಟಾಂತರವಾಸಿ ನಾಮಕಳೆ ಪ

ನಿರುತ ಹರಿ ಗುರು ಕರುಣಾ ಪಾತ್ರೆ
ಪರಮ ಪುರುಷ ದೂಷಿ ನಿಚಯ ವೀತಿ ಹೋತ್ರೆ ೧

ದುರಿತ ಮಾರ್ಗಚರಿತ ಜನ ಹೃತ್‌ಶೂಲೆ
ಪರಿಹತ ಮದನ ಶರಜಾಲೆ ೨

ನಿವಾರಿತ ಮಮತಾ ಪಾಶ ವಾರಂ ವಾರೆ
ಹರಿಕಥಾಶ್ರವಣ ದಳಿತ ಅಶ್ರುಧಾರೆ ೩

ವರಸತ್ಕಲಾಪ ಮಂದಾಯು ಹರಣೆ
ಪರಿಪರಿ ಸುಕ್ಷೇತ್ರ ಚರಿತ ಚರಣೆ ೪

ಗುರುದತ್ತಾಶ್ರೀತ ವರಸುಪಥೆ
ಹರಿಸ್ಮರಣಾವಿನಾ ನ ಜೀವಿತ ಶಪಥೆ ೫

ಪರಿಕರಾ ಪರಿತದಾಕಾರ ವೀಕ್ಷಿತ ನೇತ್ರೆ
ಸರಿತಶ್ವಾಸ ಸಾವೃತ ಪರಿಮಳಗಾತ್ರೆ ೬

ಲಜ್ಜೋದಧಿ ನಕ್ಷೇಪಿತ ಗಜಗಮನೆ
ಅರ್ಜಿತಾಂಗಾರ ವಿಲಸಿತ ಶೃಂಗಾರ ವದನೆ ೭

ರುಜು ಜ್ಞಾನಭಕ್ತಿ ವಿಧಾರಣ ಶಕ್ತೆ
ವಿಜಯ ರಾಮಚಂದ್ರವಿಠಲ ಪದ ಸೇವಾಸಕ್ತೆ ೮

## ೨೧

ಸ್ಮರಿಸಿ ಸೇವಿಸಿ ವೆಂಕಟರಾಯದಾಸರ ಪ

ದುರಿತ ಹರಿಸಿ ಪೊರೆವ ನಮ್ಮ ಪ್ರತಿ ವಾಸರ ಅ.ಪ

ನೆನೆದ ಮಾತ್ರಕೆ ನಮ್ಮ ಪರಮ ಗುರುಗಳ
ಮನದಿ ಅನುದಿನ ಪುಷ್ಟಿ ಕರೆವ ವರಗಳ ೧

ಧ್ಯಾನಮಾಡಲು ಸುಜ್ಞಾನ ಪಾಲಿಸಿ
ತಾನೆ ಒಲಿವನು ಕರುಣಿ ಇದನೆ ಲಾಲಿಸಿ ೨

ಕುಂಭಕೋಣದಿ ವಾಸವನ್ನೆ ಮಾಡುತ
ಡಂಭ ವೇಷವ ತ್ಯಜಿಸಿ ಹರಿಯ ಪಾಡುತ ೩

ಕ್ಷೇತ್ರ ಕ್ಷೇತ್ರವ ಚರಿಸಿ ಬರುತ ಅಲ್ಲಿಹ
ಆರ್ತ ಜನರನು ನೋಡಿ ಪೊರೆವ ಅನುದಿನ ೪

ಸುಲಭ ಶ್ರೀಗುರು ವಿಜಯರಾಮಚಂದಿರವಿ
ಠಲ ಒಲಿವನು ಭವಾಟವಿಯ ತರಿವನು ೫

## ೨೨

ಇಷ್ಟವಿಲ್ಲದ ಕಾರ್ಯ ಕಟ್ಟುಣಿಸುವುದು
ಕಟ್ಟಳೆ ನಿನ್ನದೆಂತೊ ಪ.

ನಷ್ಟಗೈಸುವುದಿನ್ನು ಕಷ್ಟಪಡಿಸಲಿಬ್ಯಾಡ
ಇಷ್ಟ ಕೃಷ್ಣಾರ್ಯನೆ ಅ.ಪ

ಪುಟ್ಟಿದಾ ಮೊದಲಾಗಿ ನಷ್ಟತನವನೆ ಹೊಂದಿ
ದುಷ್ಟರೊಳು ಶ್ರೇಷ್ಠನಾದೆ
ಎಷ್ಟುದಿನ ಇದರಂತೆ ಇಟ್ಟಿರುವೆಯೊ ಗುರುವೆ
ಇಷ್ಟೇವೆ ಎನ್ನ ಯೋಗ್ಯತೆಯು ೧

ಪಾಪಿ ವಿಷಯ ಜ್ವಾಲೆಯು ಕುಪಿತದಿಂದೆನ್ನ
ತಪಿಸಿ ಬೇಯಿಸುತಿದೆ
ಕೃಪೆಯೆಂಬ ಮಳೆಗರೆದು ಉಪಶಮನವನೆ ಮಾಡು
ಆಪದ್ಬಾಂಧವನಲ್ಲವೇ ಗುರುವೆ ೨

ಪಾಪಕಾರ್ಯರತನ ಪಾಪಿ ಎಂದೆನಿಸದೆ । ಜನರಿಂದ
ತಪಸಿ ಎಂದೆನಿಸುವುದ್ಯಾತಕೆ
ಭೂಪ ವಿಜಯ ರಾಮಚಂದ್ರವಿಠಲನ
ಆ ಪಾದ ಪದುಮವ ನಂಬಿಹ ಗುರುವೆ ೩

## ೨೩

### ಸುಳಾದಿ

### ಧ್ರುವತಾಳ

ಗುರುಭಕ್ತಿ ಮಾಡು ಮನವೆ
ವೈಷಮ್ಯ ವೈಕಲ್ಯ ಬಿಟ್ಟು ನಿಚ್ಚಳದಿ
ನೀನಾಗುವಿ ದಾಸಶ್ರೇಷ್ಠ ಧರಣಿಯೊಳು
ನಿನಗೆ ನೀನೇವೆ ತಿಳಿಗುರು ಮಹಿಮೆಯನು ಗುಪಿತದೊಳು
ಗುಣವಂತನ ಮಾಡಿ
ಗುಣಪರಿಪೂರ್ಣ ವಿಜಯ ರಾಮಚಂದ್ರವಿಠಲನ್ನ
ಗುರುತಾಗಿ ತೋರುವುದು ೧

### ತಾಳ

ಆದಿಯಲಿ ಗುರು ಕರುಣವನು ಪಡೆಯಬೇಕು
ಪದಸ್ಥ ಸುರರ ಕೂಡಿ ಪಾಪ ಕಳೆಯಬೇಕು
ಪರಮಾದರದಿ ಗುರುಪಾದ ಚಿಂತಿಸೆ
ಗುರು ವಿಜಯ ರಾಮಚಂದ್ರವಿಠಲ
ಗುರು ಲಘು ಪದಾರ್ಥದಲ್ಲಿ ಗೋಚರಿಸುವ ೨

### ತಾಳ

ಗುರುವೆ ಮುಖ್ಯನು ಕಾಣೊ ವೃತ್ತಿ ಜ್ಞಾನದ
ಗೋಳಾಟ ಕಳೆದು
ಗುರುಭಜನೆಯ ದೃಢ ಭಕುತಿಲಿ ಮಾಡೆ ಮಾಮನೋ
ಹರ ನಮ್ಮ ವಿಜಯ ರಾಮಚಂದ್ರವಿಠಲ ಗುರು
ಅಂತರ್ಗತನಾಗಿ ಅಜ್ಞಾನವ ಕಳೆವ ೩

## ತಾಳ

ಗುರುಸ್ಮರಣೆ ಸರ್ವತೆರದಿ ಮಾಡೆ ಇತರ ಸ್ಮರಣೆ ತಪ್ಪಿಸಿ
ಹರಿಸ್ಮರಣೆಯಿತ್ತು ಹರುಷಬಡಿಸುವರು ಹಗಲಿರುಳು
ಹರಿದಾಸರ ಸಂಗವಿತ್ತು ಹಾನಿ ವೃದ್ಧಿಗಳ ಲೇಸು ಮಾಡಿಸುವರು
ಗುರುಸ್ಮರಣೆ ಮರೆತು ಗುಣವಂತ ನಾನೆಂದು ತಿಳಿದು
ಗುಣಿತವಿಲ್ಲದ ಹಲವು ಕರ್ಮಗಳು ಮಾಡಿದರೂ
ಹರಿಯ ಒಲಿಯ ಕಾಣೊ
ವಿಜಯ ರಾಮಚಂದ್ರವಿಠಲನ್ನ ಕಾಣಬೇಕಾದ ಮನುಜ ತಾ
ಗುರು ಚರಣ ದ್ವಂದ್ವಗಳ ಪಾಡಿ ಕೊಂಡಾಡಬೇಕೊ
ಸತತ ಬಿಡದೆ ೪

## ಆದಿ ತಾಳ

ಗುರುವೆ ತಾರಕನೆಂದು ತಿಳಿದು ನಲಿನಲಿದು ಪಾಡೆ ಸಂ
ಸಾರದ ಘೋರಾಟನದಿಂದ ಗೋಳಾಡಿಸದೆ
ಪಾರಗೈಸಿ ಪಂಚಬೇಧ ತಾರತಮ್ಯ ಜ್ಞಾನವರುಪಿ
ಗುರು ಪವಮಾನ ಮತವೆ ಸಿದ್ಧವೆಂದು ತಿಳಿಸಿ ।
ಸಂಶಯಗಳ ಬಿಡಿಸಿ ಸಂ
ಸಾರವೆಂಬ ಘೋರಾರಣ್ಯದಿಂದ ತಳಮಳ ಬಡಿಸದೆ
ಪಾರಗೈಸುವರು ಸರಸದಿಂದಲಿ
ಗುರು ಪವಮಾನನೊಡೆಯನೆಂದು ವಿಜಯ ರಾಮ –
ಚಂದ್ರವಿಠಲನ ಉಪಾಸನೆಗೈಯುವ
ಮಾರ್ಗವ ಮಮತೆಯಿಂದಲಿ ಪೇಳಿ ಉ–
ದ್ಧಾರ ಮಾಡುವರು ನಮ್ಮ ಗುರುರಾಯರು ೫

## ೨೪

ರಮಾನುತ ಪಾದಪಲ್ಲವ ಶ್ರೀಕರ ಚರಣ
ಸೇವಕರ ಸಂಗದೊಳಿರಿಸು ವಿಜಯರಾಯ ಪ

ನಿಮ್ಹೊರತು ಪೊರೆವರನ್ಯರನು ನಾಕಾಣೆ
ನಿಮ್ಮ ಚರಣವ ನಂಬಿದೆ ಕರುಣದಿ ಕಾಯೊ ಅ.ಪ

ಪಂಡಿತ ಪಾಮರರನು ಉದ್ಧಾರ
ಮಾಡೆ ಕರುಣದಿಂದ ಸಕಲ ವೇದಗಳ
ಕ್ರೋಢೀಕೃತವಾದ ನಿರ್ಣಯ ಭಾಷ್ಯಗಳರ್ಥವ
ಮಾಡಿದಿ ಪದಗಳ ಸಕಲರೂ ತಿಳಿವಂದದಿ ೧

ನಿನ್ನವರಾದ ರಂಗ ಒಲಿದ ರಾಯರ ನೋಡು
ನಿನ್ನ ಉಕ್ತಿಯ ನಂಬಿದ ವೆಂಕಟರಾಯರ ನೋಡು
ನಿನ್ನವನೆಂದೆನ್ನನು ಅವರಂತೆ ನೋಡದೆ
ಎನ್ನ ಕೈ ಸಡಿಲ ಬಿಡುವದೇನೋ ೨

ಎಂದಿಗಾದರು ನಿನ್ನ ದಾಸರ ಕರುಣದಿಂದ
ಪಾದದ್ವಂದ್ವ ಹೊಂದದೆ ಹೋಗುವೆನೆ ದಾಸರಪ್ರಿಯನೆ
ತಂದೆ ವಿಜಯ ರಾಮಚಂದ್ರವಿಠಲರಾಯನ
ಹೊಂದುವ ಮಾರ್ಗವ ಬಂದು ತೋರಿಸಬೇಕೊ ೩

## ೨೫

ಇದನಾ ಬೇಡಿದವನಲ್ಲಾ
ಬುಧರಂತರ್ಯಾಮಿ ಲಕುಮಿನಲ್ಲ ಪ

ಪಾಪ ಕಾರ್ಯದ ಪಾಪ ವ್ಯಾಪಿಸಿ ದೇಹದಿ
ಲೋಪಗೈಸೋದು ಸತ್ಕರ್ಮ

ದೀಪ ನೀನಾಗಿರೆ ಉಪದೇಶಿಸೀ ಭವ
ಕೂಪದಿಂದೆತ್ತೆಂದು ಬೇಡಿದೆನಲ್ಲದೆ ೧

ವಿಷಯದೊಳ್ ಸಂಚರಿಪ ದೋಷಕಾರಿ ಮನ
ಆಶೆಯೊಳು ಪೊಕ್ಕು
ನಾಶಗೈಪೋದೆನ್ನ ವಿಶೇಷ ಸಾಧನಗಳ ನೀ
ಪೋಷಿಸು ಎಂದು ಬೇಡಿದೆನಲ್ಲದೇ ೨

ಸುಧೆ ತಂದ ವಿಜಯ ರಾಮಚಂದ್ರವಿಠಲ ನಿನ
ಗೆದುರ್ಯಾರೊ ಪೇಳುವರು
ಮುದದಿಂದ ಕೃಷ್ಣಾರ್ಯರೊಳು ಬೇಡಿದೆನಲ್ಲದೇ ೩

## ೨೬

ಏನು ಕಾರಣ ಹರಿಯೆ ಅನುಮಾನಿಸಿದಿ ದೊರೆಯೆ
ಘನವಲ್ಲ ನಿನಗಿದು ತೆರೆದ ಬೀಗ ಜೋಡಿಸುವುದು ಪ

ವದನದಿಂದಲಿ ನಿನ್ನ ಮಹಿಮೆ ಪೊಗಳಲರಿಯದೆ
ಸದನದಿ ಅನ್ಯರ ಪಾಡುತ್ತಿದ್ದೆನೇನೋ ೧

ಪಾಡದಿದ್ದರೆ ನಾನೊಬ್ಬ ನೋಡಿ ಬಂದದ್ದೇನೊ ನಿನಗೆ
ಬೇಡಿಕೊಂಬೆನೊ ಬಾಯ ಬೀಗ ತೆಗೆಸೊ ಹರಿಯೆ ೨

ವೇದ ಪೊಗಳಲರಿಯದ ವಿಜಯ ರಾಮಚಂದ್ರವಿಠಲನ್ನ
ಹಾದಿ ತೋರಿಸೆಂದು ನಾ ಸ್ತುತಿಪೆನೊ
ಮೋದಮಯ ದೇವ ೩

## ೨೭

ಏನು ಮಾಡಿದರೆ ನಿನ್ನ ಕಾಣುವ್ಹೋ ಸನ್ಮಾರ್ಗ ದೊರೆವುದೊ
ಮಾನನಿಧಿ ಶ್ರೀ ವೇಣುಗೋಪಾಲ ಇನ್ನಾದರು ತೋರಿಸೊ ಪ

ಉರಗನ ಪಿಡಿಯಲೇ ಹರಿಯ ಪೂಜಿಸಿದ ಕರಗಳಿಂದಲಿ ಶ್ರೀ
ಹರಿ ನಿನ್ನ ಕರೆದು ಕೊಂಡಾಡದ ದುರುಳ ಜಿಹ್ವೆಯ ಕೊಯ್ಯಲೆ ೧

ವರ ತೀರ್ಥಕ್ಷೇತ್ರಕೆ ಹೊರಡದ ಕಾಲ್ಗಳ ಉರಿವ್ಹೊ
ಜ್ವಾಲೆಯೊಳಿಡಲೆ
ಹರಿಕಥೆ ಕೇಳದಾ ಎರಡು ಕರ್ಣಗಳಿಗೆ ಮಿರಿ
ಮೀರಿ ಕೆಂಡ ತುಂಬಲೆ ೨

ನಿನ್ನ ನೋಡದ ನಯನಕ್ಕೆ ಮಣ್ಣನೆ ತುಂಬಲೆ
ನರಸಿಂಗನ ಸ್ಮರಿಸದ
ಮನವನು ಏನು ಮಾಡಲೊ ವಿಜಯ ರಾಮಚಂದ್ರವಿಠಲ ೩

## ೨೮

ಸುಮ್ಮನೆ ಹರಿದಾಸರೆಂಬಿರೆ ಎಮ್ಮನೆಲ್ಲಾ ಪ

ಹಮ್ಮಿನ ಅರಿಷಡ್ವರ್ಗ ಬಿಡದೆ ಅಧರ್ಮರ ಸೇವೆ ಮಾಡಿ
ಘಮ್ಮನೆ ಕಾಲ ಕಳೆವ ಪಾಮರ ಮನುಜನ ಅ.ಪ

ಹರಿದಿನದುಪವಾಸ ಮರುದಿನ ಪಾರಣೆ
ಸರಿಯಾಗಿ ಮಾಡಿದೆನೆ
ಕೊರಳಲ್ಲಿ ತುಳಸೀ ಸರಗಳ ಧರಿಸಿ
ಹರಿಗೆ ಮೈಮರೆದಾನೊಂದಿಸಿದೆನೆ ೧

ಪಾತ್ರರ ಕೂಡ ಯಾತ್ರೆ ಮಾಡಿ ಪುಣ್ಯ
ಕ್ಷೇತ್ರಗಳ ಬಳಸಿ
ಕ್ಷೇತ್ರಜ್ಞನಾ ಪಾದ ನೇತ್ರದಿಂದ ನೋಡಿ
ಕೃತಾರ್ಥ ನಾನಾದೆನೆ ೨

ವರ ನಾರೇರ ಕಂಡು ನರಕ ಭಯವಿಲ್ಲದೆ
ಕರೆದು ಮನ್ನಿಸುವ
ವರ ಗಾಯಿತ್ರಿ ಮೊದಲಾದ ಪರಿಪರಿ ಮಂತ್ರಗಳು
ನಿರುತ ನಾ ಜಪಿಸುವೆನೆ ೩

ಕಾಲಿಗೆ ಗೆಜ್ಜೆಕಟ್ಟಿ ಶಿರಿಲೋಲನ ಮುಂದೆ
ಲಲಿತದಿಂ ಕುಣಿಯುವೆನೆ
ತಾಳ ಮ್ಯಾಳಾದಿಂದ ನೀಲಮೇಘಶ್ಯಾಮನ
ಬಾಲಲೀಲೆ ಪಾಡಿ ಲೋಲನಾಗುವೆನೆ ೪

ಕಂದರ್ಪ ಪಿತನಾದ ವಿಜಯ ರಾಮ
ಚಂದ್ರವಿಠಲನ್ನ ಮಂದಹಾಸ ಮುಖವನ್ನು
ಒಂದಿನವಾದರು ನೋಡ್ಯಾನಂದಪಟ್ಟು
ಮಂದ ಜ್ಞಾನ ತೊರೆದನೆ ೫

## ೨೯

ಹ್ಯಾಗೆ ಸದ್ಗತಿ ಆಗುವುದೆನಗೆ
ಯೋಗಿಗಳ ಒಡೆಯ ಹರಿಯೆ
ಈಗಾಗಲೆ ತಿಳಿಸಿ ಸಾಗುವಂತೆ ಸಾಧನ
ಬ್ಯಾಗ ಮಾಡಿಕೊ ನಾಗತಲ್ಪನೆ ಪ

ಮೇಲಧಿಕಾರಿಯು ಕೊಂಡಾಡಲು
ಕುಲ ಉದ್ಧಾರವೆಂದು ಹಿಗ್ಗುವೆ

ಮಲಗದಿಕ ಕಲುಷ ಕಂಡಾಗಲು
ಅಳುತ ಧರೆಗೆ ಇಳಿವೆನೊ ನಾನು ೧

ಶಿಕ್ಷ ರಕ್ಷ ಸಧ್ಯಕ್ಷ ಲಕ್ಷ್ಮೀಪತಿಯೆಂದರಿಯದೆ
ಕುಕ್ಷಿ ಭರಣಕೆ ಯೋಚಿಸುವೆ
ಪಕ್ಷಿವಾಹನನಲ್ಲಿ ಲಕ್ಷ್ಯವಿಲ್ಲದೆ ಬಕ
ಪಕ್ಷಿಯಂತೆ ಧೇನಿಸುವೆ ನಾ ೨

ನಷ್ಟ ದೇಹ ಪುಷ್ಟಿಗಾಗಿ ದುಷ್ಟರಿಗೆ ಎನ್ನ
ಕಷ್ಟ ಪೇಳಲು
ದೃಷ್ಟಿಸಿ ನೋಡಿದರೆ ಬೆಟ್ಟ ಮೇಲಿದ್ದಂತೆ ಕಂ
ಗೆಟ್ಟು ಮೊರೆಯಿಸುವೆ ೩

ಒಂದು ಲಾಭವಿಲ್ಲದೆ ಮಂದಿ ನೆರಹಿ
ಸಂದಿಗೊಂದ್ಹರಿದ್ಯಾಡಿ
ಸಂದು ಹೋಯಿತು ಹೊತ್ತಯೆಂದು ಆಸ್ಥಾನಕೆ
ಮಿಂದು ಬ್ಯಾಗನ್ನ ತಿಂದೋಡುವೆನೊ ೪

ಮಾನನೀರ ಚೆಲ್ವಿಕೆಗೆ ಮನಸೋತು
ನೆನೆನೆನೆದು ಬೆಂಡಾಗುವೆ
ಹೀನರಾ ಕೂಡಿಕೊಂಡು ದೀನರಾ ಬಾಯಿಬಡಿದು
ಧನ ಸಾಧಿಸಿದ್ದು ಕೊನೆಗೆ ಸಾಯುವ ನರಗೆ ೫

ಉದಯದಲೆದ್ದು ನದಿಗೆ ಪೋಗಿ ನಾ
ಮುದದಿಂದ ಮಿಂದು
ಉದಯಾರ್ಕಗರ್ಘ್ಯ ಒದಗೀಸಿ ಕೊಡದ
ಮದಡನಾಗಿದ್ದವಗೆ ೬

ವರ ಸುದರ್ಶನ ಗ್ರಂಥಗಳ ಗುರುಗಳಲ್ಲಿ
ನಿರುತ ಪಠಿಸಲಿಲ್ಲ

ಭಾರತ ಭಾಗವತ ಪುರಾಣಗಳು
ಪರಮ ಭಕ್ತೀಲಿ ಕೇಳಲಿಲ್ಲ ೭

ಭಾವ ಶುದ್ಧಿಯಿಂದ ದೇವತಾರ್ಚನೆ
ಆವ ಕಾಲಕು ಮಾಡಲಿಲ್ಲ
ಪವನಸಖ ಮುಖದೊಳಾಹುತಿನಿತ್ತು
ಕವಿಗಳಿಗನ್ನ ಕೊಟ್ಟವನಲ್ಲ ೮

ಧ್ಯಾನ ಮಾಡುವುದನ್ನು ಮೌನಿಗಳ ಕೇಳಿ
ಮನನ ಮಾಡಲಿಲ್ಲ
ಸನಕಾದಿ ವಂದ್ಯ ವಿಜಯ ರಾಮಚಂದ್ರವಿಠಲ ನಿನ್ನ ಪಾದ
ಕನಸಿನಲಾದರೂ ಒಮ್ಮೆ ನೋಡಲಿಲ್ಲ ೯

## ೩೦

ಕವನ ಪೇಳು ನೀ ಮನವೆ
ಆವಾವ ನೆವದಿದಾದ್ದು ಘನವೆ ಪ

ಭುವನ ಪಾವನ ಲಕ್ಷ್ಮೀ –
ಧವನ ನವಗುಣ ರೂಪ ಕ್ರಿಯವನ್ನೆ ಅ.ಪ

ಸ್ತವನ ಮಾಡಬೇಡ ನೃಪನನ್ನು
ನವ ಯುವತೇರ ಮೆಚ್ಚಬೇಡ
ಪವನ ಭವ ಮತ ಬಿಡಬ್ಯಾಡ
ಭವದೊಳು ಮಮತೆ ಕೊಡಬ್ಯಾಡೆ ೧

ಹರಿಕಥಾ ಶ್ರವಣ ಬಿಡಬ್ಯಾಡ
ಹರಿದಾಸರೊಳು ಛಲ ಇಡಬ್ಯಾಡ
ದುರುಳ ಮಾಯವಾದಿರ ಸ್ನೇಹ
ಅರಿತು ಮಾಡಲು ಅದು ಮಹಾಮೋಹ ೨

ಅಜನಪಿತನ ಸ್ಮರಣೆ ಮರಿಬ್ಯಾಡ
ರುಜುಮಾರ್ಗವ ಬಿಟ್ಟು ನಡಿಬ್ಯಾಡ
ವಿಜಯ ರಾಮಚಂದ್ರವಿಠಲನ ಮರೆದು
ಗೋಜು ಕರ್ಮವ ಮಾಡಲಲ್ಲೇನು ಮಾತು ೩

## ೩೧

ನೆನಸದಿರು ಎಲೆ ಮನವೆ ಅನುದಿನ
ವಿಷಯ ಸುಖವು ಎಂದು
ಕನಸಿಲಾದರು ಸ್ಮರಿಸಲಾಗದು ಮನವೆ ಪ

ಘನ ಸಂತೋಷವಿಲ್ಲವಿದು ನಿತ್ಯಾನಿತ್ಯ ಸುಖ ಬಯಸಿ
ಮನದಲ್ಲಿ ನೀ ಸ್ಮರಿಸೆ ಹರಿಯೆ । ತೊರೆಯ ಅ.ಪ

ಅಶನ ವಸನ ಪಶುವ್ರಾತ ವಶವಿರುವಾಭರಣ
ಹಸನಾದ ರಥ ಪದಾತಿಗಳು
ಸ್ವಸ್ವರೂಪವಲ್ಲ ಭಿನ್ನ ತಿಳಿಯೊ । ಮಮತೆ ಅಳಿಯೊ ೧

ಬುದ್ಧಿ ವಿದ್ಯಾಕುಶಲ ಗತಿ ಅಧ್ವರ್ಯ ಪ್ರಭು ಮನ್ನಣೆ
ಶುದ್ಧ ರೂಪ ಲಾವಣ್ಯ ಯೌವನ
ತಿದ್ದಿದ ಮತಿಯೆ ಸಿರಿ ಶೌರ್ಯ ಪರಾಕ್ರಮ
ವದ್ಯವಾಗಿ ಪೋಪುದು ಸ್ಥಿರವಲ್ಲ । ಸುಳ್ಳಲ್ಲ ೨

ಇಚ್ಛೆಯಿಲ್ಲದೆ ನೀನು ಜನರ ಮೆಚ್ಚಿಗಾಗಿ ಮಾಡಿದ ದಾನ
ವೆಚ್ಚವಾಗಿ ಪೋಪವೊ ಧನವಲ್ಲದೆ
ನಿಚ್ಚಳ ಪುಣ್ಯಬಾರದು ಮನವೆ ಹೆಚ್ಚಿನ ಸ್ತೋತ್ರಕೆ ಮರುಳಾಗಿ
ನೆಚ್ಚದಿರು ವಿಹಿತೋಕ್ತಿಯ । ಬಿಡದಿರು ಸನ್ಮತಿಯ ೩

ಆರ್ತನಾಗದಲೆ ನೀನು ಕೀರ್ತಿಗೋಸುಗ ಕಥಾಶ್ರವಣ
ಕರ್ತಭಾವದಿ ಸತತ ಮಾಡೆ
ವರ್ತಿಸುವ ಪುಣ್ಯಪ್ರಾಪ್ತಿ ವೈಷಿಕ ಸುಖವಲ್ಲದೆ
ಶಾಸ್ತ್ರಮರ್ಮ ತಿಳಿಯದೊ । ಅಹಂ ಮಮವಳಿಯದೊ ೪

ಮಾನಿತನು ನಾನೆಂದು ನಾನಾ ಮತವಾಶ್ರಯಿಸಿ
ಜ್ಞಾನಿಗಳಿಗೆ ಶಿರಬಾಗಲೊಲ್ಲಿ
ಏನು ಇದರಿಂದೆಂಬ ತ್ರಿಕರಣ ಶುದ್ಧಿಕಾರಣ
ದ್ಯುನದಿ ಸ್ನಾನವಾಹವಲ್ಲಾ । ಇದು ಬಿಡಸಲ್ಲಾ ೫

ಜ್ಞಾನ ಭಕ್ತಿ ವೈರಾಗ್ಯವನು ಅನುವಾಗಿ
ಕೈಗೊಳುವುದೇ ಮಾನ
ಅನ್ಯಾಧೀನವೆನ್ನದೆಂಬುದೇ ಲಜ್ಜಾ
ಅನುಭವ ಜ್ಞಾನಿಗಳ ಸಹವಾಸ ಸ್ನಾನ ಸಚ್ಛಾಸ್ತ್ರಾಲಾಪ
ನಾನು ನನ್ನದು ಬಿಡುವುದೇ ತ್ಯಾಗ । ಇದೇ ಯೋಗ ೬

ಕರಣ ವಿಷಯಗಳಲ್ಲಿ ಹರಿಯ ಚಿಂತಿಸುತ ನಿತ್ಯ
ವರ ಯೋಗ ಭೋಗದಲ್ಲಿ
ವರ ರಾಮಚಂದ್ರವಿಠಲರಾಯನು ನಿನ್ನ
ದುರಿತ ಕಳೆದು ಪಾಲಿಸುವ ೭

## ೩೨

ಬೆದರದಿರು ಚಿನ್ನಾ ನೀ ಬೆದರದಿರು ಪ

ಸದಯ ಸುಹೃದಯದಿ ಒದಗಿ ಸಂ –
ಮ್ಮುದವನಿತ್ತು ವಿಪದವ ಕಳೆವನು ಅ.ಪ

ಆದಿಯಲಿ ಬೆದರಿಸಿ ಮನದ ಹದುಳವ ನೋಡುವ
ಪದವಿ ಪೊಗಿಪ ಸಂಪದವೀಯನಿವನು ೧

ಒಂದೆ ಮನದಿ ಗೋವಿಂದನ ಪದ ನಂಬು
ಹಿಂದಾಗುವುದು ಚಿಂತೆ ಮುಂದುಳಿಯದು ೨

ಎಂದೆಂದು ಇಂದಿರೆ ಅರಸ ವಿಜಯ ರಾಮ-
ಚಂದ್ರವಿಠಲ ನಿನ್ನ ಬೆನ್ಹಿಂದೆ ಇರುವನು ೩

## ೩೩

ಭಾವ ವೈರಾಗ್ಯದಿಂದ ಭಜಿಸು ದೇವಿ ಲಕುಮೀರಮಣನ ಪ

ಕಾವ ಕೊಲ್ಲುವ ತಾನೆ ಒಬ್ಬನೆ ಕೊನೆಗೆ ನಿಲ್ಲುವೆನೆಂದು ಅ.ಪ

ಸತಿಸುತ ವಿಯೋಗದಿಂದ ಖತಿಗೊಂಡು ಭ್ರಂಶನಾಗಿ
ಮತಿಗೇನು ತೋರದೆ ಮಿತ ವ್ಯಾಪಾರದೊಳಿರಲು ೧

ಪುರಾಣ ಕೇಳಿದಾಗ ನರಕ ಭಯವು ಮನಕೆ ತೋರಿ
ದುರಿತ ದೂರ ಕಾಯೊ ಎಂದು ದೂರ
ಬರಲು ಮರದು ಪೋಗಲು ೨

ಸಿರಿಯು ಬೇಕೆಂದು ನರರ ಪೂಜೆ ಮಾಡಿ ಧನವ ಕೂಡಿಸಿ
ಪರಮ ಗೋಪ್ಯದಿಂದ ಇಡೆ ಸರ್ವ ಸ್ವತ್ತು
ಪೋಗಲಾಗ ಹರಿಯ ನೆನೆಯೊ ೩

ತಾರೊಡಲ ಆರಿಸಲು ಪರರ ಮನೆಗೆ ಪೋಗಿ
ತಿರುಗಿ ಬೇಡಲು
ನೀರಿನ ಲಾಭವಿಲ್ಲದೆ ನರಹರಿಗೆ ಮೊರೆಯಿಡಲು ೪

ಅನುಕೂಲವೆಲ್ಲ ಇರಲು ಅನಿಮಿತ್ತದಿಂದ ಭಜಿಸು
ಅನಿಮಿಷರೊಡೆಯ ವಿಜಯ ರಾಮಚಂದ್ರವಿಠಲನ್ನ ೫

## ೩೪

ಸುತ್ತಬೇಕು ಜನ್ಮವೆತ್ತಬೇಕು ಪ

ಕತ್ತಲೆ ಸಂಸಾರದೊಳು ಹೊತ್ತು ಹೊರೆಯ
ಹೊತ್ತುಕೊಂಡು ತತ್ತರಗೊಳುತ್ತ ನಿತ್ಯ ಅ.ಪ

ಭರತಖಂಡದೊಳು ಪುಟ್ಟಿ
ಮರುತ ಮತವ ಪೊಂದಿಕೊಂಡು
ಗುರುಕೃಪೆಯನು ಪಡೆದು
ಹರಿ ಸರ್ವೋತ್ತಮನೆಂದರಿಯೋ ತನಕ ೧

ಅರಿಷಡ್ವರ್ಗವನ್ನೆ ತ್ಯಜಿಸಿ
ದುರುಳರ ಸಂಗ ಕತ್ತರಿಸಿ
ಪರಿ ಪರಿ ಕಾರ್ಯ ಕರ್ಮದೊಳು
ಹರಿಯು ತೋರುವ ತನಕ ೨

ಬಿಂಬ ವಿಜಯ ರಾಮಚಂದ್ರ –
ವಿಠಲರಾಯನು ಹೃದಯ
ಅಂಬರದೊಳಗೆ ಪೊಳೆದು
ಅಂಬವಿರಜೆಯಲಿ ಮುಳುಗೊ ತನಕ ೩

## ೩೫

ನಂಬಿದೆ ನಾನಿನ್ನ ಚರಣವನಂಬಿಗ
ಅಂಬೆಗಳ ಸುತನೆ ಕೋ ಬ್ಯಾಗಂಬಿಗ ಪ

ಇಂಬಾಗಿ ದಡ ಸೇರಿಸೆನ್ನನೇನಂಬಿಗ
ತುಂಬಿ ನದಿ ಸೂಸುತಲಿದೆ ನೋಡಂಬಿಗ ಅ.ಪ.

ಕರ್ಮವೆಂಬ ಪ್ರವಾಹವ ನೀ ನೋಡಂಬಿಗ
ಚರ್ಮದಿಂದೇಳು ಹೊದ್ದಿಕಿ ಅಂಬಿಗ
ಮರ್ಮ ಒಂಭತ್ತು ರಂಧ್ರ ಉಂಟಂಬಿಗ
ಶರ್ಮವಿದಕೆ ಕಾಯದ್ದರಿಗೋಲಂಬಿಗ 	೧

ಆಳ ಬಹಳ ಗೊತ್ತಾಗದಂಬಿಗ
ಶೆಳವು ಘನ ಉಳ್ಳುಹುದು ನೋಡಂಬಿಗ
ಸುಳಿಗಾಳಿಗೆ ಸಿಗಿಸದಿರೊ ಅಂಬಿಗ
ಬಳಸಿ ಕೊಂಡೊಯ್ಯೋದು ಒಳ್ಳೇದೆ ಅಂಬಿಗ 	೨

ಸಂಚಿತಾಪ್ತಿ ಇವರೊಳುಂಟಂಬಿಗ
ಮಿಂಚಿ ಭಾರ ಜಡಿಯೋದು ನೀ ನೋಡಂಬಿಗ
ವಂಚಕ ಮಾತು ರಾಗವು ಹೆಚ್ಚಂಬಿಗ
ಚಂಚಲಗೊಂಡು ಭ್ರಮಿಸೋದು ಕಾಣಂಬಿಗ 	೩

ಆಶಾಜಲ ಮೇಲೆ ಮೇಲೆ ಬರುವುದಂಬಿಗ
ಮೋಸ ಮಾಡುವುದೇನೊ ಕೊನೆಗೆ ಅಂಬಿಗ
ಪೊಸ ಪೊಸ ಕಾಮತೆರೆ ತುಂಬಾಯಿತಂಬಿಗ
ಲೇಶವಾದರು ಬತ್ತದು ನೋಡಂಬಿಗ 	೪

ಅಷ್ಟ ಆನೇ ಒಳಗಿಟ್ಟುಕೊಂಡಿಹುದಂಬಿಗ
ಹುಟ್ಟು ಹಾಕೋದು ಬಿಟ್ಟು ಜಲ್ಲೆ ಕೊಳ್ಳಂಬಿಗ
ಬೆಟ್ಟ ಆರಕ್ಕೆ ಸಿಕ್ಕಿಸದೆ ನೋಡಂಬಿಗ
ನೆಟ್ಟ ನಡುವಿನ ಪಥದಿ ಒಯ್ಯೋ ಅಂಬಿಗ 	೫

ಸುತ್ತ ಕಾರ್ಮುಗಿಲು ಬಂತಲ್ಲೊ ಅಂಬಿಗ
ಹತ್ತು ಹನಿಗಳು ಬಿತ್ತು ನೋಡಂಬಿಗ
ಎತ್ತಿ ನಡೆಸೋದು ಶಕ್ತಿ ನಿನ್ನದು ಕಾಣಂಬಿಗ
ಹತ್ತಿಸೊ ಭಕ್ತಿದಡಕಿನ್ನಂಬಿಗ 	೬

ಮರಕಟಿ ಸೇರಿಹದಿದರೊಳಗಂಬಿಗ
ಕರೆಕರೆಗೆ ಗುರಿ ಮಾಡೊದಿದೆ ಅಂಬಿಗ
ಸರಿಯಾಗಿ ನಡೆಸೊ ಇನ್ನಾದರಂಬಿಗ
ವರದವಿಜಯ ರಾಮಚಂದ್ರವಿಠಲ ನೀನಂಬಿಗ ೭

## ೩೬

ಪತಿ ಪೋದನೆಂದು ಶೋಕಿಸುವುದ್ಯಾಕೆ ಶ್ರೀ –
ಪತಿಯು ಇರಲಾಗಿ ಮರುಳೆ ಪ

ಪ್ರತಿ ಪ್ರತಿ ಜನ್ಮದಿ ಜತೆ ಮಾಡಿದ ಪಂಚ –
ಭೂತದ ಕಾಯ ಸತ್ಯ ಸ್ಥಿರವಲ್ಲವೇ ಮರುಳೆ ಅ.ಪ

ನೋತ ಪುಣ್ಯಾಪುಣ್ಯದ ಫಲ
ವ್ರಾತ ಸುಖ ಸುಖವಿತ್ತು ಬರಿದಾಗುವುದು
ನಿತ್ಯವಾಗಿ ಸುಖವೆ ಇರಲೆಂದು ಬೇಡಿದರೆ
ವ್ಯರ್ಥಧಾವತೆ ಅಲ್ಲದೆ ಸಾರ್ಥಕೆಲ್ಲಿ ಮರುಳೆ ೧

ಸೃಷ್ಟಿಯಲಿ ಎಲ್ಲರೂ ನಷ್ಟವಾಗುವರಲ್ಲದೆ
ಶ್ರೇಷ್ಠರಾಗಿ ಬಾಳುವರೊಬ್ಬರಿಲ್ಲ
ಎಷ್ಟು ಶೋಕಿಸಿದರು ಪೋದ ಕಾಷ್ಠ ಬರಲರಿಯದು ಎ–
ಳ್ಳಷ್ಟು ಲಾಭ ಇದರಿಂದ ಇಲ್ಲ ಮರುಳೆ ೨

ಮುಟ್ಟಿ ಕಟ್ಟಿದ ತಾಳಿಯ ಸಂಬಂಧ
ಕೊಟ್ಟ ಹರಿ ತಾ ತಟ್ಟನೆ ಒಯ್ದ ಮೇಲೆ
ದುಷ್ಟವೆನ್ನದಲೆ ಇಷ್ಟವೆಂದೆಣಿಸಲು
ಸೃಷ್ಟಿಪತಿಯು ತುಷ್ಟನಾಗುವ ಮರುಳೆ ೩

ಸರಿಯಲ್ಲಾ ಬರಿದೆ ಚಿಂತಿಸುವುದು ನಿನಗೆ
ಕರೆಕರೆಯು ಹೆಚ್ಚುವುದು ಮುಂದೆ ಬಹಳ
ಹರಿಕಥೆಯ ಕೇಳು ಹರಿದಾಸರೊಳ್ ಬೀಳು
ಹರಿಗೆ ಪೇಳು ನಿನ್ನಯ ಗೋಳು ೪

ಇನ್ನಾದರೂ ನೀನು ಹರಿಯ ಸಂಕಲ್ಪವಿದೆಂದು
ನಿನ್ನ ಮನದೊಳು ತಿಳಿದುಕೊಂಡು
ಘನ್ನ ಮಹಿಮಾ ವಿಜಯ ರಾಮಚಂದ್ರವಿಠಲನ್ನ
ಸನ್ನುತಿಸಲು ಮುನ್ನೆ ಹತಿಯಾಗುವುದು ಮರುಳೆ ೫

## ೩೭

ಬಲ್ಲನೆಂಬೊ ಮಮಕಾರ ಬಿಡು
ಎಲ್ಲೆಲ್ಲಿ ಇರುವ ಶ್ರೀಹರಿಯ ನೋಡು
ಒಲಿಸಿ ಒಲಿಸಲು ನಿಲುವುದು ಜಿತವಾಗಿ ಹಾಡು ಪ

ನೋಡಿದ್ದನ್ನೆ ನೀ ನೋಡು । ನಿನ್ನೆ
ನೋಡಿದೆನೆಂಬೊ ಖೋಡ್ಯಾಲಸ್ಯ ಬಿಡು
ಹುಡುಕಿ ತತ್ವಂಗಳ ಸಮನಾಗಿ ಜೋಡು
ನಡುವೆ ತತ್ವತಿಯ ಒಡೆಯನ ಇಡು ೧

ಕೇಳಿದ್ದನ್ನೇ ನೀ ಕೇಳು । ನಿನ್ನ
ಆಳುವರ ಪಾದಕೆ ಬೀಳು
ಹಳೆವ ವಾರ್ತೆಗೆ ಅಳುಕುವ ಮನ ಸೀಳು
ಬಲು ಪರಿಯಲಿ ಕಾಮ ಕ್ರೋಧಂಗಳ ಹೂಳು ೨

ಅಭಿವೃದ್ಧೀಗೆ ಬರುವುದು ಲೋಭ
ನಿಭಾಯಿಸಲು ಅದು ಹೊರುವುದು ಲಾಭ
ಸಭೆಯೊಳು ಪೇಳಬ್ಯಾಡ ಸ್ವಭಾವ
ಇಭವರದನಾಗುವ ಅಭಾವ ೩

ನರ ಜನ್ಮವೇ ಬರುವೊದು ಕಷ್ಟ
ಹರಿ ಸರ್ವೋತ್ತಮೆಂಬೋದೆ ಇಷ್ಟ
ಸ್ಥಿರವಲ್ಲ ತ್ವರಿತ ಮಾಡೆಲೊ ಭ್ರಷ್ಟ
ಅರಿತವರ ಕೂಡೆ ನಿರತಾಡು ಶ್ರೇಷ್ಠ ೪

ಅಂಕುರಾವು ಪುಟ್ಟಿಹದೀಗ
ಬಿಂಕದಿಂ ಪರಿಪಾಲಿಸೊ ಬೇಗ
ಶಂಕರನುತ ವಿಜಯ ರಾಮಚಂದ್ರವಿಠಲನ ಪದ–
ಪಂಕಜಕೆ ಅಳಿಯಂತೆ ಸಾಗು ೫

## ೩೮

ಹರಿಕರ್ತ ನಾನಲ್ಲೆಂದು ಹಿರಿಯರಾಡಿದ ಮಾತು
ಅರಿ ಜೀವೋಪಿ ಕರ್ತನೆಂಬ ವಿರೋಧ ಪ

ಸಿರಿ ಅರಸ ತತ್ವೇಶರ ಕೈಯೊಳು
ಚರಿಪಾಧೀನ ಜೀವನಲ್ಲವೆ
ಪರಮ ನಿಷ್ಕ್ರಿಯ ನಾ ಹೀನ ಮನವೆ ಅ.ಪ

ಜಲಾಗ್ನಿ ಸ್ತಂಭ ಜಪ ಕಲಿತ ಮಾತ್ರಕೆ ಪ್ರಾಣಿ
ನಿಲಬಹುದೆ ಅನಲ ಜ್ವಾಲೆಯೊಳು
ಮ್ಯಾಲೆ ಸುಖದಾಸೆಯಿಂದ ಹಲವು ಕರ್ಮಾಚರಿಸಿ
ಗೆಲಬಹುದೆ ನಿಲಯ ಹರಿಕರ್ತನೆಂದ ನುಡಿಗೆ ೧

ಬಿಡಿಬಾಯ ಮಾತಿಗೆ ಪೊಡವಿಪ ಒಪ್ಪುವುದಾದರೆ
ಪಡುವದ್ಯಾಕೆ ತದ್ಧಿತಪಃ ಪ್ರಮಾಣ
ಬಿಡುವುಧ್ಯಾಗೆ ಶ್ರುತಿ ಸ್ಮೃತಿ ಹರಿ ಆಜ್ಞೆ
ಕೊಡವು ಫಲ ಮನ ವಚನ ಕಾಯ ಏಕವಾಗೋ ತನಕ ೨

ಜ್ಞಾನೇಚ್ಛಾಕ್ರಿಯ ಶಕ್ತಿ ಮಿನುಗುವ ಜೀವಕ್ಕೆ
ಅನಾದಿ ನಿತ್ಯ ಸ್ವಭಾವದಲ್ಲೆ
ಜ್ಞಾನಿಗೆ ಕೊಡುವ ಯಥೇಷ್ಟಾಚರಣೆ
ಏನೇನು ಕೂಡದು ಶ್ರವಣಾಧಿಕಾರಿಗೆ ೩

ನಾನು ನನ್ನದು ಎಂಬ ಜ್ಞಾನ ಅನುಗಾಲ ಇರಲಾಗಿ
ನೀನು ನಿನ್ನದು ಎಂಬ ವಂಚನೆಯಲ್ಲವೆ
ಹೀನ ಬಿಡದು ಇದರಿಂದ ಅನುಮಾನ ಮಾಡಸಲ್ಲ
ತನ್ನ ಕ್ರಿಯ ಅನ್ಯಕ್ರಿಯದಂತಾಗೋತನಕ ಮನವೆ ೪

ಜ್ಞಾತಾಜ್ಞಾತ ಕರ್ಮದೊಳು ಜ್ಞಾತಾನುಷ್ಠಾನ ವಿಶೇಷ
ಪ್ರೀತನಾಹ ಶ್ರೀಶ ತಾನು
ನೋತಾಜ್ಞಾತ ಕರ್ಮ ನಿಷ್ಫಲವಲ್ಲವು
ಜ್ಞಾತ ವಿಜಯ ರಾಮಚಂದ್ರವಿಠಲ ೫

## ೩೯

ಕರುಣಿಸು ಜಯೇಶವಿಠಲ
ವರ ಅಂಕಿತವಿದನು ಇತ್ತೆ ಪ

ತರಳ ನಿನ್ನವನೆಂದು ಗುರುವಾತ ಸ್ಥಿತನಾಗಿ
ಭರದಿ ಪಾಲಿಸಿದೆ ಇವನ ಹರಿ ನೀನಿದ್ದೆಡೆಗೆ ಕರೆಸಿ ಅ.ಪ

ಇರಿಸು ವರ್ಣಾಶ್ರಮ ವರಧರ್ಮ ಕರ್ಮಗಳಲಿ
ಮರೆಸಿ ಕಾಮ್ಯಕರ್ಮಗಳೆಲ್ಲವನು
ಸ್ಮರಿಸದಂತೆ ಮಾಡು ಪರಸತಿಯರೊಲುಮೆ
ಮರೆಯದಂತಿರಲಿ ಪರತತ್ವವನು ೧

ಅತಿಥಿ ಅಭ್ಯಾಗತರ ಪೂಜೆ ಸತಿ ಸುತ ಪರಿವಾರದಿ
ಕೃತಕೃತ್ಯನಾಗಿ ಮಾಡಿಸಿ
ಪತಿತರ ಸಹವಾಸ ಹಿತವೆಂದರುಪದೆ ಸ-
ದ್ಗತಿಯೀವ ಮಾರ್ಗ ತಿಳಿಸಿ ೨

ನಿರುತ ತತ್ವ ನಿಶ್ಚಯದಲ್ಲಿ ಜ್ಞಾನ ಗುರುಹಿರಿಯರಲ್ಲಿ ಭಕ್ತಿ
ದುರ್ವಿಷಯದಲಿ ವಿರಕ್ತಿನಿತ್ತು
ವರ ವಿಜಯ ರಾಮಚಂದ್ರವಿಠಲ ಸುರರೊಡೆಯ
ಬರೆದು ನಾಮಾಮೃತವ ನುಡಿಸಿ ೩

(ಜಯೇಶವಿಠಲರಿಗೆ ಅಂಕಿತ ನೀಡಿದ ಸಂದರ್ಭ)
ಸಗಸಾಕಾರ ದುರಿತ ವಿ ದೂರ

## ೪೦

| | |
|---|---|
| ಗಣನಾಥ ಮಣಿವೆನೊ ಗಣನಾಥ | ಪ |
| ಘನ ವಿಶ್ವಾರಾಧಕ ವಿಘ್ನ ವಿದಾರಕ | ಅ.ಪ |

ಲಂಬ ಉದರ ವಿಳಂಬ ತಡೆಯಲಾರೆ
ಶಂಭುಗೆ ಪೇಳು ಭವಾಂಬುಧಿಗಂಬಿಗ ೧

ಸ್ಕಂದನನುಜ ಭವ ಬಂಧನ ಮೋಚಕ
ಚಂದ್ರವರ್ಣ ಗಾತ್ರ ಸುಂದರ ಗಜವಕ್ತ್ರ ೨

ಪ್ರಾಣಾವಿಷ್ಟ ಪ್ರಭು ಪ್ರಾಣಾ ಜಯೇಶ
ವಿಠಲನರಿಸುವ ವಿಘ್ನ ನಿವಾರಿಸು ೩

## ೪೧

| | |
|---|---|
| ಇಂದಿರಾನಂದ ಉದಧಿವರ್ಧನನೆಂದು | ಪ |
| ಕಂದರ್ಪಕೋಟಿ ಲಾವಣ್ಯನಿಧಿ ಮನಪೊಂದು | ಅ.ಪ |

ನಾನು ನನ್ನದು ಎಂಬ ಜ್ಞಾನ ಸಂತತಿಯಿಂದ
ನಾನಾ ಯಾತನೆ ಭಾವ ಬಲೆಯ ಕಟ್ಟಿ
ಹೀನಗೋಜಿಲಿ ಸಿಕ್ಕಿ ಬಲುನೊಂದೆ ಗೋವಿಂದ
ನೀನು ನಿನ್ನದು ಎಂಬ ಅಮೃತಗಾನದಿ ನಿಲಿಸು ೧

ದರ್ವಿಯಂದದಿ ನಾನು ನೀ ಸರ್ವ ಸ್ವಾತಂತ್ರ
ನಿರ್ವಾಹ ನಿನ್ನಿಂದ ಸರ್ವ ಜಗಕೆ
ದೂರ್ವ ಏರಿಸೆ ಸಕಲ ದುರಿತವಳಿಸಿ ಮುಕ್ತಿಸುಖ
ತೋರ್ವಂಥ ಗುಣನಿಧಿ ಸರ್ವಾತ್ಮ ಹೊರೆ ಹೊರೆಯೊ ೨

ನಿನ್ನ ದರುಶನ ಬಿಟ್ಟು ಅನ್ಯತ್ರ ನಿರ್ಭೀತಿ
ಎನ್ನಲಿ ಎಂದೆಂದು ವೇದವೇದ್ಯ
ನಿನ್ನ ದರುಶನ ಫಲಕೆ ನಿನ್ನ ಮಹಕರುಣ
ಇನ್ನು ಕಾರಣದೇವ ಧನ್ಯರಲಿ ಇಡು ಎನ್ನ ೩

ಮನೋವಿಕಾರಗಳೆಂಬ ದುಃಖಾರ್ಣದಿ ಬಿದ್ದು
ಅನುಮಾನ ಮಾಡಿದೆನೊ ನಿನ್ನ ಅಮೃತ
ತನುಧ್ಯಾನ ಮನಕಿಡಿಯದೇನುಗತಿ ಯದುವರ್ಯ
ತೃಣಕೆ ಕೈವಲ್ಲೀವ ತ್ರ್ಯಧೀಶಮನಪೊಂದು ೪

ಜ್ಞಾನಮನ ಬಿಡದಿರು ದೀನ ಬಾಂಧವ ಕೃಷ್ಣ
ಇನ್ನು ಮಾಯವನು ತೆಗೆದೆನ್ನ ಬೆರೆಯೊ
ಜ್ಞಾನನಿಧಿ ಜಯೇಶವಿಠಲನೆ ವಿಧಿವಂದ್ಯ
ಪ್ರಾಣಾಧಾರಕ ಶುಕನ ಆನಂದನಿಧಿ ಪಾಹಿ ೫

## ೪೨

ಎಂತು ಜೀವಿಸಲಯ್ಯ ಯಾದವೇಶ ಪ

ಸಂತ ಚಿಂತಾರತ್ನ ನೀನುಪೇಕ್ಷಿಸೆ
ಎನ್ನಸುವಿಗಸು ನೀನು ಭಿನ್ನ ಜ್ಞಾನದಿ ಎನ್ನ ಅ.ಪ

ಬನ್ನ ಬಡಿಸುವಿ ಮಾಯ ಜೈಸಲರಿಯೆ
ಧನ್ಯ ಶಿರಿ ವಿಧಿ ವಾಯು ಶಿವ ಶಕ್ರ ಸುರನಿಕರ
ನಿನ್ನಲ್ಲಿ ಸುಖಿಸುವರೊ ಅನ್ನೆಲ್ಲಿ ಅಸತೆಂದು ೧

ನೀರಗುಳ್ಳೆಯಂತೆ ಸಂಸೃತಿಯ ಸುಖವೆಂದು
ದಾರಿತೋರ್ವವ ನೀನು ಕಣ್ಣುಕಟ್ಟೆ
ಆರು ಬಿಚ್ಚುವರಯ್ಯ ಆ ಪಟಲಕಿಕ್ಕಟ್ಟು
ವಾರಿಜಾಸನನಯ್ಯ ವಂಚಿಸದೆ ಮೈದೋರು ೨

ಕಾಮಾದಿ ಷಡ್ವರ್ಗ ದುಷ್ಕರಣ ದುರ್ಮ್ಮಾನದ
ತಾಮಸದಿ ಸಿಗಬಿದ್ದು ಪಾಮರಾದೆ
ವ್ಯೋಮಕೇಶನ ಮಿತ್ರ ಜಯೇಶವಿಠಲ
ನೀ ಮನಸು ಮಾಡಲು ಆತ್ಮಾಪಿ ವೈಕುಂಠ ೩

## ೪೩

ಎನ್ನೊಡನೆ ಹುಟ್ಟಿದ ಹರಿಯೆ ಪಾಹಿ ಪ

ಅನ್ನಂತ ಗುಣವನಧಿ ಎನ್ನಂತೆ ನಟಿಸುವಿ ಅ.ಪ

ಸೃಷ್ಟಿಕಾಲದ ಮೊದಲು ಇಷ್ಟು ಪರಿಯಂತರದಿ
ಅಷ್ಟು ಕಾಲವು ನಿನ್ನ ನಾಮ ಧರಿಸೆ
ತುಷ್ಟಿ ಪೂರ್ಣನೆ ನೀನು ಮಂದಿ ಮೋಹಿಸಿ ಎನ್ನ
ಕಷ್ಟಕೆ ಗುರಿಮಾಳ್ಪುದುಚಿತವೇ ನಿನಗೆ ೧

ಒಳಗಿದ್ದು ಎನ್ನಲ್ಲಿ ಎಂತೆಂತು ನೀನಾದೆ
ತಲೆ ಮಣಿದು ನಾನಂತು ಮಾಡಬೇಕೊ
ಮಲಗುವುದು ನಿಲ್ಲುವುದು ನಿದ್ದೆಗೈವುದು ಮತ್ತೆ
ತಿಳಿವುದು ತಿನ್ನುವುದು ನಿನ್ನ ಶ್ರೀಯವೊ ದೇವ ೨

ಬಿಂಬನೀ ಪ್ರತಿಬಿಂಬ ನಾ ನಿನಗೆ ಎಂದೆಂದು
ಸಿಂಧು ಸದನ ಜಯೇಶವಿಠಲರಾಯ
ಡಿಂಬದಲಿ ನಡೆದ ಶ್ರೇಯ ನಿನ್ನದೆಂಬೊಜ್ಞಾನ
ಬೆಂಬಿಡದೆ ಪಾಲಿಸಿ ಬಿಂಬ ದರುಶನ ನೀಡೊ ೩

## ೪೪

ಎಲ್ಲ ದೇವರ ಗಂಡ । ಕೃಷ್ಣ
ಚಿಲ್ಲರೆ ದೈವರ ಮಿಂಡ ಪ

ಪಾದದಿ ನದಿಯನು ಪೆತ್ತ । ಅದನು
ರುದ್ರನು ಶಿರದಲಿ ಪೊತ್ತ
ಮಾಧವನೊಕ್ಕಳ ಜಾತ । ಶತ
ಮೋದನು ಲೋಕ ಪ್ರಖ್ಯಾತ ೧

ಸೃಷ್ಟಿ ಸಂಹಾರಗೈದ । ಪರ
ಮೇಷ್ಟಿ ರುದ್ರರನಾಳ್ದ
ಯೆಟ್ಟಿ ದೈತ್ಯರ ಶಿರ ಮುರಿದ । ದುರಿತ-
ದೃಷ್ಟಿಸಿ ನಾಶಗೈದ ೨

ಬಂಟರ ಪಾಲಕನೀತ । ವೈ-
ಕುಂಠದ ಒಡೆಯನು ದಾತ
ತುಂಟರ ಮಡಹುವ ಸತತ । ನಮಗೆ
ನಂಟನು ಗೋಕುಲನಾಥ ೩

ಮನಸಿಗೆ ಬಂದುದು ಸಿದ್ಧ । ಪ್ರತಿ
ಯೆಣಿಸುವ ಜೀವನೆ ಬದ್ಧ
ನೆನೆಸುವರಲಿ ತಾನಿದ್ದ । ದಯ
ವನಧಿಯು ಬೆಣ್ಣೆಯ । ಕದ್ದ ೪

ದುರಿತ ದುರುಳರ ಭಂಗ । ತಾ
ನಿರುತ ಮಾಡುವ ರಂಗ
ಜಯೇಶವಿಠಲ ತುಂಗ । ಮಹಿ
ಮಾ ರಕ್ಷಿಸು ದಯಾಪಾಂಗ

# ೪೫

ಏಕಿಷ್ಟು ಕರುಣವೊ ಶ್ರೀಕೃಷ್ಣದೇವ ಪ

ನಾಲ್ಕೊತ್ತು ಲೋಕದಲಿ ಸುಖ ಸೂರೆ ಮಾಳ್ಪೊ ಹರಿ ಅ.ಪ

ಮುಕ್ತಗಣ ನೋಡಯ್ಯ ನಿತ್ಯಮುಕ್ತಳ ನೋಡು
ಶಕ್ತವಿಧಿ ವಾಣೀಶ ಭಕ್ತಿ ದೇವ
ಪಕ್ಷಿಪತಿ ಫಣಿ ರುದ್ರ ಇವರ ಸತಿಯರ ನೋಡು
ಉತ್ತಮೋತ್ತಮ ಸುಖವ ಸೂರೆಗೊಂಬರೊ ಹರಿಯೆ ೧

ನಿನ್ನಾರು ಮಹಿಷಿಯರ ಸುರಪ ಸುರಗಣ ನೋಡು
ಪುಣ್ಯತಮ ಸುರಮುನಿಯ ಭೃಗುವ ನೋಡು
ಚಿಣ್ಣ ಪ್ರಹ್ಲಾದನನ್ನ ಬಲಿ ಧ್ರುವ ಭೀಷ್ಮನ್ನ
ಇನ್ನು ದ್ರೌಪದಿ ಶುಕನ ಆನಂದ ನೋಡಯ್ಯ ೨

ಅಂಬರೀಷನ ನೋಡು ರಾವಣಾನುಜ ಜನಕ
ಗಂಭೀರ ಪರೀಕ್ಷಿತ ವೃತ್ತ ಶಬರಿ
ತುಂಬಿದ ಸದ್ಭಕ್ತ ಋಷಿಪತ್ನಿಯರ ನೋಡು
ಕಂಬನಿಯ ಸುರಿಸುವೆನೊ ಕರುಣಿಸೊ ಹೃದ್ಗುಹದಿ ೩

ನೀಯೆನ್ನ ಸತ್ವ ನೀಯೆನ್ನ ಜ್ಞಾನ
ನೀಯೆನ್ನ ಮನ ಬುದ್ಧಿ ಕರುಣ ನಿಧಿಯೆ
ನೀಯೆನ್ನ ಪ್ರಾಣರತಿ ನೀಯೆನ್ನ ಸತ್ಕರಣ
ನೀಯೆನ್ನ ಧೃತಿ ಶಾಂತಿ ನೀಯೆನ್ನ ಸರ್ವನಿಧಿ ೪

ನೀ ಮಾಡೆ ನಾ ಮಾಳ್ಪೆ ನೀನಾಡಿಸಿದರಾಡ್ವೆ
ಕಾಮದನೆ ಕಾಮಪಿತ ಜಯೇಶವಿಠಲ ಶ್ರೀ
ರಮಣ ಸರ್ವೇಶ ಈ ಮನಸು ನಿನ್ನಲ್ಲಿ
ಪ್ರೇಮದಿ ನೆಲಸಿ ಇರುವಂತೆ ಕೃಪೆಮಾಡು ೫

## ೪೬

ಕಣ್ಣಿನಾಕರಿರಟ್ಟ ಸುಟ್ಟುಬೂದಿಯ ಮಾಡಿ
ನಿನ್ನ ಈಕ್ಷಿಪ ಶುಭ್ರ ದೃಷ್ಟಿಯ ನೀಡೊ ಪ

ಪುಣ್ಯಪುರುಷನೆ ಬಿಂಬಪೂರ್ಣ ಮಂಗಳ ಶೌರಿ
ಧನ್ಯ ಮಾಡೆನ್ನ ಮುನ್ನ ನಿಲ್ಲಲಿ ಸೆಳಿಯೊ ಅ.ಪ

ವಿಷಯಸುಖ ದುರ್ಗುಣದ ಪಂಕದಲಿ ಮನನೆನೆದು
ವಿಷಕ್ರಿಮಿಯಂತಿಹದೊ ಇದಕೆ ಮದ್ದು
ನಿನ್ನ ಕೃಪೆ ಹೊರತು ಬ್ಯಾರಿಲ್ಲ । ಭಿಷಜೋತ್ತಮ
ಜೀವೇಶ ಸನ್ನುತ ಹರಿಯೆ ವಿರಜ ಮಾಡೊ ಮನವ ೧

ಭಾವಸೂತ್ರಗಳಿಂದ ವಿಧಿಭವರೆ ಮೊದಲಾದ
ಜೀವರನು ಆಡಿಸುವ ಶ್ರೀಶ ಎನ್ನ
ಪಾವನ್ನ ಗುಣನಿಧಿಯೆ ಶ್ರೀ ವೇಣುಗೋಪಾಲ
ದೇವ ಅಜಮಿಳಪಾಲ ಪೂತ ಭಾವದಿ ನಿಲಿಸೊ ೨

ಕಾತುರವಪಡುತಿಹೆನೊ ಅಸುರಕರ್ಮದಿ ಸಿಕ್ಕಿ
ಪಾತಕಿಗಳ ಸಹವಾಸ ಬಿಡಿಸಿ ಕಾಯೊ
ಆತುಮಕೆ ಅತಿಮಿತ್ರ ಜಯೇಶವಿಠಲ
ನಿನ್ನೊಲುಮೆಪಾತ್ರರಲಿ ಇಟ್ಟೆನ್ನ ಕಾಪಾಡು ೩

## ೪೭

ಕರುಣಾಸಾಗರ ವಿಶ್ವ ಕಾಯೋ ಎನ್ನ ಪ

ಪರಮಾತ್ಮ ನೀ ದೂರ ಮಾಡಿದರೆ ಗತಿಯೇನು ಅ.ಪ

ನಿನ್ನ ಲೋಕಕೆ ಎನ್ನ ವೈದಾಗ ಕರುಣಾತ್ಮ
ನಿನ್ನ ಕ್ರಿಯ ಗುಣ ರೂಪ ತೋರಿ ಎನಗೆ
ನಿನ್ನ ಪರಿವಾರ ಜನರಲ್ಲಿ ಸೇರಿಸಿ ಪರಮ
ಧನ್ಯನಾ ಮಾಡಯ್ಯ ಮದ್ಬಿಂಬ ಮಾರಮಣ ೧

ಸ್ಮೃತಿ ಜ್ಞಾನ ಮನ ಬುದ್ಧಿ ಮಾತ್ರ ಭೂತವು ಕರಣ
ಧಾತು ಸಪ್ತಕ ಪಂಚ ಕೋಶಗಳಲಿ
ಸತಿ ಸಹಿತ ಪ್ರಥಮಾಂಗನಲಿ ಕುಳಿತು ನೀ ಸತತ
ಪ್ರತಿ ತತ್ವ ವ್ಯಾಪಿಸಿ ಜೀವಕರ್ಮವ ಮಾಳ್ಪೆ ೨

ಚತುರ ದಶಲೋಕದಲಿ ಪ್ರತಿದೇಹರಥ ನಿನಗೆ
ಕೃತಿರಮಣ ಸರ್ವತ್ರ ನಿನ್ನ ಲೀಲ
ಅತಿಭಕ್ತಿಯಲಿ ಬ್ರಹ್ಮ ಸತಿ ರಮಣ ಸುರರೆಲ್ಲ
ಗತನಿದ್ರರಾಗಿನ್ನು ನೋಳ್ಪರ್ರೈ ಮಹಚಿತ್ರ ೩

ಕಂಡ ಕಡೆಯಲಿ ಪೂಜೆ ಭಂಡಾರ ತುಂಬಿಹುದು
ತೊಂಡ ವಿಧಿ ಶಿವ ಸುರರು ಸರ್ವತ್ರ ನಿನ್ನ
ಕಂಡು ಪೂಜಿಪರಯ್ಯಾ ಪೂರ್ಣ ವಿಭವಗಳಿಂದ
ಮಂಡೆ ಬಾಗಿದೆ ಭಕ್ತ ತಂಡದಲಿ ಇಡು ಎನ್ನ ೪

ಪೂಜ್ಯ ಪೂಜಕನಾಗಿ ಪರಿಪೂರ್ಣ ವೈಭವದಿ
ಪೂಜಿಸುವೆ ನಿನ್ನ ನೀ ಸರ್ವಕಾಲ
ಭೋಜ್ಯ ಭೋಕ್ತ್ಯನಾಗಿ ಆನಂದ ಸಿರಿಗೀವೆ
ಅಜರುದ್ರ ಸುರಗಣಕೆ ಉಣಿಸಿ ೫

ಹದಿನೆಂಟು ನರಮುಖವು ಮಧ್ಯ ಗಜಮುಖ ದೇವ
ಪದವೆರೆಡು ಭುಜ ನಾಲ್ಕು ಪದುಮೆ ರಮಣ
ಉದಯಾರ್ಕ ಕಿರೀಟ ಕುಂಡಲಭೂಷ
ಗದೆ ಪದುಮ ಆರೆ ಶಂಖ ಮಣಿಯುಕ್ತ ಮಾಲಧರ ೬

ವಿಶ್ವತೈಜಸ ಮೂರ್ತಿ ಜಯೇಶವಿಠಲ
ವಿಶ್ವನಾಮಕ ವಿಶ್ವವ್ಯಾಪ್ತಗುಪ್ತ
ಉಚ್ಛ್ವಾಸ ಬಿಡುತಿಹೆನೊ ಉಡುಗಿ ಸಕಲ ಶಕ್ತಿ
ಉತ್ಸಾಹ ನೀಡಯ್ಯ ಸ್ವಾಂತರದಿ ಕಲೆತೆನ್ನ ೭

## ೪೮

ಕವಿವರರ ಕವನದಲಿ ಕವಿ ಕವಿದು ಪೊಳೆವ
ಭುವನಪಾವನ ಚರಿತ ಇಂದೀವರಾಕ್ಷ ಪ

ತವಪೂರ್ಣ ನಿಜ ಒಲಿಮೆ ಪ್ರಭುಪೂರ್ಣ ಕವನದಲಿ
ನವನವದಿ ತೋರಿದೆಯೊ ಮೋದ ಕರಿವರದ
ಭವಭಂಗ ಪರಿಹಾರ ಕವನ ವೋದಿದ ಮಾತ್ರ
ಧವಳ ಕೀರುತಿ ಬೆಳುದಿಂಗಳನು ಮೀರಿಹುದೊ ೧

ತವಪೂರ್ಣ ಗುಣ ಕ್ರಿಯೆ ರೂಪ ಘನ ಭಾವಗಳು
ಲವಲವಿಕೆ ಎಮ್ಮ ಚೇತನಕೆ ಕೊಟ್ಟು
ಭವಭೀತಿಗೆ ಭೀತಿ ತಂದೊಡ್ಡುವುದೊ ಕಮಲೇಶ
ಸವಿದುಣ್ಣುವಾ ಜನಕೆ ಜಡದಲ್ಲೊ ನೀ ಬರುವೆ ೨

ಶ್ರವಣ ಮಾತ್ರಕೆ ಮೈಮರೆಸುವುದು ಮಹಸಿರಿಯು
ಶಿವ ಶುಕ ಪಿತ ಸವಿದ ರುಚಿಯು ಇಹುದು
ಪವಮಾನ ಕೃಷ್ಣಾರ್ಯ ರಾಮಾರ್ಯರತಿ ವಲುಮೆ ।
ಶ್ರವಿಸುವುದು ಪರಿಪರನು ಭಕ್ತಿಮತ್ತರ ಮಾಡಿ ೩

ಕವಲುಮತಿಯಲಿ ಮುಳುಗಿ ಚಲಿಸದಿರು ಇದರಿಂದ
ಭವಮೂಲಕುನ್ಮೂಲ ಇದರ ಮಹಿಮ
ಅವಲಿಯನು ತಿಂದವನು ಅಗಲಿರದೆ ಒಡನಿಹನು
ಜವನ ದೂತರು ತಲೆಮಣಿದು ಓಡುವರೊ ೪

ತತ್ವಾಭಿಮಾನಿಗಳಿಗಾಹಾರವಿದು ಸತ್ಯ
ತತ್ವಾರ್ಥ ಬಲು ಸುಲಭದಲ್ಲೆ ಮನಕವಗಾಹ್ಯ
ಸತ್ಕೃತಿಯ ಮಾಡಿ ಚಿತ್ಸುಖವ ಉಣು ನಿತ್ಯ
ವಾತಾತ್ಮ ಗುರು ಶ್ರೀ ಜಯೇಶವಿಠಲನ ನೋಡು ೫

## ೪೯

ಕರ್ಮನಾಮಕ ಧರ್ಮಕಾರಿ ಪ

ನಿರ್ಮಮನ ಮಾಡೆನ್ನ ನಿರ್ಮಮರ ದೊರೆ ಹರಿಯೆ ಅ.ಪ

ಸೂರಿಗಳ ಹೃದಯಾಬ್ಜ ಸೂರ್ಯ ಸುಂದರಮೂರ್ತಿ
ನಾರಿಲಕ್ಷ್ಮೀ ವಕ್ಷ ಭೂರಿ ಕರುಣಿ
ಮೀರಿಹ ಅಹಂಜ್ಞಾನ ತಿಮಿರವನು ಪರಿಹರಿಸು
ಮಾರಮಣ ಮಾಂ ರಕ್ಷ ರಕ್ಷಿಸು ದಯವನಧಿ ೧

ಬಂಧನದಿ ನೀನಿಡಲು ಅಜ ರುದ್ರ ಸುರರೆಲ್ಲ
ವಂದಿಸಲು ಬಧಿರರಂತಿರುವರಯ್ಯ
ಹಿಂದು ಮುಂದೆಂದೆಂದು ಎನ್ನಲ್ಲಿ ನೀ ಕುಣಿಸಿ
ದಂದದಲಿ ನಾ ಕುಣಿದೆ ಅರ್ಪಿತವಾಗಲಿ ನಿನಗೆ ೨

ಮೋಚಕನೆ ಜಯೇಶವಿಠಲನೆ ವಿಧಿವಂದ್ಯ
ಯಾಚಿಪೆನು ವಿಜ್ಞಾನ ಕರುಣಿಸೆಂದು
ಉಚ್ಚುನೀಚದಿ ನಿನ್ನ ಪೂರ್ಣ ಮೂರ್ತಿಯ ಮಹಿಮೆ
ಗೋಚರಕೆ ಬರುವಂತೆ ಆಚರಿಸು ಎನ್ನಲ್ಲಿ ೩

## ೫೦

ಕುಡಿಸೆನಗೆ ಹರಿ ನಿನ್ನ ನಾಮರಸವ ಪ

ಕೊಡಬೇಡ ಅನ್ಯರಸ ಹಸಿದಿದ್ದರೂ ಇರುವೆ ಅ.ಪ

ಜನರ ಮನ್ನಣೆ ದೃಷ್ಟಿ ಕನಸಿನಲಾದರೂ ಬೇಡ
ಮನವು ನಿನ್ನಲಿ ಸತತ ನೆಲಸಿರಲಿ ಸ್ವಾಮಿ
ತೃಣವನು ಘನ ಮಾಳ್ಪ ಅನಿಲಮಂದಿರವಾಸ
ಪ್ರಣತಪಾಲಕ ನಿನ್ನ ಮೊರೆಹೊಕ್ಕೆನಯ್ಯ ೧

ನಿಜ ಭಕ್ತ ಪದವೀಯೊ ಋಜುವರ್ಗ ಸಂಪೂಜ್ಯ
ಅಜ ಜನಕ ಜಗದೀಶ ಗೋಪಾಲ ಬಾಲ
ವೃಜಿನವ ದೂರ ಮಾಡಿ ಮಾಯಸೆರೆಯನು ಬಿಡಿಸಿ
ಕುಜನರ ಸಂಗ ಎನ್ನ ಹತ್ರ ಸುಳಿಯದಂತೆ ಮಾಡೊ ೨

ಕೇಳಿಸು ನಿನ್ನ ಕಥೆ ನೋಡಿಸು ತವ ಮೂರ್ತಿ
ಬಾಳಿಸು ಮನ ನಿನ್ನ ಧ್ಯಾನದಲ್ಲಿ
ಫಾಲಕ್ಷ ಸಖ ಪೂರ್ಣ ಜಯೇಶವಿಠಲ
ಕಾಲಿಗೆ ಬಿದ್ದವನ ಕೈಹಿಡಿದು ಉದ್ಧರಿಸು ೩

## ೫೧

ಕ್ರಿಯ ರೂಪ ಗುಣ ನಾಮ ದರ್ಶನ ಕರ್ತಾ ಪ

ದಯವನಧಿ ಗೋಪಾಲಗೈಸು ಅಹಂ ನಾಶ ಅ.ಪ

ಉಂಡು ಉಣಿಸುವಿ ನೀನು ದಣುವಿಕೆಗೆ ನಾನಯ್ಯ
ಥಂಡ ಥಂಡದಿ ನಿನ್ನ ಲೀಲ ಜಾಲ

ಕಂಡರೂ ಕಾಣದಲೆ ಬೆಂಡಾದೆ ಬಹುನೊಂದು
ಮಂಡೆ ತಾಗಿದರು ಮನಕೆಚ್ಚರಾಗದು ಸ್ವಾಮಿ ೧

ನಾಯಿಯಂದದಿ ವಿಷಯಕ್ಹಾರುವುದು ಈ ಮನಸು
ದಾಯಾದಿಗಳ ವಶದಿ ಸಿಕ್ಕಿ ಸತತ
ಕಾಯಜಾಪಿತ ನಿನ್ನ ರೂಪ ಧ್ಯಾನಕೆ ಬರದು
ಮಾಯೇಶ ಮಾರಮಣ ಕಾಯೆನ್ನ ಕರುಣಾಬ್ಧಿ ೨

ತೆಗಿ ನನ್ನ ಭೋಗ ಬಲೆ ನಗೆ ಮುಖವ ತೋರಯ್ಯ
ನಿಗಮ ವೇದ್ಯ ಜಯೇಶವಿಠಲರಾಯ
ಸುಗಮ ನೀನೆಂದು ಶ್ರುತಿ ಪೊಗಳುವದು ಅನುಗಾಲ
ಖಗಧ್ವಜ ಪರೆ ತೆಗೆದು ಜ್ಞಾನ ಚಕ್ಷುಸು ನೀಡು ೩

## ೫೨

ಖೋಡಿಗುಣ ಜಗದಲ್ಲಿ ಹೂಡಿ ನೀ ನಲಿವಾಗ
ನಾಡೆದ್ದು ಕುಣಿಯುವದೊ ನಾಸ್ತಿಕಾದಲ್ಲಿ ಪ

ಮಾಡಿ ದುಷ್ಕ್ರಿಯ ಜಾಲ ಮತಿಭ್ರಷ್ಟತನದಲ್ಲಿ
ನೋಡರೂ ಸನ್ಮಾರ್ಗ ಗಾಡಿಕಾರನೆ ಹರಿಯೆ ಅ.ಪ

ಗತಿಸಿದಾ ತನುಗಳಲಿ ರತಿವಿಷಯಗಳ ಮಾಡಿ
ಮತಿ ಮನಸು ದುರ್ಭಾವಗಳಲಿ ನೆಯದು
ವೃತಿವದನ ಮನೆಮಾಡಿ ಮೈಮರೆದು ಬಾಳುವ
ಮರ್ತ್ಯರನು ನೋಡಲತಿ ಭೀತಿ ಆಹುದೊ ಮನಕೆ ೧

ನಾನಾಭಾವವ ಪೊಂದಿ ಹಾನಿವಶರಾಗಿಹರು
ಜ್ಞಾನನಿಧಿ ತವಕರುಣಕೆರವಾಗಿ ನಡೆದು
ನಾನಾ ದುಃಖದಿ ನರಳಿ ನರಕ ಯಾತನೆಗೊಂಬ
ಜ್ಞಾನಹೀನರ ನೋಡಿ ನಡುಗುವೆನೊ ಹರಿಕಾಯೊ ೨

ಕ್ವಚಿತು ಸಜ್ಜನ ತಾವು ಶುಚಿ ಮನದಿ ನಿನ್ನಲ್ಲಿ
ರುಚಿಗೊಳಲು ಎತ್ತೆನಿಸೆ ಎದೆ ಬಿಚ್ಚುವಂತೆ
ಹೆಚ್ಚಿ ಆದಿವ್ಯಾಧಿ ನುಚ್ಚು ಮಾಳ್ಪದೊ ಮನಸು
ಸಚ್ಚಿದಾನಂದ ಹರಿ ಸಜ್ಜನಾಧಾರಿ ಧೊರಿ ೩

ಇಂದುಶೇಖರ ವಿಧಿ ಲಕ್ಷ್ಮಿ ಸನ್ನುತ ಮಹಿಮ
ಬಂದ ಭಯಗಳು ನಿನ್ನ ಇಚ್ಛೆಯಿಂದ
ಬಂದದಲ್ಲದೆ ಬೇರೆ ಒಂದು ಕಾರಣ ಕಾಣೆ
ಕುಂದಳಿದು ನಿತ್ಯಸುಖ ಸಿಂಧು ಕೊಡುವವ ನೀನೆ ೪

ತಾಮಸರ ವಿಕಾರ ದುಃಖರಸ ಸೃಜಿಸುವುದು
ಸೌಮ್ಯ ಜನ ಸದ್ಭಾವ ಸುಖಸಾರ ಸೃಷ್ಟಿ
ಕಾಮಧೇನು ಜಯೇಶವಿಠಲಯ್ಯ ನಿನ್ನ ಮಹ
ನೇಮ ಇಂಥಾದ್ದೆ ಪತಿತ ಪಾವನ ಪಾಹಿ ೫

## ೫೩

ಗುರುನಿಕರ ಸಂಸೇವ್ಯ ಸತಿಪತಿಯ ಬಿಂಬ ಪ

ಪರಮ ಪಾವನ ನಾಮ ಪಾಹಿ ಪಾಹೀ ಎನ್ನ ಅ.ಪ

ಪತಿತಪಾವನ ಪರಮಗತಿ ನೀನು ಸರ್ವಸ್ವ
ಸತತ ತತ್ವದ ಪಾಲಿಸು ಎನ್ನ ಶಿರದಿ
ಹಿತದಿಂದ ನೆಲಸಿರಲಿ ಹರಿದಾಸ್ಯ ಕೊಟ್ಟೆನಗೆ
ರತಿ ಬಿಡಿಸು ವಿಷಯದಲಿ ಮನ ನಿನ್ನ ಬಿಡದಿರಲಿ ೧

ನಿನ್ನ ಕ್ರಿಯ ಗುಣರೂಪ ನಿನ್ನ ತಿಳಿಯದೆ ನಡೆದೆ
ಘನ್ನಭಾವವ ನೀಡು ಪೂರ್ಣದಯದಿ
ಅನ್ಯವೆಂದಿಗು ಒಲ್ಲೆ ಅನ್ನನೀಯನಗಾಗು
ಪೂರ್ಣಪ್ರಜ್ಞರ ದೈವ ಪನ್ನಗಾದ್ರಿನಿಲಯ ೨

ಲಕ್ಷ್ಮೀನಿಲಯ ಜಯೇಶವಿಠಲನೆ ವಿಧಿವಂದ್ಯ
ಲಕ್ಷ್ಯನಿನ್ನಲಿ ನೆಲಸು ಸತತ ಬಿಡದೆ
ಪೃಷ್ಠೇಶ ತವ ಕರುಣ ಬಂದು ಎನ್ನೊಳು ಬೀಳೆ
ತಕ್ಷಣವೆ ಭವ ಹಿಂಗಿ ಮೋಕ್ಷಸುಖ ಕರಗತವೊ ೩

## ೫೪

ಜೀವ ಕರ್ತೃತ್ವದ ಭ್ರಮೆಯ ಬಿಡಿಸೊ ಪ

ಜೀವೇಶನೊಡೆಯ ಶ್ರೀ ವೇಣುಗೋಪಾಲ ಹರಿ ಅ.ಪ

ಮಿಥ್ಯವೆಂಬುದು ಬಲ್ಲೆ ಕರ್ತೃತ್ವ ನಮಗಿಲ್ಲ
ಪ್ರತ್ಯಕ್ಷಕಪವಾದದಲ್ಲಿ ಬಾಳ್ವೆ
ವ್ಯರ್ಥಧಾವತಿಪಡುವೆ ಸರ್ವಕರ್ತನ ಮರೆದು
ಯತ್ನಕೆ ವಶವಲ್ಲ ಮಿಥ್ಯೆ ಭಾವವು ಬಿಡಲು ೧

ವಿಷಯ ವಿಷವದು ಬಲ್ಲೆ ತಲ್ಲೋಭ ಬಿಡಲರಿಯೆ
ವಿಷಮಗತಿ ಪ್ರವಹದಲಿ ವಿವಶನಾಗಿ
ಹುಸಿನಂಬಿ ತೆರಳುತಿಹೆ ಹರುಷ ಕಾಣದೆ ನಿಜದೆ
ಕೃಶನಾದೆ ಹರಿಯೆನ್ನ ಕೈಪಿಡಿದು ಉದ್ಧರಿಸೊ ೨

ಗುಣವಿಲ್ಲ ದೋಷಿಲ್ಲದೆಡೆಯಿಲ್ಲ ಎನ್ನಲ್ಲಿ
ದನುಜಾರಿ ನಿನ್ನವರ ಕರುಣ ಉಂಟೊ
ಪ್ರಣತಾರ್ಥಿ ಹರ ಶ್ರೀ ಜಯೇಶವಿಠಲನಲ್ಲಿ
ಮನವಿತ್ತು ನೋಡಿ ನೀನೆನಗೊಲಿಯೊ ಶ್ರುತಿ ವಿನುತ ೩

## ೫೫

ಜ್ಞಾನದಾಯಕ ಜಗಕೆ ನೀನೆ ಶೌರಿ ಪ

ಪ್ರಾಣಪಂಚಶರೀರ ಜೀವ ಜಡ ನಿನ್ನೊಶವೊ ಅ.ಪ

ನೀನೆಂತು ನಮ್ಮಲ್ಲಿ ನಿಂತು ಕುಣಿಸಿದರಂತು
ಜ್ಞಾನೇಚ್ಛೆ ಯತ್ನಮನ ಕರಣದೇಹಾ
ನಾನಾಪರಿ ಅಂತೆಂತು ಕುಣಿ ಕುಣಿದು ಕುಣಿಬೇಕು
ಆನೊಲ್ಲೆನೆಂಬ ಶಕ್ತನ್ನ ನಾ ಕಾಣೆ ೧

ತನುಛಾಯದಂದಲಿ ನಮ್ಮಿರವು ನೀ ಬಲ್ಲಿ
ತನುಮನದ ಯತ್ನಗಳು ನಡಿವುದೇನೊ
ಅನಿಮಿತ್ತ ಸಖ ನೀನು ಅನುಗಾಲ ನಮಗೆಂದು
ಅನವರತ ಶ್ರುತಿರಾಸಿ ಘೋಷಿಪದು ನಂಬಿಹೆನು ೨

ಕಾಲಕರ್ಮಾಲಯನೆ ಮೂಲ ನೀ ಸರ್ವಕ್ಕೆ
ಫಲಾಕ್ಷಸಖ ನೀನು ವಿಮುಖನಾಗೆ
ಕೀಳು ಚೇತನ ಜಾಲ ಅಚೇತನ ಸಮರಹುದೊ
ಲೋಲ ಜಯೇಶವಿಠಲ ಸುಮ್ಮನೆ ಕೃಪೆಮಾಡೊ ೩

## ೫೬

ನಾನು ನನ್ನದು ಎಂಬ ಜಾಣ ಶೌರಿ ಪ

ಕಾಣಿಸದೆ ಖತಿಗೊಳಿಸುವುದುಚಿತಲ್ಲ ಮೊರೆ ಕೇಳು ಅ.ಪ

ಕಾಣುವುದು ಕೇಳುವುದು ಗಂಧ ರಸ ಸ್ಪರ್ಶಗಳು
ನಾನಾ ಬಗೆ ವಿಷಯಗಳು ನೀನೆ ರಂಗ

ಭಾನು ಕೋಟಿ ತೇಜ ಭಾವ ಭಕ್ತಿ ಸುಪ್ರೀಯ
ನಾ ನಿನ್ನವರ ಪಾದರಜ ರಕ್ಷಿತನೊ ಸ್ವಾಮಿ ೧

ಶ್ರೀ ರಮಣಿ ಆನಂದ ಅಂಬುಧಿಯೆ ಅಬುಜಭವ
ವೀರ ಮೃಡ ಸುರ ಪೂಜ್ಯ ಪಾದ ವನಜ
ಆರು ನಾಲ್ಕು ತತ್ವ ಆದರ್ಶ ಪ್ರತಿಫಲಿತ
ಆನಂದ ಚಿತ್ಪ್ರಚುರ ಅನುರೂಪನೆ ಪಾಹೀ ೨

ಕಲ್ಯಾಣ ಗುಣವನಧಿ ಜಯೇಶವಿಠಲ
ಕಲ್ಯಾಣ ಮಾಡೆನಗೆ ಕಾರುಣ್ಯಸಿಂಧು
ಎಲ್ಲ ಗುಣತ್ರಯ ರೂಪ ನಿನ್ನದೆಂಬೊ ಜ್ಞಾನ
ಎಲ್ಲ ಕಾಲದಿ ಕೊಟ್ಟು ಶಿಷ್ಟರಲಿ ಇಡು ಎನ್ನ ೩

## ೫೭

ನಿನ್ನ ಕೃಪೆ ಕಾಣದ ಕಾಲ ವ್ಯರ್ಥ ಪ

ಘನ್ನ ನಿರಯಕೆ ವೈವೋ ಸಾಧನವೋ ಗೋಪಾಲ ಅ.ಪ

ವಿಧಿಬಲ್ಲ ಹರಬಲ್ಲ ಬುಧ ಸುರರು ಬಲ್ಲರೈ
ಚದುರ ತತ್ವೇಶಗಣ ಬಲ್ಲರಯ್ಯಾ
ವಿಧಿಪಿತನೆ ನಿನ್ನ ಬಿಟ್ಟನ್ಯತ್ರ ಮನವಿರಲು
ನಿಧನ ನೋವಿಗೆ ಮಿಗಿಲು ಪದುಮ ಮುಕ್ತರು ಸಾಕ್ಷಿ ೧

ಬಂಧಿಸಲು ನೀ ನಮ್ಮ ಬಿಡಿಸಿಕೊಂಬುವರುಂಟೆ
ಅಂಧತಮಸಿನ ಭೋಗದಿಂದಾಹುದೊ
ಇಂದಿರಾನಂದ ಘನ ಸಿಂಧು ಚಿನ್ಮಯ ಕಾಯ
ತಂದೆ ನಿನ್ನಯ ಕರುಣ ಉಂಬುವನೆ ಬಹುಧನ್ಯ ೨

ಗೋ ಗೊಲ್ಲರಲಿ ಕರುಣ ಸುರಿದ ದೀನ ಬಂಧು
ಭಾಗ್ಯಪಾಲಿಸು ಭಕ್ತಿಯೋಗವಿತ್ತು
ರೋಗದಲಿ ಬಲು ನೊಂದೆ ಭಯವನ್ನು ಹೀರುವುದು
ನಾಗತಲ್ಪ ಜಯೇಶವಿಠಲನೆ ಉದ್ಧರಿಸು ೩

## ೫೮

ನಿನ್ನ ಪ್ರೇಮದ ಭೋಗ ಇನ್ನಿಲ್ಲದ ಮನುಜ
ಘನ್ನ ಭೂ ಭಾರನವ ಭವನಮಿತ್ರ ಪ

ಬನ್ನಬಟ್ಟೆನೊ ಬಹಳ ಬಲುಹೀನ ವೃತ್ತಿಯಲಿ
ಮಾನ್ಯರಲಿ ತಲೆಯೆತ್ತಿ ಇರುವಂತೆ ಎಂದಿಡುವಿ ಅ.ಪ.

ಏನು ಕೊಟ್ಟರು ಕೊಡು ದಾನವಂತಕ ಎನ್ನ
ಜ್ಞಾನದಲಿ ನೀನಿತ್ಯ ನೆಲಸಿ ನಲಿಯೊ
ಧೇನುವತ್ಸದ ತೆರದಿ ನೀನೆನಗೆ ಹಿತತೋರು
ನಾನೊಲ್ಲೆ ಸುರಲೋಕ ನಿನ್ನೊಲಿಮೆ ಇಲ್ಲದಿರೆ ೧

ಮರುವೆಂಬ ಮಾರಿಯನು ಪರಿಹರಿಸು ಪರಿಪೂರ್ಣ
ಸುರಿ ನಿನ್ನ ಕರುಣರಸ ಪ್ರಾಣನಾಥ
ಸರ್ವೇಶ ನೀನೆಂದು ಪರತಂತ್ರ ನಾ ಸತತ
ಶರಣನ್ನ ದಣಿಸುವದು ಘನವೇನೊ ಹರಿಯೆ ೨

ಕೋಟಿಕಾಲ ನರಕವಾಸಿಯಾದರು ಎನಗೆ
ನೀಟುಗತಿ ದೊರೆವುದೇ ನೀನೊಲಿಯದಿರಲು
ಸಾಟಿಯಿಲ್ಲದ ದೈವ ಜಯೇಶವಿಠಲ
ನಾಟಿ ಹಿರಿಯರ ಕರುಣ ನೀನಾಗಿ ಕೃಪೆಮಾಡು ೩

## ೫೯

ನಿನ್ನ ಮರೆದಿಹ ಜನಕೆ ಮಂಗಳವು ಎಂತೋ ಪ

ಪೂರ್ಣಮಂಗಳ ಶರಧಿ ಗೋಪಾಲ ಚಿನ್ಮಯನೆ ಅ.ಪ

ಎದೆ ಭುಗಿಲು ಎನ್ನುವುದು ಮದದ ಮನುಜರ ನೋಡಿ
ವಿಧಿ ಬರಹ ತಿಳಿಯದೆ ಸರ್ವಜ್ಞರಂತೆ
ಮದ ಮತ್ಸರದಿಂದ ಆಯುವ ಕಳೆಯುತ ಮೋದ
ಪದವಿ ಬಯಸುವ ಮನುಜ ಪಶುರಾಸಿ ನೋಡಯ್ಯ ೧

ತನ್ನಾದಿ ಕೊನೆಗಾಣ ಘನ್ನ ಮೋಹದಿ ಮೆರೆವ
ಭಿನ್ನ ಸುಖಮೂಲನ್ನ ಸ್ವಪ್ನದಲಿ ಅರಿಯ
ತನ್ನ ವಶಮೀರಿ ಬಹು ಸುಪ್ತಿಯಲಿ ಪೊಂದುವ
ಇನ್ನು ಮರಿಯನು ಮನುಜ ತನ್ನ ಸ್ವಾತಂತ್ರ್ಯವ ೨

ನಿರುತ ಮೃತ್ಯೋವದನ ಸ್ಥಿತನಾಗಿ ಭೋಗಗಳ
ಪರಿಪರಿ ಹಾರೈಪ ಸತತ ಬಿಡದೆ
ಬರದು ಬಯಸಿದ ಸುಖವು ಒತ್ತಿ ಬರುವುದು ದುಃಖ
ಮರತು ಈ ಪರಿಸ್ಥಿತಿಯ ಕರ್ತ ನಾನೆಂಬುವನು ೩

ಅಜ್ಞಾನ ತಿಮಿರದಲಿ ಪ್ರಾಜ್ಞ ತಾನೆಂಬುವನು
ಸುಜ್ಞಾನ ಪಥ ಸುದ್ದಿ ಸ್ವಪ್ನದಲಿ ಅರಿಯ
ಜಿಜ್ಞಾಸೆಗೊತ್ತಿಲ್ಲ ಭವಪ್ರವಹ ಪೊಂದಿಹನು
ಪ್ರಜ್ಞೆ ಇಲ್ಲದ ಪ್ರಾಜ್ಞಗೆಂತಹುದೊ ಶುಭಪ್ರಾಪ್ತಿ ೪

ರೋಗರುಜಿನದಿ ಜೀವವಾಗರವೆ ವಿರೂಪಹುದು
ಬಾಗನೊ ಭಗವಂತಗಂಜಿ ಮೂಢ
ಯೋಗೀಶರೊಂದ್ಯ ಶ್ರೀ ಜಯೇಶವಿಠಲ
ಹ್ಯಾಗಪ್ಪ ಈ ಜನಕೆ ಕಲ್ಯಾಣಸಂಪದವು ೫

## ೬೦

ನೀಯೆನ್ನ ಸದ್ಭಾಗ್ಯ ಆನಂದ ನಿಧಿಯೊ ಪ

ಮಾಯೇಶ ಮಧುವೈರಿ ತಾಯಿಯಂದದಿ ಕಾಯೊ ಅ.ಪ

ಏನಾಗುವ ಪ್ರೀತಿ ನಿನ್ನಿಂದ ಎನಗಯ್ಯ
ಜ್ಞಾನಾದಿ ಆನಂದ ಸುಗುಣ ಸಿಂಧು
ದೀನ ಬಾಂಧವ ನಿನ್ನಧೀನದವ ನಾನಯ್ಯ
ನೀನೆನ್ನ ನಿಧಿ ನಿತ್ಯ ಪವಮಾನ ಹೃತ್ಸದನ ೧

ವಿದ್ಯ ಬುದ್ಧಿ ಜ್ಞಾನ ಮನಕರಣ ಶಕ್ತಿ
ಸದ್ಧೈರ್ಯ ಸುಖನಿಧಿಯು ನಿರ್ಭೀತ ಪದವಿ
ಅದ್ವಯನೆ ನೀನೆನಗೆ ಅನಿಮಿತ್ತ ಬಂಧು ಹರಿ
ಸಿದ್ಧಿಸೈ ಈ ಜ್ಞಾನ ಸರ್ವಕಾಲದಿ ದೇವ ೨

ನಾನು ನನ್ನದು ಎಂಬ ದೋಷದ ಮಕರಿ
ಗಾನೆ ಸಿಕ್ಕಿದ ತೆರದಿ ಮೊರೆಯುತಿಹೆನೊ
ದಾನವಂತಕನೆ ಶ್ರೀ ಜಯೇಶವಿಠಲ
ದೀನ ಕರಿಯನು ಪೊರೆದ ತೆರದಿ ಸಲಹೊ ಎನ್ನ ೩

## ೬೧

ನೀ ಕೊಟ್ಟಿದುಣುವಲ್ಲಿ ಭಕ್ತಿ ಹರುಷ ಪ

ಶ್ರೀಕಾಂತ ನೀಡೆನಗೆ ಸಾಕು ಬೇಕೆನ್ನಿಸದೆ ಅ.ಪ.

ನಾ ಬಲ್ಲೆನೆ ಎನ್ನ ಹಿತಾಹಿತಗಳ ಬಗೆಯ
ನೀ ಬಲ್ಲ ಸರ್ವಜ್ಞ ನಮ್ಮ ಕ್ಷೇಮ

ನೀ ಬಂಧು ಅನಿಮಿತ್ತ ಅನಂತ ಕಾಲಕ್ಕೂ
ಆ ಬ್ರಹ್ಮಸ್ತಂಭಾಂತ ಸಂಸಾರಿ ಸರ್ವೇಶ ೧

ಕಂಸಮರ್ದನ ಎನ್ನ ಸಂಶಯಗಳಿಯಯ್ಯ
ಹಂಸ ಸದ್ಗುಣ ಪೂರ್ಣ ಪುರುಷ ಶ್ರೀಶ
ಹಿಂಸೆಗಳ ಪರಿ ಹರಿಸಿ ನಿನ್ನ ಜ್ಞಾನವ ನೀಡೊ
ಸ್ವಾಂಶಿಗಳ ಗುಣರೂಪ ಕ್ರಿಯದಿಂದ ದೇವ ೨

ನಿನಗಿಂತ ಹಿತರ್‍ಯಾರೊ ನಿತ್ಯ ಮಿತ್ರನೆ ನಮಗೆ
ಅನುಗಾಲ ಸಲಹುವಿ ತಾಯಿಯಂತೆ
ಬಿನಗು ದೈವಗಳಳಿವ ಜಯೇಶವಿಠಲ
ಮನತೊಳೆದು ಪ್ರತಿಫಲಿಸು ನಿತ್ಯ ಮಂಗಳ ಮೂರ್ತಿ ೩

ನೀನಿತ್ತ ಭೋಗಗಳು ನಿನಗೊಪ್ಪಿಸುವೆನೆನಲು
ದೀನ ಜನ ಮಂದಾರ ನಿನ್ನ ಮನಕೆ
ಏನು ಕಾರಣ ಬರದು ಆನಿವರದನೆ ಕೇಳೋ
ಪ್ರಾಣಪತಿ ಜಯೇಶವಿಠಲನೆ ಕರುಣಾಬ್ಧಿ ೪

## ೬೨

ನೀ ಬುದ್ಧಿ ಕೊಡದಿರಲು ಮನುಜ ಪಶುವೊ ಜೀವ ಪಶುವೊ ಪ

ಶ್ರೀ ಭೂಮಿ ದುರ್ಗೇಶ ಗೋವಿಂದ ಪರಿಪೂರ್ಣ ಅ.ಪ

ಜಡಜನ್ಮದಿಂದಲೆ ದ್ವಿಜ ಜನ್ಮ ಬಂದಿಹುದು
ಒಡೆಯಾ ನಮ್ಮೆತ್ನವೇ ಸತ್ಯ ಪೇಳೊ
ಕಡುನಿದ್ರೆಯಲಿ ಜೀವ ನಿಶ್ಚೇತನಾಗಿರಲು
ಬಿಡದೆ ದಿನದಿನದಲ್ಲಿ ಎಚ್ಚರಿಕೆ ಯಾರಿಂದ ೧

ಸೃಷ್ಟಿಗೆ ಬರಲಿನ್ನು ಜೀವ ಯತ್ನವು ಉಂಟೆ
ಸೃಷ್ಟಿ ಸ್ಥಿತಿ ಲಯ ಕರ್ತ ನೀನೆ ತಿಳಿಯೊ
ಮೊಟ್ಟ ಮೊದಲಿಗೆ ನಿನ್ನ ವಶನಾಗಿ ನಾನಿರಲು
ಸೃಷ್ಟಿಯಲಿ ನಮ್ಮೆತ್ನ ಕಲ್ಪಿಸುವುದುಂಟೆ ೨

ಇಂತಿರಲು ನಿಜತತ್ವ ಎಂಥ ಶಕ್ತಿಯು ನಮಗೆ
ಸ್ವಾಂತ ಮಂಗಳ ಸುಗುಣ ನಿಧಿಯೆ ಪೇಳೊ
ಭ್ರಾಂತಿ ಜೀವನ ಬಿಡಿಸಿ ಜಯೇಶವಿಠಲ
ಶಾಂತಿ ಪಾಲಿಸು ನಮಗೆ ಅಂತರಾತ್ಮಕ ದೇವ ೩

## ೬೩

ಪತಿತ ಪಾವನರಂಗ ಸತತ ಕಾಯೊ
ಗತಿಯಾರು ನಿನ್ನುಳಿದು ಶ್ರುತಿವಿನುತ ಗೋಪಾಲ ಪ

ಆದಿಮೂಲನು ನೀನು ಆದಿರಹಿತನೆ ಸ್ವಾಮಿ
ಸಾಧ್ಯ ಸಾಧಕ ಸೇವ್ಯ ಸೇವಕನ ಕೃಷ್ಣ
ಭಾದ್ಯ ಭಾಧಕ ರಮಾರಾಧ್ಯ ಚಿತ್ಸುಖ ಸುಖ ಸಿಂಧು
ಕಾದುಕೋ ನಿನ್ನವನ ಆದಿರೋಗವ ಕಳೆದೂ ೧

ನಾರಿ ದ್ರೌಪದಿ ಮಾನ ಕಾಯ್ದ ವಿಖ್ಯಾತನೆ ಶೌರಿ
ಕ್ರೂರ ನಕ್ರನ ಕೊಂದು ಕರಿಯ ಪೊರೆದೆ
ಹಾರಿ ಹಾವಿನ ಹೆಡೆಯ ಮೆಟ್ಟಿ ನರ್ತನಗೈದೆ
ಕ್ರೂರ ಫಣಿಯನು ಪೊರೆದ ಅಕ್ರೂರ ಸನ್ನುತ ಪಾಹಿ ೨

ಪೋತಧ್ರುವ ಪ್ರಹ್ಲಾದ ಪುಂಡರೀಕರ ಪಾಲ
ಖ್ಯಾತ ಅಜಮಿಳನ ವಿಜಯಸೂತ
ಭೀತಿ ರಹಿತನ ಮಾಡು ಮಾಶತರೀಶ್ವನ ದೇವ
ದಾತ ಜಯೇಶವಿಠಲ ನೀ ಅಭಯ ಪಾಲಿಸೊ ದೊರೆಯೆ ೩

## ೬೪

ಪರಮಪರುಷನೆ ಕೃಷ್ಣ ಕಣ್ತೆರದು ನೋಡೊ ಪ

ಶಿರಿ ಅರಸ ದಯಸಿಂಧು ಶ್ರಾವ್ಯಮಂಗಳ ಕೀರ್ತಿ ಅ.ಪ.

ದ್ವಿಜಗಮನ ವೃಜಿನಹರ ಭುಜಗತಲ್ಪನೆ ದೇವ
ಅಜತಾತ ಗಜವರದ ಕುಜ ನಿವಾರಣನೆ
ಭಜನೆ ಪಾಲಿಸು ಎನ್ನ ವಿಮಲ ಮನದಲಿ ನಿಂತು
ಋಜು ಪುಂಗವರ ದೈವ ನಿರ್ಜರರ ಬಾಂಧವನೆ ೧

ಒದ್ದವಗೆ ಶಿಕ್ಷಿಸದೆ ಬೈದವಗೆ ಗತಿ ಇತ್ತೆ
ನಿರ್ದೋಷ ಗುಣಪೂರ್ಣನೆಂದು ಶ್ರುತಿ ಸಾರುತಿದೆ
ನಿದ್ದೆ ಮಾಡುವಗೊಲಿದಿ ಮುಕ್ತಿಯನಿತ್ತೆ
ಯುದ್ಧದಲಿ ಶರದಿಂದ ಹೊಡೆದವಗೆ ನೀನೊಲಿದೆ ೨

ಶುದ್ಧ ಆನಂದಾಬ್ಧಿ ಜಯೇಶವಿಠಲನೆ
ಮಧ್ವ ಮುನಿದೈವ ಸಿದ್ಧರೊಡೆಯ
ಉದ್ಧವನ ಗುರು ಸುಧಾಮ ಮಿತ್ರನೆ ಮನ
ತಿದ್ದಯ್ಯ ಜ್ಞಾನ ನಿನ್ನಲ್ಲಿ ನಿಲುವಂತೆ ೩

## ೬೫

ಪೂರ್ಣ ಲಕ್ಷ್ಮೀರಮಣ ನಿತ್ಯ ವಿಭವ ಪ

ಪೂರ್ಣ ಸದ್ಗುಣವನಧಿ ಆನಂದಮಯ ಬಾರೊ ಅ.ಪ

ನಿನ್ನಲ್ಲಿ ನಾನಿಹೆನು ನನ್ನಲ್ಲಿ ನೀನಿರುವಿ
ಇನ್ನು ಈ ಸ್ಮೃತಿ ನಿತ್ಯ ಇತ್ತು ಪೊರೆಯೊ

ಧನ್ಯ ಮಾನ್ಯರ ಸಂಗ ಸತತ ಪಾಲಿಸು ದೇವ
ಭಿನ್ನ ಸ್ಮೃತಿ ದುಸ್ಸಂಗ ಎಂದೆಂದು ಕೊಡದಿರು ೧

ಶಿರ ಮನಸು ನಿನ್ನಂಘ್ರಿ ನಿನ್ನ ವರ ಪದ ಪದ್ಮ
ನಿರುತ ಪೊಂದಿಹ ಪದವಿ ಪಾಲಿಸೆನಗೆ
ಮರುತ ಮಂದಿರ ಮಹಾ ಕರುಣಾರ್ಣವನೆ ಶೌರಿ
ಗಿರಿಜೇಶಸಖ ಯನ್ನ ಹೃತ್ಕಂಜಮನೆ ಮಾಡು ೨

ನಿನ್ನ ಗರ್ಭದಿ ಇರುವ ನಿರ್ಭೀತಿ ಸುಖ ನೀಡು
ಮನ್ನದಲಿ ನೀ ಕೂಡು ಜಯೇಶವಿಠಲ
ಧನ್ಯ ಭಕ್ತರು ಮಾಳ್ಪ ಭಕ್ತಿ ವಿಧಿ ಪೂಜೆಗಳ
ಎನ್ನಲ್ಲಿ ತೋರಯ್ಯ ಹಿರಿಯರ ಪುಣ್ಯವನಿತ್ತು ೩

## ೬೬

ಭಕ್ತಿಯಲಿ ತನುಮನವು ಸತತ ಬಗ್ಗಿರಲಯ್ಯ
ಭುಕ್ತಿಯೆ ಮಹಾಭಕ್ತಿ ನೀಡು ಎನಗೆ ಪ

ಯುಕ್ತಿ ಶಕ್ತಿಗಳೆಲ್ಲ ಬಿಡದಿರಲಿ ತತ್ವಾದ
ಶಕ್ತಿಯನು ಎಂದೆಂದು ಗುಣಪೂರ್ಣ ನಿಧಿಯೆ ಅ.ಪ

ಇಹಭೋಗ ಬಿಡಿಸಯ್ಯ ಮಹದಾದಿ ದೇವೇಶ
ಗುಹಪಿತನಸಖ ನರನಸೂತ ಬಂಧು
ಮುಹುರ್ಮುಹು ಪ್ರಾರ್ಥಿಸುವೆ ಮಹಿದಾಸ್ಯ ಹರಿದಾಸ್ಯ
ಮಹಪದವಿ ಕರುಣಿಸಯ್ಯ ಮರುತ ಮಂದಿರ ವಿಭುವೆ ೧

ಪಂಚಬೇಧ ಜ್ಞಾನ ಅನುಷ್ಠಾನದಿ ಇರಲಿ
ಚಂಚಲಿಲ್ಲದ ಭಕ್ತಿ ಇತ್ತು ಮೆಚ್ಚಿ
ವಂಚಿಸದೆ ಸಂಸಾರ ಯಾತ್ರೆಯಲಿ ಒಡನಾಡು
ಪಂಚಾತ್ಮ ಜಯೇಶವಿಠಲನೆ ಮದ್ಬಿಂಬ ೨

## ೬೭

ಭಾವದಲ್ಲಿಯೆ ಪೊರೆಯೊ ದೇವ ದೇವ ಪ

ಜೀವೋತ್ತಮರಸ ದೇವ ಗೋಪಾಲಕ ಅ.ಪ

ಸಂದೇಹ ಭೀತಿಯೊಳ್ ನೊಂದೆನೊ ಬಹುಕಾಲ
ಗಂಧವಾಹನ ವಂದ್ಯ ಸರ್ವ ಬಂಧೊ
ಬಂಧನವ ಬಿಡಿಸಲು ಭವ ಬೊಮ್ಮ ಸುರರಿಗೆ
ಒಂದಿಷ್ಟು ವಶವಲ್ಲವೆಂದು ದಯ ಸಲ್ಲಿಸೊ ೧

ಒಳಗಿನಾ ಅಘಮೂಲವಳಿಯದೆ ಇಷ್ಟಾರ್ಥ
ಮಳೆಗರೆದರೇನೊ ಗುಣವ ಹೊಂದೆ
ಹಲುಬಿ ಬೇಡುವುದೊಂದು ಒಲಿದು ಕೊಡುವುದೊಂದು
ಫಲ ಬೇಧವಾದರೆ ಮನ ನಂಬಿಸುವುದೆಂತೊ ೨

ಹರಿ ನಿನ್ನ ಇಚ್ಛೆಗೆ ಎದುರಿಲ್ಲವಾದರೆ
ಶರಣ ಸುರಧೇನು ಖರೆಯಾದರೆ
ನೆರೆ ನಂಬಿದೆ ನಿನ್ನ ಜಯೇಶವಿಠಲ
ಸುರರು ಜಯವೆಂಬಂತೆ ಹರಿಕೆಯ ಸಲಿಸೊ ೩

## ೬೮

ಭಾವವೇ ಕಾರಣವೊ ಭವಕೆ ದೇವ ಪ

ಭಾವಜಾಪಿತ ನಿನ್ನ ಭಾವ ಬಿಡದವ ಧನ್ಯ ಅ.ಪ.

ಭಾವಸೂತ್ರದಿ ಸಿಕ್ಕ ಬರಿ ಬೊಂಬೆ ಜಗವಯ್ಯ
ಭಾವಧಾರಕ ನೀನು ಎನ್ನಿಂದಲೇನಹುದೊ ೧

ಎಂತು ನೀ ಕುಣಿಸಿದರೆ ಅಂತು ಕುಣಿವುದೊ ಜಗವು
ತಂತ್ರ ನಿನ್ನದು ದೇವ ಜಾವ ಜಾವದಿ
ಭ್ರಾಂತಿ ರೋಗವ ನೀಗಿ ಶಾಂತಿ ಪಾಲಿಸು ಹರಿಯೆ
ಸ್ವಾಂತರದಿ ಸಂತತ ದರುಶನವ ಕೊಟ್ಟೆನಗೆ ೨

ವಿಷಯ ಸಂಗವ ಬಿಡಿಸು ಹೃಷಿಕೇಶ ಮೃಡಮಿತ್ರ
ವಿಷಮಗತಿ ಪರಿಹರಿಸು ಪ್ರಾಣಮನದ
ವೃಷಭಾದ್ರಿಪಸಖ ಜಯೇಶವಿಠಲನೆ ಕರುಣಾಬ್ಧಿ
ವರ್ಷಿಸೊ ಕೃಪೆ ವೃಷ್ಟಿ ಮದ್ಬಿಂಬಗಿದು ವಿಹಿತ ೩

## ೬೯

ಮಧುಹರನಿಗರ್ಪಿತವು ಸರ್ವಕರ್ಮ ಪ

ಉದಯಾದಿ ಶಯನಾಂತ ಕೃತ ಕರ್ಮ ಅನುಭವವು ಅ.ಪ

ಸ್ಮೃತಿ ವಿಸ್ಮೃತಿಯಲ್ಲಿ ಕೃತ ಉತ್ತಮಾಧಮ ಕರ್ಮ
ಮತ್ತೆ ಅನುಭವಿಸಿದ ಸುಖ ದುಃಖಗಳಿಗೆ
ಚಿತ್ತ ನಿನ್ನದು ಮೂಲ ಸರ್ವ ಸ್ಥಿತಿಗತಿ ಧರ್ಮ
ವೃತ್ತಿಗಳಿಗನವರತ ಸತ್ಯ ಸಂಕಲ್ಪನೆ ೧

ನೀನಮ್ಮನಿಟ್ಟಪರಿ ನಿನ್ನಿಷ್ಟವಾಗಿರಲು
ಎನ್ನಿಷ್ಟವೆನಲ್ಯಾಕೊ ಪ್ರೇಷ್ಠತಮನೆ
ವಾಣೀಶ ಹರಸುರರು ನಿನ್ನ ಪ್ರೀತಿಗಾಗಿ
ಏನು ಕೊಟ್ಟರು ಮುದದಿ ಉಂಡು ನಿನಗರ್ಪಿಪರೊ ೨

ಅಧಿಕಾರಿ ನಾನಲ್ಲದದರಿಂದ ಬೆದರುವೆನು
ಮದನನಯ್ಯನೆ ದಯದಿ ಮನ್ನಿಸೆನ್ನ
ಉದಯಾಸ್ತ ಕೃತಕರ್ಮ ಜಯೇಶವಿಠಲ
ಮುದಖೇದಗಳು ನಿನ್ನ ಪ್ರೀತಿಗೊದಗಲೋ ದೇವ ೩

## ೭೦

ಲಕುಮಿ ಸಾಮ್ರಾಜ್ಯ ಶರಧಿಗಮೃತಾಂಶು ನೇತ್ರ ಪ

ಲಕುಮಿ ಮಾಂಗಲ್ಯ ಕಟ್ಟಿದನೆ ಜಗದೇಕ ಸೂತ್ರ ಅ.ಪ.

ನಿತ್ಯ ಕಲ್ಯಾಣ ಸಾಗರನೆ ಶಶ್ವದೇಕ
ಸತ್ಯ ಕಾರುಣ್ಯ ಸಿಂಧು ಕೊಡು ಭಕ್ತಿಪಾಕ
ಭಕ್ತವತ್ಸಲನೆ ಕೃಪಾಪೂರ್ಣಾವಲೋಕ
ದೈತ್ಯದಲ್ಲಣನೆ ದುರಿತ ತಿಮಿರಾರ್ಕ ೧

ನಿರುತ ಪರಿಪೂರ್ಣ ಸೌಲಭ್ಯ ಸುಗುಣವನಧಿ
ನಿರವದ್ಯ ನಿತ್ಯ ಸ್ವಾನಂದ ಪೂರ್ಣ ಮೋದಿ
ಕರೆವ ಭಕ್ತರಾತುರಕೆ ಬರುವನವಸರದಿ
ಗರೆವ ಸರ್ವಾರ್ಥ ಸಲಹಿ ಶರಣರನು ಛಲದಿ ೨

ವಿಮಲ ಲಾವಣ್ಯ ಶೃಂಗಾರ ಸಿಂಧುಕಾಯ
ಅಮಿತ ಉತ್ತಮ ಜಯೇಶವಿಠಲರಾಯ
ಕಮಲಭವ ವಾಯು ರುದ್ರಾದಿ ದೇವ ಧ್ಯೇಯ
ಅಮೃತಾತ್ಮ ದೇಹಿ ಅಮೃತ ಸೌಭಾಗ್ಯ ಸ್ವೀಯ ೩

## ೭೧

ಶಿಲೆಯ ನಾರಿಯ ಮಾಡ್ದ ಹನುಮ ನಿಲಯಾ ಪ

ನೆಲೆಯಿಲ್ಲದಾ ಮಹಿಮ ಶ್ರೀರಾಮ ಗೋಚರಿಸೊ ಅ.ಪ

ಶ್ರುತಿಗಗೋಚರ ನೀನು ಸರ್ವೇಶ ಸ್ವಾತಂತ್ರ ನೀನು
ಕೃತಿಮಗ್ನ ಪಶು ನಾನು ಗೋಪಾಲದೇವ

ಮೃತಿ ಭೀತಿ ವಶನಾಗಿ ನೆಲೆತಪ್ಪಿ ಪೋಗುತಿಹೆ
ಅತಿಭಯದಿ ನಡುಗುವೆ ಹೇ ಶ್ರುತಿನಾಥ ಪೊರೆ ಎನ್ನ ೧

ಪರಮ ಮಂಗಳ ಅನಿಲದೇವ ಮಂದಿರ ಶ್ರೀಶ
ಪರತತ್ವ ಪರಮಾತ್ಮ ಪಿಡಿಯೊ ಕರವ
ಮರುವೆಂಬ ಮಾರಿಯನು ನಿರ್ಮೂಲ ಮಾಡಯ್ಯ
ದೊರಿ ನಿನ್ನ ಸ್ಮೃತಿ ಸತತ ಅಚ್ಛಿನ್ನವಾಗಿರಲಿ ೨

ನೀನು ನಿನ್ನವರಿಂದ ಕೂಡಿ ತನುರಥದಲ್ಲಿ
ಭಾನು ಕೋಟಿ ತೇಜ ಶ್ರೀ ಕ್ರೀಡೆಮಾಳ್ಪ
ಜ್ಞಾನ ಪಾಲಿಸು ಎನಗೆ ಜಯೇಶವಿಠಲ
ಆನಿ ಅಜಮಿಳ ಅನಿಮಿತ್ತ ಬಾಂಧವನೆ ೩

## ೭೨

ಶ್ರೀ ವೇಣುಗೋಪಾಲ ಶುಕಮುನಿಯ ಬಿಂಬ ಪ

ಧ್ಯಾನ ಪಾಲಿಸು ನಿನ್ನದೀನಭವದಿ ನೆಲಸಿ ಅ.ಪ.

ಜ್ಞಾನ ಮನ ದಶ ಕರಣ ಪ್ರಾಣ ಪಂಚಕರಲ್ಲಿ
ಭಾನುತೇಜನೆ ನೆಲಿಸಿ ತಿಳಿಸದಲೆ
ನಾನಾ ಬಗೆಯಲಿ ದಣಿಸಿ ನೀನಾಟ ಆಡುತಿಹೆ
ದೀನನ ಮೊರೆ ಕೇಳಿ ಮರವೆ ಬಿಡಿಸಿ ಪೊರೆಯೊ ೧

ಕೋಟಿ ಸೂರ್ಯರ ಕಾಂತಿ ಧಿಕ್ಕರಿಪ ಚಿನ್ಮಯನೆ
ಮಾಟ ಮಾಡದೆ ನಿನ್ನ ಲೀಲೆ ತೋರೊ
ನೋಟ ನಾಸಿಕ ಶ್ರವಣ ತನುಮನದಿ ಸಾಯುಜ್ಯ
ಬೇಟೆಯಲಿ ಇದ್ದೆನ್ನ ಕಣ್ಣು ಕಟ್ಟುವುದ್ಯಾಕೆ ೨

ಶತಕೋಟಿ ಬ್ರಹ್ಮಾಂಡ ಗತ ಜೀವಗಣಕಮೃತ
ಸತತ ಪಾಲಿಪ ಕರುಣ ನಿನದಲ್ಲವೇನೊ
ಹಿತಮಾಡು ಜಯೇಶವಿಠಲನೆ ಮದ್ಬಿಂಬ
ಪ್ರತಿಬಿಂಬ ಭಾವದಲಿ ಬೆಳೆಸೆನ್ನ ಉದ್ಧರಿಸೊ ೩

## ೭೩

ಶ್ರುತಿರಾಸಿ ಸನ್ನುತ ಸತತ ಸದ್ಗುಣಪೂರ್ಣ
ಪ್ರಥಮಾಂಗ ಸಂಪೂಜ್ಯ ಶರ್ವಮಿತ್ರ ಪ

ಪ್ರತಿ ಪ್ರತಿ ಕ್ಷಣ ನಿನ್ನ ಪತಿತಪಾವನ ಪಾದ
ಕ್ಕತಿ ದೈನ್ಯದಲ್ಲೆರಗಿ ಮೊರೆ ಇಡುವೆ ಪೊರೆಯೆಂದು ಅ.ಪ.

ಕೋರಿದರೆ ಮನಕರಗಿ ಹಾರಿ ಬರುವಿಯೆಂದು
ನಾರದರೆ ಮೊದಲಾದ ನಿಜಭಕ್ತರೆಲ್ಲ
ಸಾರಿಹರು ಸರ್ವೇಶ ಸಾರತಮ ಸರ್ವರೊಳು
ಘೋರ ಭವದಿಂದೆನ್ನ ಪೊರೆ ಎನಲು ಬರೆಯಂತೆ ೧

ಕೃಪೆಯಿಂದ ನೀ ನೋಡೆ ಬ್ರಹ್ಮಾಂಡ ದೋಷಗಳು
ಲುಪ್ತವಾಗುವುದಯ್ಯ ಒಂದೆ ಕ್ಷಣದಿ
ನಿಪುಣನಾಗುವನವನು ಇಹಪರ ನಿಧಿ ಒದಗಿ
ಅಪರಿಮಿತ ಸುಖ ಉಣುವ ಅಪ್ರತಿಮ ಕೀರ್ತಿಯು ೨

ಶಿರಿ ವಿಧಿ ಶಿವ ಶಕ್ತ ಸುರರಿಂದ ಸಂಸೇವ್ಯ
ಜಯೇಶವಿಠಲ ಕೀರ್ತಿಪೂರ್ಣಾ
ಪರಿ ಪರಿ ದೋಷಗಳು ಪರಮ ಕೃಪೆ ವೀಕ್ಷಣದಿ
ಪರಿಹರಿಸಿ ಬೆರೆ ಎನ್ನ ಪರಭಕ್ತಿ ನಿಧಿ ಇತ್ತು ೩

## ೭೪

ಸರ್ವಕ್ಕೂ ನೀ ಮೂಲ ಹರಿಯೆ ಕೇಳೊ ಪ

ದರ್ವಿ ಜೀವರ ಕೈಲಿ ಏನಾಹುದೆಲೊ ದೇವ ಅ.ಪ.

'ಆ' ಎನಲು ಶಕ್ತರೇ ಅಜಭವಾದಿಗಳಿನ್ನು
'ನೀ'ಯಾದರದಲ್ಲಿ ಚೇತನರು ಅವರು
'ನಾ'ಯಾತರವನಯ್ಯಾ ನಿನ್ನ ಮಾಯವ ಗೆಲಲು
ಆಯಾಸ ಮೀರಿದುದು ಶ್ರೀ ವರನೆ ದಯೆ ತೋರು ೧

ನಿನ್ನ ಚಿತ್ತಕೆ ಬಂದುದೇ ಹಿತವೆಂಬ
ಉನ್ನತ ಮತಿ ನೀಡು ಶರ್ವ ಬಿಂಬ
ಭಿನ್ನ ಭಾವಗಳೊಲ್ಲೆ ಅನಂತಗುಣವನಧಿ
ಮನದಲ್ಲಿ ನೀ ನಿಂದು ವಿಸ್ಮೃತಿಯ ಪರಿಹರಿಸು ೨

ತವರೂಪ ಧ್ಯಾನಲವ ಬಿಡದೆ ಪೊಂದಿರಲಿ
ನವಭಕ್ತಿ ನಿನ್ನಲ್ಲಿ ಅಚ್ಛಿನ್ನವಾಗಿ
ಪವಮಾನ ಪೂಜಿತ ಜಯೇಶವಿಠಲ
ಭವ ಕಡಲ ದಾಟಿಸೊ ನಿನ್ನವನೆಂದು ೩

## ೭೫

ಸರ್ವೇಶ ಸುಲಭತಮ ಶೌರಿ ನೀನು
ಸರ್ವ ಶ್ರುತಿ ಪಾದ್ಯ ಸರ್ವಾತ್ಮ ಶುಕ ಬಿಂಬ ಪ

ನಿತ್ಯ ವಸ್ತುವು ನೀನು ನಿತ್ಯರಲಿ ನೀ ನಿತ್ಯ
ನಿತ್ಯಸುಖ ಪರಿಪೂರ್ಣ ಸತ್ಯ ಕೃತ್ಯ

ಭೃತ್ಯಪಾಲಕರಲ್ಲಿ ಸಮರಿಲ್ಲ ನಿನಗಿನ್ನು
ಭಕ್ತವತ್ಸಲ ಎನ್ನ ಯುಕ್ತಿಯಲಿ ಕೈಪಿಡಿಯೊ ೧

ಕರ್ಮದಾಧೀನದಲಿ ಅಹಂಮಮ ಕರ ಪೊಂದಿ
ದುಮ್ಮನವ ಬೆಳೆಸಿದೆನೊ ಅವಶನಾಗಿ
ನಿರ್ಮಮರದೇವ । ತ್ವದಾಸ್ಯ ಪಾಲಿಸು ಎನಗೆ
ಕರ್ಮನಾಮಕ ನೀನೆ ಸದ್ಧರ್ಮಕಾರಕನೆ ೨

ಎನ್ನಲ್ಲಿ ನಿನ್ನ ಕ್ರಿಯ ಅನುಭವದಿ ತಿಳಿಸೆನಗೆ
ಅನ್ಯುಪಾಯವು ಇಲ್ಲ ಅಭಯಪದಕೆ
ಪೂರ್ಣಪ್ರಜ್ಞರ ಗುರುವೆ ಜಯೇಶವಿಠಲ
ಎನ್ನ ಮನ ಒಡಲಲ್ಲಿ ನಿನ್ನ ಮೂರ್ತಿಯ ತೋರೊ ೩

## ೭೬

ಸರ್ವೇಶ ಹರಿ ನೀನು ಸರ್ವಾತ್ಮ ಶೌರಿ ಪ

ಸರ್ವಮಂಗಳಮಯನೆ ವಿಧಿತಾತ ಮುದವೀತೊ ಅ.ಪ.

ಉದ್ಧವನ ಗುರುವರ್ಯ ನಿರ್ದೋಷ ಗುಣವನಧಿ
ನಿದ್ದೆ ಮಾಡುವಗೊಲಿದು ಮುಕ್ತಿ ಇತ್ತೆ
ಹದ್ದುಮೀರಿ ಭವದಿ ಬಿದ್ದು ಮೊರೆ ಇಡುತಿಹೆನೊ
ಹೃದ್ಧಾಮದಲಿ ನಿನ್ನ ದರುಶನವ ನೀಡಯ್ಯ ೧

ಮನದಲ್ಲಿ ಮಹಪೂಜೆಕೊಳ್ಳಯ್ಯ ಎನ್ನಿಂದ
ಪ್ರಣೀತಪಾಲಕ ಕೃಷ್ಣಪೂರ್ಣ ಪುರುಷ
ತೃಣಮೊದಲು ಬ್ರಹ್ಮಾಂಡ ಸರ್ವರಲಿ ಸ್ವಾತಂತ್ರ್ಯ
ಅನಿಲಾತ್ಮ ಆನಂದ ಖಣಿ ಕರುಣ ಮಾಡಯ್ಯ ೨

ಕೆಸರು ಕಳ್ಕಿದಜ್ಞಾನಕಳವಡುವುದೇ ನಿನ್ನ
ಅಸಮ ಮಂಗಳ ಸುಗುಣ ಶ್ರುತಿ ವಿನುತನೆ
ದಶಮತಿಯ ಮನದೈವ ನೀ ಕೂತು ಮನದಲ್ಲಿ
ವಿಶದ ತಿಳಿಮತಿಯಿತ್ತು ವೈಭವವ ತೋರೆನಗೆ ೩

ಜೀವಜಡರಲಿ ಪೊಕ್ಕಾಡುವೆ ಬಹುಲೀಲೆ
ಭಾವಸೂತ್ರದಿ ನಮ್ಮ ಕಟ್ಟಿ ಕುಣಿಸಿ
ಈ ವಿಧವ ಬಲ್ಲವರ ಮೇಲಾಗಿ ಪಾಲಿಸುವಿ
ತಾವೀಶರೆಂಬುವರು ಮುಳುಗುವರು ದುಃಖದಲಿ ೪

ದುಷ್ಟಜನ ಸಹವಾಸ ಅಷ್ಟತತ್ವಗಳಲ್ಲಿ
ವೃಷ್ಣೀಶ ಬಿಡಿಸಯ್ಯ ಬಂಧ ಕಡಿದು
ಇಷ್ಟಾನಿಷ್ಟ ಜೀವರಲಿ ನಿಂತು ನಟಿಸುವ
ಗುಟ್ಟುತೋರಿ ಜಯೇಶವಿಠಲನೆ ಕೃಪೆಮಾಡು ೫

## ೭೭

ಸಾಧನದ ಚಿಂತೆ ಎನಗ್ಯಾಕೊ ದೇವ
ಮಾಧವನೆ ನಿನ್ನ ನಾಮ ಧರಿಸಿಕೊಂಡಿರುವವಗೆ ಪ

ನಿನ್ನ ಚಿತ್ತಕೆ ಬಂದ ಅನುಭವವೆ ಸಾಧನವೊ
ಅನ್ಯಥಾ ಬೇಕಿಲ್ಲ ದೋಷರಹಿತ
ಎನ್ನ ಮನ ತನು ಕರಣತ್ರಯಗಳನು ನೀ ಮಾಳ್ಪೆ
ಅನ್ಯಸಾಧನವ್ಯಾಕೊ ಪಾವನ್ನ ಸಚ್ಚರಿತ ೧

ನಡೆವುದೇ ಯಾತ್ರೆಗಳು ನುಡಿವುದೇ ಸ್ತೋತ್ರಗಳು
ಬಿಡದೆ ನೋಡುವುದೆಲ್ಲ ನಿನ್ನ ಮೂರ್ತಿ
ಒಡನೆ ಕೇಳುವ ಶಬ್ದ ನಿನ್ನ ಮಂಗಳ ಕೀರ್ತಿ
ಪಡುವ ಭೋಗಗಳೆಲ್ಲ ನಿನ್ನ ಉಪಚಾರ ೨

ಪಾಪ ತೊಳೆವುದಕಿನ್ನು ದುಃಖ ಪ್ರಾಯಶ್ಚಿತ್ತ
ತಾಪ ಯೋಚನೆಗಳೆಲ್ಲ ತಪಸು ವಿಭುವೆ
ಗೋಪ ಚೂಡಾರತ್ನ ಜಯೇಶವಿಠಲ
ಈ ಪಾತ್ರದೊಳಗಿದ್ದು ನೀ ಮಾಳ್ಪ ಸಾಧನವೊ ೩

## ೭೮

ಹರಿ ನೀ ನೋಡದಿರೆ ಬಾಳಬಹುದೆ ಪ

ಸರುವ ಮೂಲನೆ ದೇವ ಪರಮಪಾವನ ಮಹಿಮ ಅ.ಪ.

ಜ್ಞಾನಮಯ ವಿಜ್ಞಾನ ಮಾನಿಗಳ ಹೆದ್ದೈವ
ದಾನವಾಂತಕ ದಿವಿಜ ಪ್ರಾಣಾಧಾರಿ
ದೀನ ಬಾಂಧವ ಹೃದಯ ವನಜ ಮಂದಿರ ಪೂರ್ಣಾ
ನಿನ್ನೊಹಿಸಿ ಮದ್ಧರ್ಮ ಕಾಣಿಸೊ ಕರುಣಾಬ್ಧಿ ೧

ಘೋರ ಕಲಿಮಲ ವ್ಯಾಪ್ತಿ ಮೀರಿಹುದು ಸಜ್ಜನರ
ಶ್ರೀರಮಣ ಶ್ರುತಿಧರ್ಮ ಜಗವೆಲ್ಲಿದೆಯಯ್ಯ
ಭಾರಕರ್ತನೆ ನಿನ್ನ ಆರಾಧಿಸದೆ ಜನರು
ಸ್ವಾರಾಧ್ಯರಾಗಿಹರು ಗತಿಯೇನೊ ಸುಜನಕೆ ೨

ಸರ್ವೋತ್ತಮನೆ ನಿನ್ನ ಕರ್ತೃತ್ವ ಳಿಸಲಿದು ಕಾಲ
ಸರ್ವಾತ್ಮ ಮರುದಾತ್ಮ ಜಯೇಶವಿಠಲ
ಪೂರ್ವ ದೇವರ ಗಮನ ಗೀರ್ವಾಣ ಮುನಿ ವಂದ್ಯ
ಶರ್ವಸನ್ನುತ ಶೌರಿ ರುಜುಮನವ ಕೊಡೆನಗೆ ೩

## ೭೯

ಹರಿಹರೀ ಎನ್ನ ದೋಷವಳಿಯೊ ಪ

ಕರಿವರದ ಕೃಪೆಮಾಡು ನಿತ್ಯಮಿತ್ರನೆ ಕೃಷ್ಣ ಅ.ಪ.

ಬೇಲಿ ಎದ್ದು ಹೊಲವ ಮೆದ್ದರೆ ಬ್ಯಾರಿನ್ನು
ಪಾಲಿಪರು ಯಾರೆಯ್ಯ ಶೀಲರೊಡೆಯ
ಫಾಲಾಕ್ಷಸಖ ನಿನ್ನ ಅಚುಂಬಿತ ಕಾರುಣ್ಯ
ಶ್ರೀಲಕ್ಷ್ಮೀ ಶ್ರುತಿ ರಾಸಿ ವರ್ಣಿಪರೊ ಗುಣನಿಧಿಯೆ ೧

ಯಾತನೆಲ್ಲಣ್ಣಾದೆ ಪೂತನಿಯ ಅಸುಹರನೆ
ಪಾತಕಕೆ ಕೊನೆಗಾಣೆ ಪಾರ್ಥಸೂತ
ಆತ್ಮಬಂಧುವೆ ಇನ್ನು ತಡಮಾಡೆ ತಡಿಲಾರೆ
ಪೂತನ ಮಾಡೆನ್ನ ಪ್ರಾಣೇಶ ಪ್ರಿಯಬಂಧು ೨

ದೋಷಪುಂಜನು ನಾನು ಶೇಷಶಯನನೆ ಬಲ್ಲ
ಪೋಷಕನು ನೀನೆಂದು ವೇದರಾಸಿ
ಘೋಷಿಪವು ಅನವರತ ಕಾಪಾಡು ಶ್ರುತಿವಾಕು
ದೋಷಕರ ಜಯೇಶವಿಠಲನೆ ಮೈದೋರು ೩

## ೮೦

ಬುದ್ಧಿಮಾನಿಯೆ ಎನ್ನ ಉದ್ಧರಿಸು ತಾಯೆ ಪ

ಶ್ರದ್ಧಾದೇವಿ ನಿನ್ನ ಕೃಪೆಯಾಗೆ ಹರಿ ನಲಿವ ಅ.ಪ.

ಮಧ್ವಮುನಿ ಮನದ್ಶೈವನತಿ ಮುದ್ದು ಪರಿಸರಳೆ
ವಿದ್ಯಾ ಅಸಾದ್ಯ ಕರುಣಾಬ್ಧಿ ದೇವಿ

ಪ್ರಧ್ವಂಸ ಮಾಡು ಮಮ ಹೃದ್ರೋಗ ಮೂಲ ಪ್ರ
ಬುದ್ಧರಲಿ ಪದವಿತ್ತು ಉದ್ಧಾರ ನೀ ವಹಿಸು ೧

ನಿನ್ನ ಕೃಪೆಯಮೃತ ರಸವಿನ್ನು ದೊರೆಯಲು ನಾವು
ಧನ್ಯ ಧನ್ಯರು ಮಾತೆ ಭಕ್ತಿಮೂರ್ತೆ
ಪನ್ನಗ ವಿಧಿ ರುದ್ರಸೇವ್ಯ ಪದ ಪುಷ್ಕರಳೆ
ಪುಣ್ಯ ಪುರುಷ ಸಮೀರ ಸಂತ ಸಂಸ್ತುತೆ ಪಾಹಿ ೨

ನೀನೊಲಿಯದ ಜೀವ ಏನು ಸಾಧನೆ ಮಾಡೆ
ಪ್ರಾಣವಿಲ್ಲದ ದೇಹ ಶೃಂಗರಿಸಿದಂತೆ
ವಾನರ ಪ್ರತಿಬಿಂಬ ಜಯೇಶವಿಠಲ
ತಾನೊಲಿಯ ಅವಗೆಂದು ನಿನ್ನವರ ಕರವಶನು ೩

## ೮೧

ಸಂಕರ್ಷಣನ ರಾಣಿ ವೀರದುರ್ಗೆ
ಕಿಂಕರರ ಪಾಲಿಸು ಖೂಳ ಜನ ಸಂಹಾರಿ ಪ

ಅಜ ಜನನಿ ಅಘನಾಶಿ ಅಮಿತ ಸದ್ಗುಣರಾಶಿ
ಕುಜನಾರಿ ಸುಗನಾಪ್ತೆ ಕಾಯೆ ತಾಯೆ ಅ.ಪ

ಮನದ ಖಳರಾ ಭೀತಿ ಬಹು ವೇಗ ಕೇಳಮ್ಮ
ಪ್ರಣಿತ ಜನರ ಪಾಲೆ ಕೊಲ್ಲೆ ಅವರ
ತನುಮನದಿ ನೆಲೆಸಿದ್ದು ಅನುದಿನವು ಪೊರೆ ನಮ್ಮ
ಗುಣಪೂರ್ಣ ನಿನ್ನ ಪತಿಧ್ಯಾನ ಒದಗಿಸಿ ನಲಿಯೆ ೧

ಪತಿವ್ರತವು ನೀ ಧರಿಸಿ ಪತಿವೈರಿಗಳ ಅರಿವೆ
ಪತಿಹಿತರ ಕಾವ ಕಂಕಣವ ಕಟ್ಟಿ
ಪತಿ ಪ್ರೀತಿಪಡಿಸುವೆ ವೀರವ್ರತ ದೀಕ್ಷೆಯಲಿ
ಪತಿತಪಾವನೆ ನೀನೆ ಕಾವಲಮ್ಮಾ ನಮಗೆ ೨

ಕಲಿಯಲ್ಲಿ ಖಳಕೂಟ ಬಲು ಪ್ರಬಲ ಅತಿಕ್ರೂರ
ಉಳಿಯಲೀಯರು ದೇವಿ ಸುಜನರನ್ನು
ಬಲುಹೀನರೆಂತೆಂದು ಬಲು ಬಾಧೆಪಡಿಸುವರು
ಪ್ರಳಯಗೈಸವರನ್ನು ಪಾಲಿಸು ನಿನ್ನವರ ೩

ಜ್ಞಾನಮನ ತನುಕರಣ ಆಲಯದ ಅರಿಗಳ
ಆಸಕ್ತಚಾರಿಗಳ ಬಿಡದೆ ಮಡುಹಿ
ಆನಂದಮುನಿ ತಾಯೆ ಜಯೇಶವಿಠಲನ
ಆನಂದ ನಿಜಕರುಣ ಬೆರಿಸಮ್ಮ ನಮ್ಮಲ್ಲಿ ೪

## ೮೨

ಕಪ್ಪುಗೊರಳ ಬಿಂಬ ಅಪ್ಪ ಸಲಹೋ ಪ

ಕ್ಷಿಪ್ರ ಕೃಪೆ ಪುಟ್ಟಿಸ್ಯೆ ಅಪ್ರತಿಮ ದಯವನಧಿ ಅ.ಪ.

ದಿವಿಜ ದಾನವ ಗಣವ ತೃಣ ಮಾಡಿ ಆಳುವ
ಪವನಾಂಶ ಪಾವನ್ನ ಜ್ಞಾನ ಶರಧಿ
ನವವಿಧಾ ಹರಿಭಕ್ತಿ ರಸಸಿಂಧು ವೈರಾಗ್ಯ
ಸೌಭಾಗ್ಯನಿಧಿ ಮನದಿ ನೆಲೆಯಾಗಿ ನಿಲ್ಲಯ್ಯ ೧

ನಿತ್ಯಮಂಗಳೆ ಲಕ್ಷ್ಮೀಧವ ಶೌರಿ ಮೂರ್ತಿಯನು
ನಿತ್ಯೋತ್ಸವದಿ ಹೃದಯ ಕಮಲದಲ್ಲಿ
ನಿತ್ಯ ಪೂಜಿಪ ಹರಿಯ ಭೃತ್ಯ ಮಸ್ತಕ ಮಣಿಯೆ
ಚಿತ್ತದಲಿ ಕೂತೆನ್ನ ಹರಿಯ ತೋರಿಸು ಸ್ವಾಮಿ ೨

ಸಾರತಮ ಹರಿಯೆಂದು ಜಗಕೆ ತೋರಿದ ಗುರುವೆ
ಭಾರ ನಿನ್ನದೊ ಸ್ವಾಮಿ ಕಾಯೊ ಎನ್ನ
ಮಾರಪಿತ ಜಯೇಶವಿಠಲನ ಪೂರ್ಣೊಲಿಮೆ
ವಾರಿಧಿ ವಿಹಾರ ತವ ಎಡಬಿಡದೆ ಇರಿಸೆನ್ನ ೩

## ೮೩

ಭಾರತೀಶನೆ ಎನ್ನ ಭಾರ ನಿನ್ನದು ತಂದೆ
ಭೂರಿದಯ ಸಿಂಧು ಎಂದೆಂದು । ಗುರುವರ್ಯ
ಬಂದು ಕರುಣಿಸುವನು ಮದ್ಬಂಧೊ ೧

ಮಂಗಳಾತ್ಮನೆ ಎನ್ನ ಅಂಗದಲಿ ನೀನಿಂದು
ಪೊಂಗಳಧರನ ತೋರಯ್ಯ । ಅಜರಾಯ
ಭಂಗಬಡಲಾರೆ ಭವದೊಳು ೨

ನಾರಾಯಣನ ಪುತ್ರ ನಾರಾಯಣಗೆ ಮಿತ್ರ
ನಾರಾಯಣಾತ್ಮ ನಿರವದ್ಯ । ನೀಡಭಯ
ಕರುಣಾತ್ಮ ಗುರುವೆ ಒಲಿದಿಂದು ೩

ಕಾಮರೂಪನೆ ಹರಿಯನೇಮದಲಿ ಕಪಿಯಾಗಿ
ಆ ಮಹಿಮೆಗುಂಗುರ ಅರ್ಪಿಸಿ । ಅಗ್ನಿಯಲಿ
ತಾಮಸರ ಹುರಿದೆ ಪುರದಲ್ಲಿ ೪

ಮರಳಿ ಶರಧಿಯ ದಾಂಟಿ ಭರದಿ ರಘುಪತಿ ಚರಣ
ಸರಸಿಜದಿ ಚೂಡಾಮಣಿಯನ್ನು । ಒಪ್ಪಿಸಿ
ಹರಿ ಅಂಗ ಸಂಗ ಪಡೆದಯ್ಯ ೫

ಸಿಂಧುವನು ಬಂಧಿಸಿ ಬಂದ ವಿಭೀಷಣಗೆ
ಕುಂದದೆ ಅಭಯ ಕೊಡಿಸಿದೆ । ದಯಸಿಂಧು
ನಿಂದೆನ್ನ ಒಳಗೆ ಮುದವೀಯೊ ೬

ದೇವೇಶನಾಜ್ಞೆಯಲಿ ಜೀವೇಶ ಸಂಜೀವ
ಪರ್ವತ ತಂದು ಕಪಿಸೈನ್ಯ । ಎಬ್ಬಿಸಿ
ಮೊದಲೆಡೆಗೆ ಬಗೆದ ಕುಶಲಾತ್ಮ ೭

ದಶಶಿರನ ಕೊಲ್ಲಿಸಿ ವಸುಧಿಪುತ್ರಿಯ ತಂದು
ನಸುನಗುತ ರಾಮಚಂದ್ರಾಗೆ । ಒಪ್ಪಿಸಿ ವಿ
ಭೀಷಣಗೆ ರಾಷ್ಟ ಕೊಡಿಸಿದೆ ೮

ಪ್ರೇಮದಿ ಭರತನು ಸ್ವಾಮಿ ಬರಲಿಲ್ಲೆಂದು
ನೇಮದಲಿ ಕಾಯ ಬಿಡುತೀರೆ । ಉಳುಹಿದೆ ಶ್ರೀ
ರಾಮನಾಗಮನ ತಿಳುಹೀಸಿ ೯

ತುಷ್ಟನಾದೆನು ಹನುಮ ಇಷ್ಟ ನೀ ಬೇಡೆನಲು
ಗಟ್ಯಾಗಿ ಪಾದ ಪಿಡಿಯಲು । ಭಕ್ತಿಯಲಿ
ಪಟ್ಟಾಭಿರಾಮ ತನ್ನಿತ್ತ ೧೦

ಆಖಣಾತ್ಮಕಾಯನೆ ಅಕಳಂಕ ಗುಣಧಾಮ
ನಿಖಿಲಾತ್ಮ ಹರಿಯ ಪೂಜಿಪ । ದೃಢಮಹಿಮ
ಶ್ರೀಕೃಷ್ಣ ಭಕ್ತಾ ಕಲಿಭೀಮ ೧೧

ಶಿಶುಭಾವದಲಿ ನೀನು ಶತಶೃಂಗ ಗಿರಿವಡೆದು
ನಸುನಗುತ ಜನನಿಗಭಯವ । ನಿತ್ತಂಥ
ಪಶುಪಾಲ ಪರನೆ ಪೊರೆಯೆನ್ನ ೧೨

ದುರ್ಯೋಧನನ ತ್ರಾಣ ತಂತುಗಳ ಹರಿದಾಡಿ
ಸರ್ವೇಶ ಹರಿಗೆ ಪ್ರಿಯಮಾಡಿ । ನಲಿದಂಥ
ಸರ್ವಜ್ಞ ಭೀಮ ಬಿಡೆ ನಿನ್ನ ೧೩

ದುಶ್ಯಾಸನನ ಮಹಾದುಶ್ಶೀಲ ಸ್ಮರಿಸುತ್ತ
ಪಶುವಂತೆ ವಧೆಯ ಮಾಡಿದಿ । ರಣದೊಳು
ಸುಸ್ವಾದ ಗುಣಸಾರ ಮಹವೀರ ೧೪

ಮಾನಿನಿಯ ಸಂಕಲ್ಪ ತ್ರಾಣನೀ ಪೂರೈಸಿ
ಪ್ರಾಣಸಖನಾಗಿ ಸಲಹಿದೆ । ಜಯಭೀಮ
ಪಾಣಿ ಪಿಡಿಯೆನ್ನ ಮಹಘನ್ನ ೧೫

ದುರಾರಾಧಕ ದುಷ್ಟ ಜರಸಂಧನ ಸೀಳಿ
ಮುರಾರಿ ಮತ್ಪ್ರೀತಿ ಬಿಡಿಸಿದೆ । ದೀಕ್ಷೆಯಲಿ ತ್ರಿ
ಪುರಾರಿ ವಂದ್ಯಾಗತಿ ನೀನೆ ೧೬

ನಾರಾಯಣಾಸ್ತ್ರವನು ವೀರ ಗುರುಸುತ ಬಿಡಲು
ಚೀರಿ ನಮೋಯೆನ್ನೆ ನೃಪರೆಲ್ಲ । ಸ್ಮೃತಿ ತಪ್ಪೆ
ಧೀರ ಎದುರಾಗಿ ನೀ ನಿಂತೆ ೧೭

ಗರಡಿಯಲಿ ಕೀಚಕನ ಮುರಿದು ಮುದ್ದೆಯ ಮಾಡಿ
ಮರಿಯದೆ ಅವನ ಅನುಜರ । ಸದೆಬಡಿದು
ವರಸತಿಗೆ ಮೋದ ನೀನಿತ್ತೆ ೧೮

ಗರಳಬಕ್ಷಗಳ ವುಂಡು ಉರಗ ಬಂಧವ ಹರಿದು
ಹರಿಯಂತೆ ಕುರುಪ ಕರಿ ಮುಂದೆ । ನೀನಿಂತೆ
ಸರ್ವನಿತ್ಯಾತ್ಮ ಕೃಷ್ಣಾತ್ಮ ೧೯

ಮಧುವೈರಿ ಧ್ಯಾನದಲಿ ಕುದುರೆ ಆಟವನಾಡಿ
ಮುದದಿಂದ ಕುರುಪನ್ನೆಗಲೇರಿ । ಹುದುಗ್ಯವನ
ಮುದದಿಂದ ನಲಿದೆ ಕಮಲಾಕ್ಷ ೨೦

ಅರಗಿನ ಮನೆಯಲ್ಲಿ ವೈರಿಜನರ ಕೊಂದು
ಪೊರೆದೆ ನೀ ಜನನಿ ಅನುಜರ । ಪಂಜರನೆ
ಧರೆಯೊಳಗೆ ಎನ್ನ ಸಲಹಯ್ಯ ೨೧

ಹಿಡಿಂಬನ ಕೊಂದು ವರ ಹಿಡಿಂಬಿಯ ಕೈಪಿಡಿದು
ನಡೆದೇಕ ಚಕ್ರಪುರದಲ್ಲಿ । ಬಕನೊರಸಿ
ನಡಕ ಬಿಡಿಸೀದಿ ಸುಜನರ ೨೨

ವ್ಯಾಸದೇವನ ಕಂಡು ಸೂಸಿದ ಸದ್ಭಕ್ತಿ
ಪಾಶದಲಿ ಕಟ್ಟಿ ಒಳಗಿಟ್ಟು । ಪೂಜಿಸುತ
ಲೇಸಾಗಿ ಮುಂದೆ ನಡೆದಯ್ಯ ೨೩

ನೀ ಸ್ವಯಂವರ ಸಭೆಯ ವೇಷಾಂತರದಿ ಪೊಕ್ಕು
ವಾಸುದೇವನ ಕಂಡು ಆನಂದ । ತುಳುಕುತ್ತ
ಆ ಸತಿಯ ತಂದೆ ವಿಜಯಾತ್ಮ ೨೪

ರಾಜರೆಲ್ಲರ ಹಿಡಿದು ರಾಜಸೂಯಯಾಗವನು
ಸೋಜಿದಿಗ್ಗೈದೆ ಸರ್ವೇಶ । ಕೃಷ್ಣನ
ಪೂಜೆಯನು ಮಾಡಿ ಮೆರದಯ್ಯ ೨೫

ಲಕ್ಷ್ಮೀವನಕ್ಹೋದಂತೆ ಪಕ್ಷಿಯರ ಒಡಗೂಡಿ
ದಕ್ಷನೆ ನೀನು ವನವಾಸ । ಅಜ್ಞಾತ
ಪಕ್ಷವ ಕಳೆದು ಮರಳಿದೆ ೨೬

ಸಂಗರವ ನೀ ಹೂಡಿ ಭಂಗಿಸಿ ಕೌರವನ
ರಂಗನ ಮುಂದೆ ಅರ್ಪಿಸಿ । ವಂದಿಸಿ
ಮಂಗಳಾತ್ಮಕನೆ ಸಲಹೆಮ್ಮ ೨೭

ನಿರ್ಮಲ ರಾಜ್ಯವನು ಧರ್ಮಂಗೆ ನೀನಿತ್ತೆ
ನಿರ್ಮೂಲಗೈದು ಅರಿಗಳ । ಕೊಂದ ಪರ
ಧರ್ಮಪರರನ್ನು ಪೊರೆದಯ್ಯ ೨೮

ಮಧ್ವಾಖ್ಯ ಮಹವೀರ ಶುದ್ಧ ಸತ್ವ ಶರೀರ
ಉದ್ಧರಿಪುದೊಂದೆ ವ್ಯಾಪಾರ । ಕೈಕೊಂಡ
ವಿದ್ಯಾಧಿಪತಿಯೆ ಸಲಹೆನ್ನ ೨೯

ಶ್ವಾಸ ನಿಯಾಮಕ ಪ್ರಭುವಾಸವೆ ನಿನ್ನಿಂದ
ಉಸರಲೇನಯ್ಯ ನಿನ್ನಲ್ಲಿ । ಜೀವೇಶ
ಸೂಸುವ ಭಕ್ತಿ ನೀಡಯ್ಯ ೩೦

ವೇದ ಚೋರನ ಮಡುಹಿ ಸಾದರದಿ ಸುಜನಕ್ಕೆ
ಬೋಧ ಮಾಡೆಂದು ಶ್ರೀ ವಿಷ್ಣು । ಕಳುಹಿದ
ಮಧ್ವಾಖ್ಯ ಗುರುವೆ ಪರಿಪಾಹಿ ೩೧

ಧರೆಯಲ್ಲಿ ಜನಿಸಲು ಸುರರು ದುಂದಭಿ ಮೊರೆಯೆ
ದುರುಳರ ಎದೆಯು ನಡುಗಲು । ಹರುಷದಲಿ
ಮೆರೆದು ನೆರೆದರು ಸುಜನರು ೩೨

ಗೋವಿತ್ತ ವಿಪ್ರಂಗೆ ಕೈವಲ್ಯ ನೀನಿತ್ತೆ
ಶ್ರೀವಲ್ಲಭನ ಪ್ರಥಮಾಂಗ । ಪ್ರಸನ್ನ
ನೀವಲಿದು ಹರಿಯ ತೋರಯ್ಯ ೩೩

ಹುಣಿಸೆ ಬೀಜದಿ ಪಿತನ ಘನ್ನೃಣವ ತೀರಿಸಿದಿ
ಅಣಿಮಾದಿ ಸಿದ್ಧಿ ತೃಣವಯ್ಯ । ನಿನಗಿನ್ನು
ಗುಣಪೂರ್ಣ ಹರಿಯ ಪ್ರತಿಬಿಂಬ ೩೪

ಶಿವಭಟ್ಟನನು ಗೆದ್ದು ಜಯಾಂಕ ರಸ ತೋರೆ
ಆ ವಿಪ್ರ ಸುರರು ಪೂಜಿಸೆ । ನಲವಿಂದ
ಅವನಿಯೊಳು ಪೊಳೆದೆ ರವಿಯಂತೆ ೩೫

ವಿದ್ಯಾಧಿಪತಿ ಗುರುವೆ ವಿದ್ಯೆ ಪೇಳಿದ ದ್ವಿಜಗೆ
ಸದ್ಭಕ್ತಿ ದಕ್ಷಿಣೆ ನೀನಿತ್ತೆ । ಕರುಣಾತ್ಮ
ಉದ್ಧರಿಸು ಎನ್ನ ದ್ವಿಜರತ್ನ ೩೬

ಜನನಿ ಜನಕರು ತಡಿಯೆ ಅನುವಾದ ಸುತನಿತ್ತು
ಘನವಾದ ತುರ್ಯ ಆಶ್ರಮ । ಕೈಗೊಂಡು
ಸುನವ ಪದ್ಧತಿಯ ತೋರಿದೆ ೩೭

ಅಚ್ಯುತಗೆ ಮೊರೆಯಿಟ್ಟ ಅಚ್ಯುತ ಪ್ರೇಕ್ಷಕರಿಗೆ
ಹೆಚ್ಚಾದ ದಯದಿ ಹರಿ ನಿನ್ನ । ವೊಯ್ದಿತ್ತ
ಅಚ್ಚುಮೆಚ್ಚುವ ನೀ ಹರಿಗೆಂದು ೩೮

ವಾದಿಗಳ ಭಂಗಿಸಲು ಸಾದರದಿ ಯತಿ ಕರಿಯೆ
ಛೇದಿಸಿ ಖಳರ ಮದವನ್ನು । ಹರಿಸಿದೆ
ಸ್ವಾದ ಗುಣಸಿಂಧು ಮದ್ಬಂಧು ೩೯

ಬಾಳೆಗೊನೆಗಳ ಮೆದ್ದು ಬಾಡಲೇತಕೆ ಉದರ
ಪೇಳೆಂದ ಯತಿಗೆ ಜಠರಾಗ್ನಿ । ಬ್ರಹ್ಮಾಂಡ
ಕೊಳ್ಳುವದುಯೆಂದು ವರದಯ್ಯ ೪೦

ವಾದಗಳ ಪರಿಹರಿಸಿ ಬೋಧಿಸಲು ಆ ದ್ವಿಜರು
ಪಾದಕ್ಕೆ ಎರಗಿ ನಮೋ ಎಂದು ಅಮರರಿಗೆ ಆ
ಬೋಧವೊ ಮಹಿಮೆಯೆಂದಾರು ೪೧

ಬದರಿಯಾತ್ರೆಯಲಿ ಸುರನದಿಯು ತಾ ಮಹಿಪಡೆದು
ಮುದದಲ್ಲಿ ಬಂದು ನಮಿಸಲು । ಶಿಷ್ಯಜನ
ಯ್ಯೆದಿ ಭಕ್ತಿಯನು ನಮೋ ಎಂದು ೪೨

ಹರಿಯಂತೆ ನರಿಗಳನು ತುರಕ ದೂತರ ಜರಿದು
ನರಪನಿಂದರ್ಧ ಮಹಿಮೆಯನ್ನು । ಪಡೆದಂಥ
ಯರಡೇಳು ಭುವನ ಅಧಿಪತಿ ೪೩

ಸತ್ಯತೀರ್ಥರ ಬಳಿಗೆ ದೈತ್ಯ ವ್ಯಾಘ್ರನು ಬರಲು
ಮೃತ್ಯುವಿನ ಪುರಕೆ ಕಳುಹಿದೆ । ಲೀಲೆಯಲಿ
ಭೃತ್ಯತ್ವಯೆನಗೆ ನೀಡಯ್ಯ ೪೪

ಸೂಸುವಾ ಭಕ್ತಿಯಲಿ ವ್ಯಾಸದೇವನ ಕಂಡು
ಈಶ ಸಲಹೆಂದು ಎರಗಲು । ಮನವುಬ್ಬಿ
ಬಾ ಸುತನೆ ಎಂದು ತಬ್ಬಿದ ೪೫

ಆನಂದ ಮೂರ್ತಿಯ ಆನಂದ ಸಂಗವನು
ಆನಂದದಿಂದ ನೀ ಯ್ದೈದಿ । ನಂದ
ಆನಂದ ತೀರ್ಥ ಕೊಟ್ಟೆಯೊ ೪೬

ನಾರಾಯಣನಲಿ ಕರೆದೊಯ್ಯೆ ಬದರಿಪನ
ಚರಣಾಬ್ಜಕೆರಗಿ ಹರಿಲೀಲೆ । ಸ್ಮರಿಸಿದ
ಗುರುರತ್ನ ಸಲಹೊ ಧನ್ಯಾತ್ಮ ೪೭

ಅಚ್ಯುತನ ಸಂಗದಲಿ ಚಿತ್ಸುಖವ ಉಂಡುಬ್ಬಿ
ಹೆಚ್ಚಿನ ಪದವಿ ಇಲ್ಲೆಂದು । ನಲಿದಂಥ
ಅಚ್ಯುತಾತ್ಮಾನೆ ಸಲಹೆನ್ನ ೪೮

ಈಶನಾಜ್ಞೆಯ ತಾಳಿ ದಾಸ ಜನರನು ಪೊರೆಯೆ
ವಾಸುದೇವನ ಕೂಡಿ ಮನದಲ್ಲಿ । ಎಡಬಿಡದೆ
ಸೂಸುವೊ ಸುಖದಿ ನೀ ಬಂದೆ ೪೯

ಶ್ರುತಿ ಮಂತ್ರದಿಂ ಭೀಜ ಕ್ಷಿತಿಜಿಯೊಳಗೆ ನೀ ಚೆಲ್ಲಿ
ಕ್ಷಿತಿಪನಿಗೆ ತೋರಿ ಫಲಪುಷ್ಪ । ಕ್ಷಣದಲ್ಲಿ
ಕ್ಷಿತಿ ದೇವರನ್ನು ಸಲಹಿದೆ ೫೦

ಹಡಗಿನಲಿ ಬಂದಂಥ ಕಡಗೋಲ ಕೃಷ್ಣನ್ನ
ಉಡುಪಿಯಲಿ ನಿಲಿಸಿ ಪೂಜಿಸಿ । ಯತಿಗಳಿಗೆ
ಸಡಗರದ ಪೂಜ ನೀನಿತ್ತೆ ೫೧

ವಕ್ರಜನ ಕರಿಯೆ ತ್ರಿವಿಕಮ ದ್ವಿಜ ಬಂದು
ವಕ್ತ್ರೇಂದು ನೋಡಿ ಮುದತುಂಬಿ । ಮನದಲ್ಲಿ
ನಕ್ರಾರಿ ಭಕ್ತ ಸಲಹೆಂದ ೫೨

ಹದಿನೈದು ದಿನವಾದ ಬುಧಮಾಡಿ ಮುದ ತುಂಬಿ
ಪದ ಪದ್ಮಕೆರಗಿ ಚಾಪಲ್ಯ । ಕ್ಷಮಿಸೆಂದು
ಪದವಾಂತು ದಾಸ್ಯ ಬೇಡಿದ ೫೩

ಪದ್ಮನಾಭ ನರಹರಿ ಮಾಧವರು ಲಕ್ಷೋಭ್ಯ
ಬುದ್ಧಿ ಘನ ಭಕ್ತಿ ವೈರಾಗ್ಯ । ಸಾಗರರು
ಬುಧತವ ಸೇವಾಸಕ್ತರು ೫೪

ವರಶಿಷ್ಟ ಪ್ರಶಿಷ್ಯ ತೆರೆಗಳನು ಧರಿಸಿದ
ಗುರುರತ್ನ ರತ್ನಾಕರ ನೀನೆ । ಎನಗೊಂದು
ಹರಿರತ್ನವೀಯೊ ದಯಾಸಿಂಧು ೫೫

ಸ್ವಾಮಿ ಮಾಡಿದ ಭಾಷ್ಯ ಸೋಮಶೇಖರ ಶೇಷ
ಪ್ರೇಮದಲಿ ಗರುಡ ಅಮರರು । ಪಠಿಸಿ ಪದ
ತಾಮರಸಗೆರಗಿ ನಲಿದರು ೫೬

ಆ ಮಹಾಭಾಷ್ಯ ಫಳ ಆ ಮೌನಿಗಣ ಕೇಳೆ
ಶ್ಯಾಮಸುಂದರನ ಶ್ರೇಯನ । ಶ್ರೀ ಹರಿಯ
ಧಾಮವೆ ಇದಕೆ ಫಲವೆಂದ ೫೭

ಪಾದನಖ ರಶ್ಮಿಯಲಿ ಪಾಠವನು ಶಿಷ್ಯರಿಗೆ
ಸಾದರದಿ ಪೇಳ್ವೆ ಹೃತ್ಪದ್ಮ । ಸೂರ್ಯನೆ
ನೀ ದಯದಿ ಒಳಗೆ ನೆಲಸಯ್ಯ ೫೮

ಅನುಜನ ಯತಿ ಮಾಡಿ ಅನಘ ವಿಷ್ಣುತೀರ್ಥಗೆ
ಪ್ರಣವ ಪೂರ್ವಕದಿ ಘನ ಕರುಣ । ಮಾಡಿದ್ದು
ವಾಙ್ಮನಕೆ ದೂರ ಪೇಳಲು ೫೯

ರಾಮಪ್ರಿಯ ರಾಮದೂತ ಸ್ವಾಮಿ ಹನುಮಂತ ನಮೊ
ಭೀಮನೆ ಶರಣ ಕೃಷ್ಣೇಷ್ಟ । ಪ್ರಬಲತ
ಸ್ವಾಮಿ ಮಧ್ವಾಖ್ಯಾ ನಮೋನಮೋ ೬೦

ಸುರಪ ಸಿಂಹಾಸನದಿ ಸಿರಿ ಭಾಷ್ಯ ತಾನಿಟ್ಟು
ಭರದೆರಗಿ ಭಕ್ತಿ ಭರದಿಂದ । ಜಯ ಮಧ್ವ
ಗುರುರಾಜ ಸಲಹೊ ಎಂತೆಂದ ೬೧

ಜಯ ಹನುಮ ಜಯ ಮಧ್ವ ಜಯ ಭೀಮ ಗುಣಧಾಮ
ಜಯ ಜಯಾ ಜಯೇಶವಿಠಲನ್ನ । ಜಯ ದೂತ
ಜಯವೀಯೊ ಗುರುವೆ ಜಯಧಾಮ ೬೨

## ೮೪

ಶ್ರೀಹರಿಗೆ ಪ್ರಥಮಾಂಗ ಮಧ್ವಮೂರ್ತಿ ಪ

ದೇಹ ಚತುರದಿ ಇದ್ದು ಜಗವ ಸಲಹುವೆ ದೊರೆಯೆ ಅ.ಪ.

ಅಮೃತರೂಪನೆ ಹರಿಯ ಅಮೃತಮಯ ಭಕ್ತಿಯೊಳು
ಅಮುಕುತಾ ಮುಕುತದಲಿ ನಿಂದು ಹರಿಯ
ರಮೆ ಸಹಿತ ರಾಜಿಪನ ಅಚ್ಛಿನ್ನ ಅರ್ಚಕನೆ
ಸಮರರಿಯೆ ನಿನಗಿನ್ನು ಅಜನುಳಿದು ಜೀವರೊಳು ೧

ನಿನ್ನ ನಾಮಸ್ಮರಣೆ ನಿಸ್ವಾರ್ಥಿಯ ಕಥನ
ನಿನ್ನ ವೈಭವ ಧ್ಯಾನ ಅಮೃತಪಾನ

ನಿನ್ನ ಗುಣ ಕ್ರಿಯ ರೂಪ ನೆನೆನೆನೆದು ಸುಖಿಸುವನು
ಧನ್ಯ ಸುರಕುಲದವನು ಜೀವನ್ಮುಕ್ತನವನಿಯೊಳು ೨

ನಿನ್ನಲ್ಲಿ ಹರಿ ಇದ್ದು ಜಗವ ನಡೆಸುವ ತಾನು
ನಿನ್ನಲ್ಲಿ ಶ್ರೀಹರಿಯ ಒಲುಮೆ ಅಮಿತ
ನಿನ್ನ ಕರವಶ ಮುಕ್ತಿ ಮಾಡಿಹನು ಯದುಪತಿಯು
ನಿನ್ನ ದಾಸರೆ ಹರಿಯ ಪುರವಾಸಿಗಳು ಸ್ವಾಮಿ ೩

ಜ್ಞಾನ ಬಲ ಭಕ್ತಿ ವೈರಾಗ್ಯ ಲಾಘವ ಶಕ್ತಿ
ಧ್ಯಾನ ವಿದ್ಯಾ ಬುದ್ಧಿ ಕುಶಲ ತೇಜ
ಪೂರ್ಣಪ್ರಾಜ್ಞತೆ ಸಿರಿಯ ಮಾಧುರ್ಯ ಶುಭವಾಕು
ಪೂರ್ಣಧೈರ್ಯವು ಕಾರ್ಯ ಪೂರ್ಣ ನಿನ್ನಲಿ ಅಭಯ ೪

ವಾಣಿ ಭಾರತಿ ನಿನ್ನ ವೈಭವವ ನೆನೆನೆನೆದು
ಧೇನಿಸುತ ಆನಂದಮಗ್ನರಾಗಿ
ಕಾಣದಲೆ ಕೊನೆ ಮೊದಲು ತತ್ವದ ಕಮಲದಲಿ
ಜೇನಾಗಿ ಕ್ರೀಡಿಪರೊ ಮೈಮರೆದು ಸುಖ ಸುರಿದು ೫

ಶಿವ ಶೇಷ ದ್ವಿಜ ರಾಜ ಸುರರಾಜ ಮೊದಲಾದ
ದಿವಿಜಗಣ ನಿನ್ನಂಘ್ರಿ ಕಮಲ ರಜವ
ಪವಮಾನ ಪಾವನ ನಾಮ ಪರಮ ಭಕುತಿಯಲಿ ಶಿರದಿ
ಲವ ಬಿಡದೆ ಪೊತ್ತಿಹರೊ ಆನಂದ ಶರಧಿಯಲಿ ೬

ಶ್ರೀ ಲಕ್ಷ್ಮೀ ಹರಿಪುತ್ರ ಅಮಿತ ವೈಭವ ಗಾತ್ರ
ಕಾಳಕೂಟವನುಂಡು ಮೆರೆದ ಮಹಿಮ
ಶ್ರೀಲೋಲ ನಿನ್ನಲ್ಲಿ ಆನಂದ ಲೀಲೆಗಳ
ಕೊಲಾಹಲದಿ ಮಾಳ್ಪ ಕಾರುಣ್ಯರೂಪದಲಿ ೭

ಅಣು ರೇಣು ತೃಣ ಕಾಷ್ಟ ಬಹಿರಂತರದಲ್ಲಿ
ಘನ ಮಹತ್ತು ಅಣು ಜೀವ ಚಿದ್ದೇಹದಲ್ಲಿ
ಅನವರತ ಅಲ್ಲಿಪ್ಪ ಸರ್ವಮಂಗಳ ಹರಿಯ
ಗುಣನಿಕರಗತ ಚಿತ್ರ ಜಗದಸುವೆ ನಿರ್ದೋಷ ೮

ರಾಮದೂತನೆ ಹನುಮ ಹರಿ ಧೌತ್ಯಯನಗೀಯೊ
ಭೀಮ ಶೌರಿಯ ಗುಪ್ತ ಬಂಟ ಸತತ
ಭೂಮ ಭಾರತಿ ಖಳರ ಹರಣ ವೃಕೋದರ ವೀರ
ಶ್ರೀ ಮನೋಹರನಲ್ಲಿ ದಾಸ್ಯ ದೀಕ್ಷೆಯ ದೇಹಿ ೯

ಗರುಡ ಪನ್ನಗ ರುದ್ರ ಸುರಗಣವು ಮೊದಲಾದ
ಚರಾಚರ ಭ್ರೂ ಚಲನ ಮಾತ್ರದಿಂದ
ಖರೆ ಸೃಷ್ಟಿ ಸ್ಥಿತಿ ಮುಕ್ತಿಯೈದುವರೊ
ಘನ ಮಹಿಮ ವರ ವೇದ ಪ್ರತಿಪಾದ್ಯ ೧೦

ಪರಮಮಂಗಳ ಜಯೇಶವಿಠಲನಂಘ್ರಿ
ಸರಸಿಜವ ಬಿಡದ ಮಧುಪರಾಜ
ಶರಣರಿಗೆ ಸುಜ್ಞಾನ ಶರಧಿಯನು ಪೊಂದಿಸಿದೆ
ಕರುಣನಿಧಿ ಆನಂದಮುನಿ ನಿನ್ನ ಕೃಪೆ ಮುಕ್ತಿ ೧೧

## ೮೫

ಬಿನ್ನಹಕೆ ಬಾಯಿಲ್ಲ ಭೂತನಾಥ ಪ

ನಿನ್ನ ಪದರಜ ಸ್ನಾನ ನೀಡೆನ್ನ ಉದ್ಧರಿಸು ಅ.ಪ.

ಹೀನ ಯೋಗ್ಯತೆಗಿನ್ನು ಏನು ಮಾಡಲೊ ಸ್ವಾಮಿ
ಧೇನು ವತ್ಸನ ತೆರದಿ ಪಾಲಿಸೆನ್ನ
ವೇಣುಗೋಪಾಲನಾ ಧ್ಯಾನ ನಿಲ್ಲದು ಮನದಿ
ನಾನು ನನ್ನದು ಬಿಡದು ಎನಗಾವ ಗತಿಯಿನ್ನು ೧

ನೀಲಕಂಠನೆ ನಿನ್ನ ನೀಳಪಾದದ ಧೂಳಿ
ಮೂಲೋಕದಘತೂಲಕಗ್ನಿ ಸತತ
ಫಾಲಾಕ್ಷ ಪತಿತ ಪರಿಪಾಲಕನು ನೀನೊಬ್ಬ
ಹಾಲಲ್ಲಿ ಅದ್ದೆನ್ನ ಹರಿಭಕ್ತರ ಬಂಧು ೨

ಮನಕರಣ ತನು ವಿಷಯ ಘನಪಾಶದಲಿ ಸಿಕ್ಕಿ
ಉಣಿಸುವುವು ಮಹದುಃಖ ಎನ್ನ ಮೀರಿ
ಮನೋ ಹೃದಯದಲಿ ದೋಷ ತುಂಬಿ ತುಳುಕುವುದಯ್ಯ
ಎನಿತು ನಿನ್ನಲಿ ನಿಂದು ಮೊರೆಯೆಂದು ಮೊರೆ ಇಡಲಿ ೩

ದುಷ್ಟವಾಸನೆ ಶಕ್ತಿ ಮೆಟ್ಟಿ ಆಳುವುದೆನ್ನ
ವೃಷ್ಟೀಶನಲಿ ಎನ್ನ ಪೋಗಬಿಡದೊ
ದುಷ್ಟನಕ್ರಗೆ ಸಿಕ್ಕ ಕರಿಯಂತೆ ಬಾಯ್ಬಿಡುವೆ
ಕಷ್ಟ ಪರಿಹರಿಸಯ್ಯ ಹರಿನಿಷ್ಠಧ್ಯಾನವನಿತ್ತು ೪

ಶತಕೋಟಿ ಶ್ರುತಿಯಲಿ ಜಯೇಶವಿಠಲ
ನತಬಂಧು ಎಂತೆಂದು ಸಾರುತಿಹುದು
ಹಿತಭಕ್ತ ನೀ ಹರಿಗೆ ಹರಿಮೀರ ನಿನ್ನುಕ್ತಿ
ಪತಿತಪಾವನ ನನ್ನ ಹರಿಭಕ್ತನ ಮಾಡು ೫

## ೮೬

ಮನದಧಿಪ ಮರೆಹೊಕ್ಕೆ ಮಹದೇವ ಪಾಹಿ ಪ

ತೃಣ ಮೊದಲು ಘನದಲ್ಲಿ ಬಿಡದೆ ಹರಿಯನು ಭಜಿಪ ಅ.ಪ.

ಕರುಣಾಬ್ಧಿ ನೀಡೆನಗೆ ವೈರಾಗ್ಯ ಮಹಭಾಗ್ಯ
ಪರಮ ಭಾಗವತ ಪದ ನಿನ್ನದಯ್ಯ
ಹರಿಯಂಘ್ರಿ ಕಮಲ ಮಧು ಮತ್ತ ಷಟ್ಪದ ದೊರೆಯೇ
ಸರ್ವತ್ರ ನಿನ್ನಲ್ಲಿ ಹರಿಯ ತೋರಿಸಿ ಸಲಹೊ ೧

ಆಪ್ತತಮ ನಿನ್ನಂಘ್ರಿ ಧ್ಯಾನದಲಿ ಇಡು ಎನ್ನ
ತೃಪ್ತಿ ಅನ್ಯದಿ ಬ್ಯಾಡ ಸುಪ್ತಿರಹಿತ
ಸಪ್ತೆರಡು ಭಕ್ತಿಯಲಿ ಬೆಳೆಸೆನ್ನ ಉದ್ಧರಿಸು
ಪ್ರಾಪ್ತಿ ಪಾಲಿಸು ಬಿಂಬ ಮೂರ್ತಿ ದರುಶನ ಭೋಗ ೨

ಮೂರುತಿಯ ಕೈಗಿತ್ತುದಾರ ಸಾಗರ ಶಂಭು
ಘೋರ ಭವಹರ ಹರಿಯ ದಾಸವರ್ಯ
ಮಾರಮಣ ಜಯೇಶವಿಠಲನ ಭಜನೆಯಲಿ
ಧೀರ ದಿವಿಜರ ದೊರೆಯೆ ಸಾರ ಸುಖ ನೀಡೆನಗೆ ೩

## ೮೭

ಮನದಧಿಪ ಮಹದೇವ ಮೊರೆಯೆ ಕೇಳೊ ಪ

ಘನ ತಿಮಿರ ಸ್ಥಿತಿಯಲ್ಲಿ ಎದೆ ಒಡೆದು ನಿಂದಿಹೆನು ಅ.ಪ.

ಮನಕರಣಗಳು ಎನ್ನ ತಮ್ಮ ಸೆರೆಯಲಿ ಇಟ್ಟು
ಘನ ಯಾತನೆಯ ಪಡಿಸಿ ಮೂರ್ಛೆಗೊಳಿಸಿ
ಕ್ಷಣ ಬಿಡದೆ ದಣಿಸುವುವು ಮೊರೆ ಇಡಲು ಮುಖವಿಲ್ಲ
ಪ್ರಣಿತ ಪಾಲಕರಲ್ಲಿ ಸರಿ ಇಲ್ಲ ನಿನಗೆಂದು ೧

ಪವಮಾನ ಪದಕಮಲ ಮಧು ಮತ್ತ ಮಹಭೃಂಗ
ಹರಿದಾಸ ಶಿರೋರತ್ನ ಅಭಯದಾಯಿ
ಶಿವತಮನೆ ನಿನ್ನಂಘ್ರಿ ರಜಲಕ್ಷ್ಮಿಯನ್ನು ಶಿರ
ಧವನ ಮಾಡಲಿ ನಿತ್ಯ ಮಾಡೆನ್ನ ಕೃತಕೃತ್ಯ ೨

ಗೌರೀಶ ಗುಣನಿಧಿಯೆ ಗುಪ್ತ ಮಂಗಳ ಮಹಿಮ
ಶೌರಿ ಜಯೇಶವಿಠಲ ಧ್ಯಾನಲೋಲ
ತಾರಕನೆ ಭವಸಿಂಧು ದಾಟಿಸುವ ಅಂಬಿಗನೆ
ಕಾರುಣ್ಯಗರೆದೆನ್ನ ಹರಿಪಾದ ದಡಕೊಯ್ಯೊ ೩

## ೮೮

ಮಹದೇವ ಮದ್ರೋಗ ಮೂಲವಳಿಯೊ ಪ

ಮಹದಾದಿಗಳ ದೈವ ಹರಿಯಲ್ಲಿ ರತಿ ನಿಲಿಸಿ ಅ.ಪ.

ಸರ್ವಸಿದ್ಧನೆ ವಿಷಯ ಪರ್ವತಕೆ ಮಹಕುಲಿಶ
ಸರ್ವೇಶ ಹರಿಪಾದ ಕಮಲ ಭೃಂಗ
ಮರ್ವೆಂಬ ಮಾರಿಯನು ಅವಳ ನೇತ್ರದಿ ಸುಟ್ಟು
ಸರ್ವಾತ್ಮ ಹರಿಧ್ಯಾನಮಗ್ನ ಮನ ನೀಡೆನಗೆ ೧

ತಾಳಲಾರೆನೊ ಸ್ವಾಮಿ ಕಾಳ ವಿಷಯದ ದೋಷ
ಫಾಲಾಕ್ಷ ಬಿಡಿಸೈಯ್ಯ ಭೋಗದಾಸೆ
ಶೀಲ ಮನದಲಿ ಹರಿಯ ಲೀಲೆ ಲಾವಣ್ಯಗಳ
ಮೇಲಾಗಿ ನೋಡುವ ಮಹಕರುಣ ಮಾಡೆನ್ನ ೨

ಭಾರತೀಶನ ಪಾದಕಮಲ ಮಧುಪನೆ ನಿನ್ನ
ಕಾರುಣ್ಯವಾದವನೆ ಶೌರಿವಶನೊ
ಮಾರಾರಿ ಮದ್ಭಾರ ವಹಿಸಿ ಪಾಲಿಸು ಎನ್ನ
ಧೀರ ತವ ಚರಣಾಬ್ಜ ವಾರಿಜಕೆ ಮೊರೆ ಹೊಕ್ಕೆ ೩

ಎನ್ನ ಹೀನತೆ ನೋಡಿ ಘನ್ನ ಭಯಗೊಂಡಿಹೆನೊ
ಧನ್ಯರ ಮಾಳ್ಪ ದಯ ನಿನ್ನದಯ್ಯಾ
ಪುಣ್ಯತಮ ಮೂರುತಿಯ ಪ್ರತಿಬಿಂಬ ಹರಿಸಖನೆ
ಧನ್ಯನಾ ಮಾಡೆನ್ನ ವಿಷಯ ಜಯ ದಯಮಾಡಿ ೪

ಅಮರಗಣವಿನುತ ಅಮಿತ ಮಂಗಳದಾಯಿ
ವಿಮಲ ಪದರಜ ವಿಭವ ವಾಮದೇವ

ಮಮತಾದಿ ಅಭಿಮಾನ ದೋಷವರ್ಜಿತ ಮಹಾ
ಸಾಮ್ರಾಜ್ಯ ಯೋಗಕ್ಕೆ ಅಧಿನಾಥ ಕರುಣಿಪುವುದು ೫

ಶಂಭು ಶಂಕರ ತವ ಪದಾಂಬುಜದಿ ಶಿರವಿಟ್ಟು
ಹಂಬಲಿಪೆನಿಷ್ಟಪದ ಪಾಲಿಸೆಂದು
ತುಂಬಿತ್ವಕ್ಕರಸನ ಹೃದಂಬುಜದೊಳರಳಿಸಿ
ಬಿಂಬ ಜಯೇಶವಿಠಲ ಮೂರ್ತಿ ದರುಶನ ನೀಡೊ ೬

## ೮೯

ಗೌರಿ ಗಜಮುಖನ ಮಾತೆ । ಗುಣಗಣ ಭರಿತೆ
ಶೌರಿ ಸಖನಂಗಸಂಗೀ ಸಂಪೂರ್ತೆ ಪ

ಸೌರಭ ಶುಭ ತನು ವಾರಿಜನೇತ್ರಳೆ
ವೀರಸತಿಯೆ ದಯವಾರಿಧಿ ಪಾಲಿಸು ಅ.ಪ.

ತುಂಗ ಮಂಗಳೇ ದೇವಿ । ಕಲಿಗೆ ಭೈರವೀ
ರಂಗಾನ ನವವಿಧಿ ಭಕ್ತಿ ಸಂಗ ನೀಡುವಿ
ಹಿಂಗದೆ ಪೊರಿಯೆ ತಾಯೇ । ಭಕ್ತ ಸಂಜೀವೆ
ತಿಂಗಳ ಮುಖಿವರಗರಿವೆ । ನಮ್ಮ ಶಂಭುವೆ
ಭಂಗಬಟ್ಟೇನು ನುಂಗುವ ಭವದೊಳು
ಮಂಗಳ ಕರುಣಾಪಾಂಗದಿ ನೋಡೆನ್ನ
ಹಿಂಗಿಸು ಭವ ಭಯ ಗಂಗೆಯ ಧರನಂಘ್ರಿ-
ಭೃಂಗಳೆ ಬೋದಯಾಕಂಗಳೆ ಕರುಣಿಸು ೧

ಇಂದ್ರಾದಿ ಸುರಗುರುವೆ । ದೇವ ತರುವೆ
ನೊಂದು ನಾನಾ ಪರಿ ನಿನ್ನ ಬೇಡುವೆ
ಕುಂದನೆಣಿಸದಲೆ ಶಿವ ಶಂಕರಿ ಕಾವೆ
ಸಂದೇಹ ಕಳಿ ವಿಭುವೆ । ವೀರಜತನುವೆ .

ವಂದಿಪೆ ತತ್ವದ ದ್ವಂದ್ವಕೆ ಪರಿಪರಿ
ನೊಂದವನಾ ಮ್ಯಾಲ್ಹೊಂದಿಸು ಕರುಣವ
ಮಂದಸ್ಮಿತೆ ಮುಕುಂದನ ಮನದಲಿ
ವಂದಿಸು ಅನಿಮಿತ್ತ ಬಂಧುವೆ ರಕ್ಷಿಸು ೨

ಕಸ್ತೂರಿ ಕುಂಕುಮ ಫಾಲೆ । ರನ್ನಾದ ಓಲೆ
ವಸ್ತುಗಳಿಟ್ಟ ಹಿಮವಂತನ ಬಾಲೆ
ಶಿಸ್ತಿನ ಶುಭ್ರಾಂಬರಧಾರೆ ವನಮಾಲೆ
ಮಸ್ತಕದ ಕಿರೀಟ ವದನೆ ತಾಂಬೂಲೆ
ಮಸ್ತಕದಲಿ ಸಿರಿ ಹಸ್ತಗಳಿಟ್ಟೆನ್ನ
ದುಸ್ತರದ ಹಾದಿಗಳಸ್ತಮಮಾಳ್ಪುದು
ವಿಸ್ತರ ಮಹಿಮ ಜಯೇಶವಿಠಲ
ವಸ್ತುವ ನೀಡಮ್ಮ ಹಸ್ತಿಯ ಗಮನೆ ೩

## ೯೦

ನಂಬು ನಂಬು ನಂಬು ಮನವೆ
ಅಂಬುಜಾಕ್ಷನ ಪ್ರಭುವ ಪಾದ
ಇಂಬು ನಿನಗೆ ದೊರಕುವುದು
ತುಂಬಿ ಮಂಗಳ ಪ

ದುಷ್ಟ ಅನ್ನ ದುಷ್ಟ ಸಂಗ
ಭ್ರಷ್ಟ ಭಾವದಿಂದ ಮನವು
ಕೆಟ್ಟು ಬೆದರಿ ಸವಿಯುಗೊಳ್ಳದು
ಶಿಷ್ಟರನುಭವ ೧

ಸತ್ಯಹರಿಯು ಜಗದ್ಗುರುವು
ಸತ್ಯ ಮಧ್ವಶಾಸ್ತ್ರ ಫಲವು
ಸತ್ಯ ಮಹಿಮ ಗುರುಕರುಣ
ಸತ್ಯ ನಿತ್ಯದಿ ೨

ಭಾರತ ಭಾಗವತವ ಕೇಳು
ಭರತನಣ್ಣನ ಚರಿತೆ ಕೇಳು
ಖರೆಯು ಹರಿಯ ಭಕ್ತರೀಗೆ
ನಿರುತ ಮಂಗಳ ೩

ನಿರುತ ವಿದಯ ಲೋಭಿಗಳ
ದುರುಳ ದುರ್ಬಲ ಭಾವ ತಿಳಿದು
ಹರಿಯ ಮರೆಯೆ ಸಕಲ ಭಯವು
ಮರುಳು ಮಾಳ್ಪವು ೪

ಕರಿಯ ಧ್ರುವನ ಅಸುರ ಬಾಲನ
ನರನ ಸತಿಯು ಭೀಷ್ಮ ಕುಚೇಲ
ವರದ ದೇವನ ದಾಸರ ಭಜಿಸು
ನಿರುತ ದೃಢದಲಿ ೫

ಹಿಂದೆ ಎಷ್ಟೊ ಕಾಲದಿಂದ
ಕುಂದು ನೋಡದೆ ನಿನ್ನ ಬಿಡದೆ
ಮುಂದು ತಂದ ಬಗೆಯ ತಿಳಿಯೊ
ಸಂದೇಹ ಪೋಪದು ೬

ಕಾಲಿಗೆ ಬಿದ್ದ ದೀನರನ್ನು
ಕಾಲ ಕರ್ಮ ಮೀರಿ ಪೊರೆವ
ಬಾಳ ಕರುಣಿ ಮಹಾ
ವಿಜಯ ರಾಮಚಂದ್ರನು ೭

ಹಿಂದೆ ಪೇಳ್ದ ವಾಕ್ಯವೆಲ್ಲಿ
ಇಂದು ಬಿಡದೆ ಫಲಿಸುವೋವು
ಮಂದನಾಗದೆ ಪ್ರಭುವ ಪಾದ
ದ್ವಂದ್ವ ಬಿಡದಿರು ೮

ನಿತ್ಯ ಹನುಮ ಭೀಮ-ಮಧ್ವ
ಭೃತ್ಯರ ಶಿರೋರತನುನಿವನು
ಸತ್ಯ ಮಹಿಮ ಜಯೇಶವಿಠ-
ಲಾಪ್ತ ಸತ್ಯವು ೬

## ೯೧

### ಉಗಾಭೋಗ

ಪರಶು ಮುಟ್ಟಲು ಲೋಹ ಸ್ವರ್ಣವಾಗುವ ಪರಿ
ಸಿರಿ ಒಲಿಯೆ ದಾರಿದ್ರ್ಯ ಹತವಾಗಿ ಪೋಪಂತೆ
ಅರಸು ಮುಟ್ಟಲು ದಾಸಿ ವರನಾರಿ ಅಪ್ಪಂತೆ
ವಿರಜೆ ಮುಳುಗಲು ಜೀವ
ವಿರಜನಾಗುವ ತೆರದಿ ವರ ಸುಧಾಪಾನದಿ
ಜರೆ ಮರೆ ರೋಗಗಳು ಹರಿದ್ಹೋಗುವಂದದಿ
ಹರುಷದಿ ನಮಗಿನ್ನು ಗುರುವರ ದೊರಕಲು
ವರ ಪುಣ್ಯರಾಸಿಯಂತೆ ಪಾಪಿ ನಾನು ಹರಿಭಕ್ತನಾದೆ ಮುಂದೆ
ಕರುಣಾರ್ಣವ ಸುರತ ಜಯೇಶವಿಠಲ
ಸುರಿವ ಕರುಣ ನಿಶ್ಚಿಂತೆ

## ೯೨

ಭವ ಸಿಂಧು ಶೋಷಿಪೇಕ್ಷಣ ಕಲ್ಯಾಣಗಾತ್ರ ಪ

ಪವಮಾನ ಪ್ರಿಯ ಪುತ್ರ ಕಾರುಣ್ಯನೇತ್ರ ಅ.ಪ.

ನಿರವದ್ಯ ಭೂದೇವ ನಿರುತ ಸುಖಭರಿತ ಭಾವ
ಶರಣ ಜನರನು ಕಾವ ಶಪಥ ಭಾವ
ಹರಿಗುರು ಪರ ಸೇವಾ ನಿರುತ ಮಂಗಳ ಭಾವ
ಶರಣು ಶ್ರೀ ರಾಮಾರ್ಯ ಪರಮ ಸಂಜೀವ ೧

ತನುಮನವ ಹರಿಗಿತ್ತ ಗುಣನಿಧಿ ಮಹಗುಪ್ತ
ಅಣುಘನದಿ ಹರಿದೀಪ್ತ ತನುನೋಳ್ಪ ಶಕ್ತ
ಘನ ಕೃಷ್ಣವರ್ಯಾಪ್ತ ಮನೋವಾಕ್ಕಾಯಸ್ತ
ಗುಣಾಪೂರ್ಣಾ ಹರಿಕೃತ್ಯವನು ಎಣಿಪ ತೃಪ್ತ ೨

ಬಲುಭಕ್ತಿ ಭಾರನತ ಬಲಿತ ವಿಜ್ಞಾನರತ
ಲಲಿತ ಮಂಗಳಚರಿತ ನಲಿವನು ಪ್ರೀತ ಕ-
ಮಲಾ ಅಪಹರ್ತ ಕಲ್ಯಾಣ ಸಂಭರಿತ
ಪುಲ್ಲಾಕ್ಷ ಮಮನಾಥ ಕೃಷ್ಣಾಂಘ್ರಿದೂತ ೩

ಪರಮ ಸೌಭಗ ಪೂಜ ಪರಭಕ್ತಿ ನಿರ್ವ್ಯಾಜ
ಚರಿಸಿ ಶ್ರೀ ಗುರುರಾಜ ವರಕಲ್ಪಭೂಜ
ಸರುವ ತತ್ವಗಳೋಜ ವಶಗೊಂಡ ಮಹರಾಜ
ಸರುವ ಸಿದ್ಧಿಗೆ ದೊರಿ ಎನಿಪ ವಿರಜ ೪

ಸಂತಾಪಹರ ಶಾಂತ ಸೌಭಾಗ್ಯಕರವಂತ
ಸ್ವಾಂತದಲಿ ನಿಶ್ಚಿಂತ ಸರಸಿ ಶ್ರೀಮಂತ
ಧ್ವಾಂತ ಹರ ಶ್ರೀ ಜಯೇಶವಿಠಲನ ಏಕಾಂತ
ಪಂಥ ಬಿಡದಿರುವಂಥ ಪೂರ್ಣ ಜಯವಂತ ೫

## ೯೩

ವಿಜಯದಾಸರ । ದಿವ್ಯ
ವಿಜಯ ನೆನೆವರ ಪ

ವಿಜಯಸಾರಥಿಯ ಮನದಿ
ಭಜಿಪ ಸತ್ವರ ಅ.ಪ.

ಆದಿದೇವನ । ಒಲುಮೆ ಸಾಧಿಸಿದನ
ಯಾದವೇಶನ । ಕಂಡ ಮೋದ ಭರಿತನ ೧

ಮನದಿ ಹರಿಯನು । ಸತತ ಕುಣಿಸಿ ನಲಿವನು
ಪ್ರಣಿತ ಪಾಲಯ । ಅಮೃತ ಖಣಿ ವಿಶಿಷ್ಟನು ೨

ಭಕ್ತಿಯುಕ್ತಿಯ । ಮಹಾವಿರಕ್ತಿ ಉಕ್ಕುತ
ಭಕ್ತ ಜನರಿಗೆ ಬಿಂಬ ವ್ಯಕ್ತಿ ಮಾಡಿದ ೩

ಅಂಬುಜಾಧವ । ಇವರ ತುಂಬಿ ವೈಭವ
ತುಂಬಿ ಸುಜನರ ಕದಂಬ ಸಲಹುವ ೪

ಭಾರತೀಪತಿ । ಇವರ ವೀರಸಾರಥಿ
ಸಾರಿ ಭಜಿಪರ ಸಕಲ ಭಾರವಹಿಸುವ ೫

ಅಕ್ಷಯಾಫಲ । ಅಪರೋಕ್ಷ ಕೊಡುವನು
ತ್ರಕ್ಷವಲ್ಲಭಾ ಇವರ ದಕ್ಷರೆನಿಸಿಹ ೬

ದಾಸರತ್ನನಾ । ದಯವ ಲೇಸು ಪಡೆಯಲು
ಸೂಸಿ ಬರುವನು ಶ್ರೀ ಜಯೇಶವಿಠಲ ೭

## ೯೪

ವಿಜಯವಿಠಲರಾಯಾ । ನಂಘ್ರಿಯುಗ ಭಜಿಸುವ
ವಿಜಯರಾಯನೆ ಜೀಯ
ರಜದೂರ ತವಪದ ಭಜಕ ನಾನೆನಿಸಯ್ಯ
ಋಜುರಾಜ ಪ್ರೀಯ
ಕುಜನ ಸಂಗದಿ ಬೆರೆದು ಮನಹರಿ
ಭಜನೆಗೊದಗದು ಎಷ್ಟು ಬೇಡಲು
ದ್ವಿಜವರೇಣ್ಯನೆ ಎಮ್ಮ ಬಾಂಧವ
ಸೃಜಿಸು ಶ್ರೀಧರನೊಲಿಮೆ ಶಕ್ತಿಯ ೧

ದೀನಬಾಂಧವ ನೀನು । ಪಾವನ್ನ ತವ ಕುಲ
ಸೂನು ಎನಿಸಿದೆ ನಾನು
ಕುಲಸ್ವಾಮಿ ಕೃಷ್ಣನ ಧ್ಯಾನ ಪಾಲಿಸು ಇನ್ನು
ದಾನಿ ಸುರಧೇನು
ಜ್ಞಾನ ಭಕ್ತಿ ಧ್ಯಾನಯೋಗದಿ
ವೇಣುಗೋಪಾಲನ್ನ ಹೃದಯ ಪ್ರ
ಧಾನ ನಾಡಿಯ ಮಧ್ಯ ಕುಣಿಸುವ
ತ್ರಾಣ ತರಿಸು ತೀವ್ರ ಮಹಿಮನೆ ೨

ಲೋಕನಾಥನ ಪ್ರೇಮ । ಭೋಗಿಸುವ ಯೋಗಿಯೆ
ಸಾಕು ಸದ್ಗುಣಧಾಮ
ಬಾಗಿದಿನೊ ನಿನ್ನ ಅಂಘ್ರಿಗೆ । ಶೋಕ ಸಲ್ಲದೊ ನೇಮ
ಸ್ವೀಕರಿಸು ಎಮ್ಮ
ಏಕ ಭಕ್ತಿಯ ಭಾಗ್ಯ ಪಾಲಿಸು
ಶ್ರೀ ಕಳತ್ರನ ಸಂಗಮತ್ತನೆ ಅ–
ನೇಕ ಭಕ್ತಗ್ಹರಿಯ ತೋರಿದೆ
ನಾಕ ತರು ಕರುಣಾಳು ಗುರುವರ ೩

ದಾಸ ವರ್ಗದ ದೊರೆಯೆ । ಲಜ್ಜೆಯಾಗುತಿದೆನ್ನ
ದೋಷರಾಶಿಗಳೊರಿಯೆ
ಹಸಗೆಟ್ಟು ಬಗೆ ಬಿನ್ನೈಸಲಾಗದೊ ಖರಿಯೆ
ಬ್ಯಾಸರದ ಪೊರಿಯೆ
ಕಾಸು ಬಾಳದ ಎನ್ನಕರಗಳ
ಶ್ರೀಶ ಪಿಡಿವನು ಲೇಸು ಕರುಣದಿ
ವಾಸುದೇವಗೆ ದಾಸ ಜನರೊಳು
ಸೂಸಿ ಸುರಿವುದು ಸ್ನೇಹ ಸಂತತ ೪

ದಾತರೊಳು ಸರಿದಾರೊ । ಹರಿದಾಸವರ್ಯನೆ
ಆತುಮಪ್ರದ ತೋರೋ ನಿನ್ನಂಥ

ದಾತರ ನಾ ತಿಳಿಯ ದಯ ಬೀರೊ
ಆರ್ತಿಯನು ಹೀರೋ
ಖ್ಯಾತ ನಿನ್ನಯ ಮಾತು ಒಮ್ಮೆಗು
ಮಾತರಿಶ್ವನನಾಥ ಮೀರನು
ಆತುರದಿ ನಿನ್ನಂಘ್ರಿಗೆರಗುವೆ
ಭೂತ ಪಾಲಿಸು ಹರಿಯ ಒಲುಮೆಗೆ ೫

ಸುರಭಿ ಸುರತರು ಚಿಂತಾಮಣಿಗಳಂದದಿ ಮಹ
ವರಗಳೀವ ಶ್ರೀಮಂತ
ಭಾರತೀಶನ ಶ್ರೀ ಚರಣ ಬಿಡದಿಹ ಸ್ವಾಂತ
ಪರಮ ನಿಶ್ಚಿಂತ
ಚರಣ ಕಮಲದಿ ಮೊರೆಯನಿಟ್ಟನ
ಕರದ ಶಿಶುಗಳಂತೆ ಪಾಲಿಸಿ
ಮರುತ ಮಂದಿರ ಜಯೇಶವಿಠಲನ
ಭರದಿ ತೋರಿದ ಕರುಣ ಸಾಗರ ೬

## ೯೫

ಗುರುರಾಘವೇಂದ್ರ ಶರಣರ ಸುರ
ತರುವೆ ಕರುಣಸಾಂದ್ರ ಪ

ಧರೆಯೊಳು ನಿನ್ನ ಶ್ರೀ ಚರಣಕಮಲ ಪ್ರಭೆ
ಮೆರೆವೋದು ಬಹು ಪರಿ ಉದ್ಧರಿಸು ಈ ಶರಣನ್ನ ಅ.ಪ.

ವಿಮಲ ಸುಕೃತ ಸ್ವರೂಪ ದರುಶನ ಮಾತ್ರದಿ ಭವ
ಶ್ರಮ ಹರಿಸುವ ಪ್ರತಾಪ
ರಮೆ ಅರಸನ ಗುಣ ಸಮುದಾಯದೊಳು ಮಗ್ನ
ಭ್ರಮೆರಹಿತ ಸ್ಥಿರಚಿತ್ತ ನಮೋ ನಮೋ ನಿನಗೆ
ಅಮಿತ ಮತಿಯ ಕರುಣ ಕವಚವ

ಅಮಿತಕಾಲದಿ ಕೊಟ್ಟು ಮೆರೆಯುವ
ಅಮಿತ ಮಂಗಳದಾಯಿ ತತ್ವದ
ಕಮಲ ವೈಭವ ಸಲಹಲೆನ್ನನು ೧

ಪಾವನ ಸುಯತಿ ರನ್ನ ಲಾಲಿಸು ವಾಕು
ಸಾವಧಾನದಿ ಘನ್ನ
ಭೋವಿಧ ಭವ ಭವಣೆ ದಾವಾಗ್ನಿಯೊಳು ನೊಂದೆ
ಶ್ರೀ ವರನ ದಾಸ ಕಾವ ದೃಷ್ಟಿಯಲಿ ನೋಡೊ
ದೇವದೇವನೆ ನಿತ್ಯ ಮಂಗಳ
ಭಾವರೂಪ ಗುಣತ್ರಯಗಳ
ಆವ ಕಾಲಕು ಬಿಡದೆ ನೋಡುವ
ಭೂವಿ ಬುಧಮಣಿ ಪಾಲಿಸೆನ್ನನು ೨

ತುಂಗಾತೀರ ನಿವಾಸ ರಾಘವೇಂದ್ರ ಗುರು
ತುಂಗ ಮಹಿಮ ನಿರ್ದೋಷ
ಮಂಗಳಾಸಮಹರಿ ಗಂಗಾಪಿತನ ಕೂಡಿ
ತುಂಗಪೂಜೆಯ ಕೊಂಡ್ವರಂಗಳ ಬೀರುವ
ತಿಂಗಳಾಸ್ಯನ ಪಾದ ತೀರ್ಥದಿ ಭವ
ಭಂಗ ಬಗೆಯನು ಬಲ್ಲ ಮಹಾತ್ಮ
ರಂಗ ಜಯೇಶವಿಠಲ ದೇವನ
ಸಂಗ ನೀಡುವ ಕೃಪೆಯ ಮಾಳ್ಪ ೩

## ೯೬

ವಾಜಿವದನಾರ್ಚಕ ಶ್ರೀ ವಾದಿರಾಜ ಪ

ರಾಜೀವನಯನ ಶ್ರೀ ಕೃಷ್ಣನಲಿ ಬಿಡು ಎನ್ನ ಅ.ಪ.

ದೇವದೇವೇಶನ ಪರಮ ಒಲುಮೆಗೆ ಪಾತ್ರ
ಪಾವನ್ನತಮಚರಿಯ ಪತಿತಪಾಲ
ಸಾವಧಾನದಿ ಎನ್ನ ಆದಿರೋಗವನಳಿದು
ಕೇವಲ ಸದ್ಭಕ್ತಿ ಶೀಲನ ಮಾಡಯ್ಯ ೧

ಭಾರತೀಪತಿ ಪದವನ್ನೈದುವ ಮಹಾತ್ಮ
ಮಾರಾರಿಸುರ ಪೂಜ್ಯ ಕರುಣಿಸಿ ಕಾಯೊ
ಸಾರಿದೆನು ತವ ಚರಣ ಸರಸಿಜಯುಗ್ಮಗಳ
ದೂರ ಮಾಡದೆ ಹರಿಯ ಕರುಣಪಾತ್ರನ ಮಾಡು ೨

ಪರಮ ಭಾಗವತ ಶಿರೋರತುನರಿಂದರ್ಚಿತನೆ
ಶಿರಿ ವೇಣುಗೋಪಾಲ ವೇದ ವೇದ್ಯ
ಜಯೇಶವಿಠಲನ ಮನದಲ್ಲಿ ಬಿಡದಿಪ್ಪ
ಪರಮಕೃಪೆ ಬೇಡುವೆನು ಕರುಣಾಬ್ಧಿ ಕೃಪೆ ಮಾಡು ೩

## ೯೭

ಜಯರಾಯ ಭವಹರಣ ಪಾಲಿಸೆಮ್ಮ ಪ

ಜಯದೇವಿಪ್ರತಿ । ರೂಪ ಗುಣಕ್ರಿಯ ರತಯತಿಯೆ ಅ.ಪ.

ಅಮರೇಶ ಸ್ವರ್ಗಪದ ತೃಣಮಾಡಿ ಕ್ಷಿತಿಯಲಿ
ಅಮಿತಮತಿ ಶ್ರೀ ಪಾದ ಸೇವೆಗಾಗಿ
ಅಮಿತ ಭಾಗ್ಯವಿದೆಂದು ಪಶುವಾಗಿ ನೀನಿಂದು
ಭ್ರಮರವತ್ ಗುರುಚರಣ ಕಮಲ ಮಧು ಸೇವಿಸಿದೆ ೧

ತೃತಿ ಈಶರೆನಿಸುವ ಅಗ್ನಿ ಗರುಡ ಮಹರುದ್ರ
ಪ್ರತಿ ಕ್ಷಣದಿ ಅತಿ ಭಕುತಿ ಭಾರದಿಂದ
ನತಿಸಿ ಸೇವಿಪ ಪರಮ ಗುರುಚರಣವಾಶ್ರೈಸಿ
ದತಿ ಸುಕೃತನಿಧಿ ನಮ್ಮ ಅತಿದಯದಿ ಈಕ್ಷಿಪುದು ೨

ಶ್ರೀ ಭೂಮಿ ದುರ್ಗೇಶನ ಮತ ಮಂಗಳ ಮೂರ್ತಿ
ಶೋಭನಾಂತ ಗುಣಕ್ರಿಯ ನಿವಹಗಳನು
ಅದ್ಭುತದಿ ಧರಿಸಿಹಾ ಮಧ್ವಕೃತ ಗ್ರಂಥಗಳ
ಸದ್ಭಕ್ತಿಯಲಿ ಪೊತ್ತೆ ಸೌಭಾಗ್ಯನಿಧಿ ಗುರುವೆ ೩

ಪವಮಾನರಾಯನಾ ಕೃಪೆಯೆಷ್ಟೊ ನಿನ್ನಲ್ಲಿ
ಅವನಿಯೊಳು ಸಿದ್ಧಾಂತ ಗ್ರಂಥಗಳ ಟೀಕೆ
ಕವಿಶ್ರೇಷ್ಠನಿರಲಾಗಿ ನಿನ್ನಿಂದ ರಚಿಸಿದ ತ್ರಿ
ಭುವನ ಮಾನ್ಯನೆ ಧನ್ಯ ಧನ್ಯತೆಲಿ ಪೊರೆ ಎಮ್ಮ ೪

ಪಾರ್ಥನಾದಂದು ಶ್ರೀ ಯದುಪತಿಯ ಸಖ್ಯವನು
ಪೂರ್ತಿಪೊಂದಿದೆ ಸರ್ವ ಪುರುಷಾರ್ಥವೆಂದು
ಸ್ವಾರ್ಥಮತಿಯ ಹರಿಯ ಒಲಿಸಿದಾ ಮಹಾನಿಪುಣ
ಪ್ರಾರ್ಥಿಸುವೆ ತವ ಪಾದ ಪಾಂಶು ರಕ್ಷಿಸಲೆನ್ನ ೫

ದೇವಕೀಸುತ ನಿನ್ನ ಸಖನೆಂದು ಪವಮಾನ
ದೇವ ನಿನ್ನಲ್ಲಿ ಮಾಡಿದ ಪರಮ ಪ್ರೀತಿ
ಕೈವಲ್ಯ ಪತಿ ದಾಸ್ಯ ಪೂರ್ಣಪ್ರದ ಆರೂಢ
ಕೇವಲಾ ಕೃಪೆ ಮಾಡು ಹರಿದಾಸ ಮಣಿಗುರುವೆ ೬

ಭಾರತೀಪತಿಗೊಡೆಯ ಜಯೇಶವಿಠಲನ
ವೈರಾಗ್ಯ ಸಿದ್ಧಿಯಲಿ ಏಕಾಂತ ಪೊಂದಿ
ಭೂರಿ ಭಕ್ತಿಯಲಿ ಭಜಿಪ ಭವ ತರಣ ಸತ್ಪಾತ್ರ
ಸೂರಿ ಸುರಿದೆಯೊ ವೃಷ್ಟಿ ಹರಿಗುರುಗಳೊಲಿವಂತೆ ೭

## ೯೮*

ಅಪರಾಧ ಎನ್ನದಯ್ಯ ಹೇ ಗುರುವರ್ಯ ಪ

ಅಪರಾಧ ಎನ್ನದಯ್ಯ ಅಪರಿಮಿತವು ಸರಿ
ಕೃಪೆಯು ಮಾಡಲಿ ಬೇಕು ಕೃಪಣವತ್ಸಲ ಗುರುವೆ ಅ.ಪ.

ಹಡೆದ ತಾಯಿ ಶಿಶುವ ಬಡಿದು ಕೊಂದರೆ ತೃಣವು
ಬಿಡಿಸಿಕೊಳ್ಳಲು ಬಲ್ಲುದೆ ಜಡಕೆ ಸಮವಾದದ್ದು
ಒಡೆಯ ನೀ ಎನ್ನಯ ಅಸ್ವಾತಂತ್ರ ಎಣಿಸದೆ
ಬಿಡುವೆನೆಂದರೆ ನಿನಗೆ ತಡೆಯ ಬರುವರು ಯಾರೈ ೧

ದೀನವತ್ಸಲ ಕೇಳು ಅನೇಕ ಜನ್ಮದೊಳು
ನಾನಾ ಪರಿಯೊಳು ನೊಂದು ಸೇರಿದೆ ನಿನಗೆ ಬಂಧು
ಏನು ಪೇಳದೆ ಎನ್ನ ಕಾನನದಲಿ ಬಿಟ್ಟು
ಶ್ರೀನಾಥನ ಸೇರಿದಿ ಅನಾಥನ ಮಾಡಿದಿ ಎನ್ನ ೨

ಬ್ಯಾರೆ ಉಪಾಯವಿಲ್ಲ ಸಾರಿದೆ ನಿನಗಯ್ಯ
ಕಾರುಣ್ಯ ನಿಧಿಯೆ ಅಪಾರ ಕರುಣಮಾಡಿ
ಮಾರಪಿತನಾದ ಜಯೇಶವಿಠಲನ್ನ
ಆರಾಧನೆಯಲಿ ಸತತ ಧಾರಾಳ ಮತಿನೀಡೋ ೩

## ೯೯**

ಪ್ರಸನ್ನವಿಠಲ ಪಾಲಿಸಿವನ ಪ

ಅಸತ್ಯದಲಿ ಮನವಿಡದೆ ಆಸಕ್ತಿ ನಿನ್ನಲ್ಲಿ ಕೊಟ್ಟು ಅ.ಪ.

---

* ವಿಜಯ ರಾಮಚಂದ್ರವಿಠಲರು ಸ್ವರ್ಗಸ್ಥರಾದ ಸಂದರ್ಭದಲ್ಲಿ ರಚಿತವಾದದ್ದು
** ಹೊಳವನಹಳ್ಳಿ ನರಸಿಂಗರಾಯರಿಗೆ ನೀಡಿದ ಅಂಕಿತ ಪದ

ದೃಢ ನಿನ್ನ ಭಕ್ತರಲಿ ಕೊಡುಭಕ್ತಿ ವಿರಕ್ತಿ
ದೃಢ ಜ್ಞಾನ ನಿನ್ನಲ್ಲಿ ಬಿಡದೆ ನಿತ್ಯ
ಮಡದಿ ಮಕ್ಕಳ ಕೂಡಿ ನಿನ್ನ ಸೇವೆ ಸಲ್ಲಿಸಲಯ್ಯ
ಕಡಲಸುತೆ ಶ್ರೀ ರಮಣ ಬೆಂಬಲನು ನೀನಾಗು ೧

ಸಜ್ಜನರ ಪದಧೂಳಿ ಆಗಿರಲಿ ಎಂದೆಂದು
ದುರ್ಜನರ ಸಹವಾಸ ಕೊಡಬೇಡವಯ್ಯ
ಬೊಜ್ಜೆಯಲಿ ಮೂರ್ಜಗವ ಪೊತ್ತ ಮಹಾತ್ಮ ಇವನ
ಹೆಚ್ಚಾಗಿ ಪೊರಿ ಬಿಡದೆ ಅಚ್ಚ ಮಾರ್ಗದಿ ಇಟ್ಟು ೨

ನಿನ್ನ ನಾಮಾಮೃತ ಸತತ ಸುಖ ಸವಿಯಲಿ ಸ್ವಾಮಿ
ಬನ್ನ ಬಡಿಸಲಿ ಬೇಡ ತರಳನಿವನು
ಉನ್ನತೋನ್ನತ ಮಹಿಮ ಜಯೇಶವಿಠಲ
ಮನ್ನಿಧಿ ನೀನೆಂದು ಪ್ರಾರ್ಥಿಸುವೆ ಕೈಪಿಡಿದು ೩

## ೧೦೦ *

ಶ್ರೀಗುರು ಜಯೇಶವಿಠಲನೆ ಪಾಲಿಸಯ್ಯ
ಈ ಸತಿಯ ಕರಪಿಡಿದು ಪ

ಸರ್ವಮಂಗಳ ಮೂರ್ತಿ ಸರ್ವೇಶ ಶರ್ವಸಖ
ಸರ್ವತ್ರ ಒಡನಿದ್ದು ಸಲಹು ಸತತ
ಉರ್ವಿಯಲಿ ಸತ್ಕೀರ್ತಿ ಸಂಪದದಿ ನಿಲಿಸಿವಳ
ನಿರ್ವ್ಯಾಜದಲಿ ಪೊರೆಯೊ ನಿತ್ಯ ತೃಪ್ತ ೧

ಗುಣವಂತಳನು ಮಾಡು ಗುಣ ಗಣಾಂಬುಧಿ ದೇವ
ಘನವೆನಿಸು ಈ ಸತಿಯ ಸಂಸಾರವೆಲ್ಲ
ಅನಿಲ ಜನರಲಿ ನಿಲಿಸು ಅನುಕೂಲ ನೀನಾಗಿ
ದನುಜಾರಿ ಸಂಪದವ ಹರುಷದಲಿ ಬೆಳೆಸುವುದು ೨

---

* ದಾಸರು ತಮ್ಮ ಪತ್ನಿ ಕಮಲಾಬಾಯಿ ಅವರಿಗೆ ನೀಡಿದ ಅಂಕಿತಪದ

ಶೀಲ ಭಕ್ತಿ ಜ್ಞಾನ ಸತತ ಸಜ್ಜನ ಸಂಘ
ಮೇಲಾಗಿ ನೀಡುವುದು ಮೈದುನನ ಸೂತ
ಪಾಲುಸಾಗರದೊಡೆಯ ಜಯೇಶವಿಠಲನೆ
ಕೊರತೆ ಇಲ್ಲದೆ ನೀಡು ಕಲ್ಯಾಣ ಈ ಸತಿಗೆ ೩

## ೧೦೧*

ಶ್ರೀ ಪರಾತ್ಪರವಿಠಲ ಪಾಲಿಸಿವರ ಪ

ಚರಾಚರಾತ್ಮಕದೇವ ಪರಮ ಪ್ರೀತಿಯಿಂದ ಅ.ಪ.

ಜಗನ್ಮಂಗಳ ಮೂರ್ತಿ ಭಾಗವತ ಪ್ರಧಾನ
ಸಾಗರೋಪಮ ಭಕ್ತಿ ಪ್ರದದೇವ
ಬಾಗಿ ಬೇಡುವೆ ವಿಜ್ಞಾನರೂಪದಿ ನಿನ್ನ ೧

ಭಾಗವತೋತ್ತಮರ ಪದ್ಧತಿಯಲಿ
ಗುಪ್ತಸಾಧನ ಪಾಲಿಸು
ಶುಕಾನುಬಂಧದಿ ಶುಕಪ್ರೇಮ ಪಾತ್ರನಾಗಿ
ಸುಖಮಯನ ಭಜಿಸುತಿರಲಿ ೨

ಆಪ್ತತಮ ಗುಣಸಮುದ್ರ ಶ್ರೀಜಯೇಶ-
ವಿಠಲ ಪೂರ್ಣ ಪ್ರೀತಿಯಲಿ
ನಿತ್ಯ ಭಾಗವತರ ಸಂಗದಲಿಟ್ಟು
ನಿರುಪಮ ಸುಖನೀಡು ೩

---

*ಶ್ರೀ ಸಿರಿಗುರಿ ನಾರಾಯಣರಾಯರಿಗೆ ನೀಡಿದ ಅಂಕಿತಪದ

## ೧೦೨

ದಂತಿವದನ ವಿಘ್ನದಂತಿನಿಚಯಕೆ ಹರಿ
ದಂತಿವರದನ ಪ್ರಪೌತ್ರ ವಿನಂತಿಯ ಕೇಳೊ ಪ

ಕಂತುವೈರಿಯ ಪುತ್ರ ಪರಮ ಪವಿತ್ರ
ಸಂತತ ಪೊರೆ ಸುಚರಿತ್ರ ರಹಿತ ಕಳತ್ರ ೧

ಸಾದರಲಿ ನಿನ್ನಾರಾಧಿಸುವೆ ಮುನ್ನ
ನೀ ದಯದಿ ವಿಘ್ನ ನಿವಾರಿಸೊ ಮೋದಕ ಪ್ರಿಯಾ ೨

ರಂಗೇಶವಿಠಲನ ರಾಗದಿಂ ಪಾಡುತ
ಮಂಗಳ ಮೂರುತಿಯೆ ಉತ್ತಂಗ ಪ್ರಭಾವ ೩

## ೧೦೩

ಶರಣು ಗಜಾನನನೆ ಶರಣು ಲಂಬೋದರನೆ
ಶರಣು ಪಾರ್ವತಿ ಪುತ್ರ ಶುಭಗಾತ್ರ ಪ

ಆದಿಯಲಿ ನಿನ್ನ ಪಾದಭಜನೆಯ ಮಾಡೆ
ಸಾದರದಿ ಸಲಹುವೆ ಮೋದವಿತ್ತು
ಮೇದಿನಿಯಲಿ ನಿನ್ನಾರಾಧನೆಯ ಮಾಡದವ ನ–
ರಾಧಮನೆನಿಸುವನಿದು ಪುಸಿಯಲ್ಲ ೧

ಆಖುವಾಹನನೆ ನೀ ಕಳೆ ವಿಘ್ನಗಳ
ಸಾಕು ಲಾಲಿಸೆನ್ನ ಏಕದಂತ
ರಾಕೇಂದುವದನಾನೇಕ ಮಣಿ ಭೂಷಣ
ಕಾಕುಜನ ಕುಠಾರ ಲೋಕೈಕ ವೀರ ೨

ಸಿತಿಕಂಠ ವರಪುತ್ರ ಪ್ರತಿ ವಾಸರವು ನಾ
ನುತಿಸಿ ಬೇಡುವೆ ನಿನ್ನ ಸತಿರಹಿತನೇ
ಪತಿತಪಾವನ ಸಿರಿ ರಂಗೇಶವಿಠಲನ
ಅತಿಪ್ರೀತಿಯಿಂದ ಭಜಿಪ ಮತಿಯ ನೀಡೋ ೩

## ೧೦೪

ಅನ್ಯ ದೇವರ ನಾನರಿಯೆ ಸಿರಿಹರಿಯೆ ಪ

ಎನ್ನ ಬಿನ್ನಪ ಕೇಳಯ್ಯ ದೊರೆಯೆ ಅ.ಪ

ಹರಬೊಮ್ಮಾದಿಗಳಿಂದ ವರಪಡೆದ ರಾವಣ
ಸರುವ ಲೋಕಂಗಳನೆಲ್ಲ ಗೆಲಿದು ಬಂದು
ಸಿರಿರಮಣನೆ ನಿನ್ನೊಳು ದ್ವೇಷವನೆ ಮಾಡಿ
ತರು ಮೃಗಗಳಿಂದಪರಾಜಿತನಾದನಯ್ಯಾ ೧

ದೃಷ್ಟಾಂತಗಳನ್ನೆಷ್ಟು ತೋರಲಿ ನಾನು
ದುಷ್ಟ ಜನರೆಲ್ಲ ಪಟ್ಟ ಬವಣೆಗಳಿಗೆ
ಶ್ರಿಷ್ಟಿಗೊಡೆಯನೆ ನಾ ಮನಮುಟ್ಟಿ ನುತಿಸುವೆ
ಶಿಷ್ಟ ಜನರ ಸಂಗದೊಳಿಟ್ಟೆನ್ನ ಸಲಹಯ್ಯಾ ೨

ಮೂರು ಕರಣಗಳಿಂದ ನಾ ನಿನ್ನ ನಂಬಿಹೆನು
ಮಾರುತೀಶನೆ ನಿನ್ನ ಚರಣವ ತೋರಿ
ಗಾರು ಮಾಡದೆ ನೀ ಸಲಹಬೇಕೆಂಬೆನು
ಕಾರುಣ್ಯದಿಂದಲಿ ಶ್ರೀ ರಂಗೇಶವಿಠಲ ೩

## ೧೦೫

ಆರತಿ ಮಾಡಿರೆ ನೀರೆಯರೆಲ್ಲರು
ಮಾರಮಣನಾದ ಶ್ರೀರಂಗರಾಜನಿಗೆ ಪ

ನೀರೊಳು ಮುಳುಗುತ ಭಾರ ಬೆನ್ನಲಿ ಪೊತ್ತು
ಕೋರೆಯೆ ತೋರಿದ ನಾರಸಿಂಹನಿಗೆ ೧

ಪೋರ ರೂಪನಾದ ಧೀರ ಪರಶುಧರಗೆ
ಶ್ರೀ ರಘುರಾಮನೆಂಬ ಚೋರ ಶಿಖಾಮಣಿಗೆ ೨

ಚಾರು ಬೌದ್ಧನಿಗೆ ವೀರ ರಾಹುತಗೆ
ನೀರಜನಾಭನಾದ ಶ್ರೀ ರಂಗೇಶವಿಠಲಗೆ ೩

## ೧೦೬

ಎಂಥ ಶೂರನೊ ರಾಮ ಎಂಥ ಧೀರನೊ ಪ

ಕಂತುಹರನ ಧನುವನೆತ್ತ
ಪಂಥದಿಂದ ಮುರಿದು ಬಿಸುಟ ಅ.ಪ.

ಹಲವು ಶೂರರಾಜರದನು
ಚಲಿಸಲಾಗದ ಧನುವ
ಸುಲಭದಿಂದಲೆತ್ತಿ ಮುರಿದು
ಲಲನೆ ಸೀತೆಯೊಲಿಸಿದವನು ೧

ಸಕಲ ಕ್ಷತ್ರಿಯರನು ಗೆಲಿದು
ಪ್ರಕಟನಾದ ಪರಶುರಾಮ
ಶಕುತಿಯನ್ನು ತಾನು ಪರಮ
ಯುಕುತಿಯಿಂದ ಗೆಲಿದು ಬಂದ ೨

ಸಾಲು ಶಿರನ ಕೀಟವೆಂದು
ಬಾಲದಲ್ಲಿ ತಂದ ವೀರ
ವಾಲಿಯನೇಕ ಬಾಣದಲಿ
ಲೀಲೆಯಿಂದಲಿರಿದ ಜಾಣ ೩

ಹತ್ತನಾಲ್ಕು ಲೋಕಗಳನು
ಸುತ್ತಿಗೆಲಿದು ಖ್ಯಾತನಾದ
ಹತ್ತು ತಲೆಯ ದುಷ್ಟನನ್ನು
ಕತ್ತು ಕಡಿದು ಕೆಡಹಿದವನು ೪

ರಾಸಿ ದೈತ್ಯರನ್ನು ಕೊಂಡು
ದೇಶವನ್ನು ಉದ್ಧರಿಸಿದ
ವಾಸವಾದಿ ಸುರನುತ ರಂ-
ಗೇಶವಿಠಲರೇಯನವನು ೫

## ೧೦೭

ಏನು ಕರ್ಮವ ಮಾಡಿ ನಾ ನಿನ್ನ ಒಲಿಸಲಿ ಶ್ರೀನಿವಾಸ
ಧ್ಯಾನಕೆ ನಿಲುಕದ ಜ್ಞಾನಿಗಳರಸ ನೀನು ಶ್ರೀನಿವಾಸ ಪ

ಗಂಗೆಯ ತಂದು ಮಂಗಳಸ್ನಾನ ಮಾಡಿಸೆ ಶ್ರೀನಿವಾಸ
ಗಂಗೆಯು ನಿನ್ನಂಗುಷ್ಟದಲ್ಲಿಹಳಲ್ಲೊ ಶ್ರೀನಿವಾಸ ೧

ಮನಮೆಚ್ಚುವಂತೆ ನಿನ್ನ ಸುಮಗಳಿಂದರ್ಚಿಪೆನೆ ಶ್ರೀನಿವಾಸ
ವನಜ ಪುಷ್ಪವು ನಿನ್ನ ನಾಭಿಯೊಳಿಹುದಲ್ಲೋ ಶ್ರೀನಿವಾಸ ೨

ಅಂಗಿವಸ್ತ್ರಗಳಿಂದ ಶೃಂಗರಿಸುವೆನೆಂದರೆ ಶ್ರೀನಿವಾಸ
ಅಂಗನೆ ಲಕುಮಿ ಸಕಲಾಭರಣಂಗಳಾಗಿರುವಳಲ್ಲೊ ಶ್ರೀನಿವಾಸ ೩

ಅನ್ನ ಪಾನಗಳಿತ್ತು ಧನ್ಯನಾಗುವೆನೆ ಶ್ರೀನಿವಾಸ
ಅನ್ನಪೂರ್ಣೆ ಷಡುರಸದನ್ನವ ಮಾಳ್ಪಳಲ್ಲೊ ಶ್ರೀನಿವಾಸ ೪

ಕಡುಭಕ್ತಿಯಿಂದ ನಿನ್ನಡಿ ಸೇವೆ ಮಾಳ್ಪೆನೆ ಶ್ರೀನಿವಾಸ
ಎಡಬಿಡದೆ ಹನುಮ ನಿನ್ನಡಿಯ ಪಿಡಿದಿಹನಲ್ಲೊ ಶ್ರೀನಿವಾಸ ೫

ಜಗದುದರ ನಿನ್ನ ಬಗೆ ಬಗೆ ನಾಮಗಳ ಸ್ತುತಿಸೆ ಶ್ರೀನಿವಾಸ
ಅಗಣಿತವಾಗಿಹುದು ಮುಗಿಯದಂತಿಹುದಲ್ಲೊ ಶ್ರೀನಿವಾಸ ೬

ಶ್ರಿಷ್ಟಿಕರ್ತ ಶ್ರೀ ರಂಗೇಶವಿಠಲನೆ ಎಂಬೆ ಶ್ರೀನಿವಾಸ
ಇಷ್ಟೆಂದ ಮಾತ್ರಕೆ ಒಲಿದಿಷ್ಟವ ಸಲಿಸೈಯ್ಯಾ ಶ್ರೀನಿವಾಸ ೭

## ೧೦೮

### ಉಗಾಭೋಗ

ಏನೇನು ಪಾಟು ಬಿದ್ದರು ಮುನ್ನ
ನಾನು ಮಾಡಿದ ಕರ್ಮ ಬೆಂಬಿಡದಿರೆ
ಶ್ರೀನಿವಾಸನೆ ನಿನ್ನಲನುಗಾಲ
ಧ್ಯಾನಿಸಲೇಕೊ ಸ್ವಾಮಿ
ನೀನೊಲಿದ ಮೇಲೆ ಪೂರ್ವಾಜಿತ ಕರ್ಮ
ವೇನು ಮಾಡಬಲ್ಲದು
ಹೀನ ಮಾನವರಿದನರಿಯದೆ
ನಾನಾ ಪ್ರಕಾರದಿ ತೊಳಲುವರು
ಶ್ವಾನನಂದದಿ ಭವದೊಳಗೆ ನಿನ್ನ ಮರೆದು
ಏನು ಕಷ್ಟ ಬಂದರೂ ಬರಲಿ
ನಾ ನಿನ್ನ ಮರೆಯೆನೊ ದೇವರದೇವ
ಸಾನುರಾಗದಿ ಸಲಹೆನ್ನ
ಶ್ರೀನಿಧಿ ರಂಗೇಶವಿಠಲ

## ೧೦೯

ಏಳು ರಂಗಯ್ಯ ನೀನೇಳು ಕೃಷ್ಣಯ್ಯ
ಏಳಯ್ಯ ದೊರೆ ಬೆಳಗಾಯಿತೇಳೆಂದು
ಪಾಲ್ಗಡಲೊಡೆಯ ಹರಿಯನೆಬ್ಬಿಸಿದಳಂದು
ಬಾಲೆ ಯಶೋದೆಯು ಬಹು ಸಂಭ್ರಮದಿಂದ ಪ

ಶಕ್ರನುಪಟಳವ ನೀ ಪರಿಹರಿಸಬೇಕು
ವಿಕ್ರಮದಿ ಗೋವರ್ಧನ ಎತ್ತಬೇಕು
ಅಕ್ರೂರ ಬಂದು ಕಾದಿಹನು ರಥ ಸಹಿತ
ಚಕ್ರಧರ ನಿನ್ನ ಮಧುರೆಗೆ ಕರೆದೊಯ್ಯೆ ೧

ಮಾವ ಕಂಸನು ನಿನ್ನ ಬಾ ಎಂದನಂತೆ
ಸಾವು ಅವನಿಗೆ ಸಮೀಪದಲಿದೆಯಂತೆ
ದೇವಕಿ ವಸುದೇವ ಸೆರೆಯಲಿರುವರಂತೆ
ಕಾವುದಕೆ ನೀ ಪೋಗಲೇಬೇಕಂತೆ ೨

ಬಿಲ್ಲುಬ್ಬದಲಿ ಜಯಶೀಲನಾಗಬೇಕು
ಖುಲ್ಲ ರಕ್ಕಸ ದಲ್ಲಣನೆನಿಸಬೇಕು
ಮಲ್ಲಮರ್ದನ ಮಾರುತಿಯ ಕರೆಯಬೇಕು
ಬಲ್ಲಿದ ಮಗಧನ ಕೊಲ್ಲಿಸಲುಬೇಕು ೩

ದೇವಿ ದ್ರೌಪದಿಗೆ ಸುಚೇಲವೀಯಬೇಕು
ಭಾವಮೈದುಗೆ ಬೋವನಾಗಬೇಕು
ಪಾವಿನ ಶರದಿಂದವನ ಪೊರೆಯಬೇಕು
ಯಾವತ್ತು ಭೂ ಭಾರವನಿಳುಹಬೇಕು ೪

ಮಧ್ವರಾಯರ ಹೃತ್ಪದ್ಮದಿ ನಿಲಬೇಕು
ಇದ್ದು ಉಡುಪಿಯೊಳು ಪೂಜೆಗೊಳಲುಬೇಕು
ಶುದ್ಧ ವೈಷ್ಣವರಿಷ್ಟಗಳ ಸಲಿಸಬೇಕು

ಮುದ್ದು ರಂಗೇಶವಿಠಲನೆನಿಸಬೇಕು ೫

## ೧೧೦

ಕಂಡು ಹೇಳಿಕೊಂಡೆನೆನ್ನ ಕಷ್ಟವ । ರಂಗನನು ಪ

ಕಂಡ ಹೇಳಿಕೊಂಡೆನೆನ್ನ ಕಷ್ಟವ ಅ.ಪ.

ಒಡವರಾದ ಭೃತ್ಯ ಜನರು
ಕುಡಿದ ನೀರು ಕದಲದಂತೆ
ಒಡಲ ಸಲಹಿಕೊಂಡು ಬರುವ
ಕಡಲಶಯನನಾದ ಹರಿಯ ೧

ಜಗವ ಪೊರೆವ ದೇವ ಕುಂತಿ
ಮಗನ ರಥಕೆ ಸೂತನಾಗಿ
ಮಗುಳೆ ಭುಜಗ ಶರವು ಅವನ
ತಗಲದಂತೆ ಮಾಡಿದವನ ೨

ಭಕುತ ಜನರು ಮಾಡಿದಂಥ
ಸಕಲ ದುರಿತಗಳನು ಕಳೆದು
ಮುಕುತಿ ಮಾರ್ಗ ತೋರುತಿರುವ
ಶಕುತ ರಂಗೇಶವಿಠಲನ ೩

## ೧೧೧

ಕಂಡೆನೆನ್ನ ದೊರೆಯ ಲಕುಮಿಯ । ಗಂಡನೆನಿಪ ಹರಿಯ ಪ

ಕುಂಡಲಿಶಯನನಿರುವ ಪರಿಯ । ಪದ
ಪುಂಡಲೀಕ ಸೇವಿಪ ಪರಿಯ ಅ.ಪ.

ಸಿರಿರಂಗ ಪುರಿಗೆ ಬಂದು । ವಿರಜಯೆನಿಪ
ವರ ಕಾವೇರಿಯೊಳು ಮಿಂದು
ನಿರುಪಮ ರಂಗಮಂದಿರದಿ ನಿಂದು । ನಮ್ಮ
ಸಿರಿ ರಂಗರಾಜನ ಕಂಡೆನಿಂದು ೧

ಇಂದೆನ್ನ ಭಾಗ್ಯಕೆಣೆಯಿಲ್ಲ ಈ
ಮಂದಸ್ಮಿತನ ಕಂಡೆನಲ್ಲ
ಹಿಂದಿನ ಪುಣ್ಯ ಫಲಿಸಿತಲ್ಲ ಇನ್ನು
ಮುಂದಕೆ ಬಹು ಸಾಧನವಾಯಿತಲ್ಲ ೨

ವಾಸುಕಿಶಯನನಾಗಿರುವ । ಬಲು
ಸೋಸಿನಿಂದ ಗರುಡನೇರಿ ಮೆರೆವ
ದೋಷರಾಶಿಗಳ ತರಿವ । ತನ್ನ
ದಾಸರ ಪ್ರೀತಿಯಲಿ ಪೊರೆವ ೩

ಇಂದಿರೆ ರಮಣನಂದನ ಕಂದ । ತಾನು
ಇಂದೆನಗೆ ಒಲಿದು ದಯದಿಂದ
ಸಂದರುಶನವಿತ್ತು ಆನಂದಾಮಿಗೆ
ಪೊಂದಿಸಿ ದಾಟಿಸಿದ ಭವದಿಂದ ೪

ಸಂದು ಹೋದವಘಗಳೆಲ್ಲವೆಂದ । ಇನ್ನು
ಮುಂದೆನಗೆ ಭಯವಿಲ್ಲವೆಂದ
ಸುಂದರ ರಂಗೇಶವಿಠಲ ಬಂದ । ಮನ
ಮಂದಿರದಿ ನೆಲೆಯಾಗಿ ನಿಂದ ೫

## ೧೧೨

### ಉಗಾಭೋಗ

ಕಮಲಮಾರ್ಗಣಪಿತ ನಿನ್ನ
ಸಮವಾದ ದೈವಗಳ ನಾ ಕಾಣೆ
ಕಮಲಜಾಂಡದೊಳಗೆ ಜಗಕೆ ಗುರುವೆನಿಪ

ಕಮಲಭವನ ನೀ ಪೆತ್ತೆ ಜಗನ್ಮಾತೆಯಾ
ಕಮಲಾಲಯೆಗೆ ನೀ ಪತಿಯಾದೆ
ಕಮಲಸಖ ಕೋಟಿತೇಜ ನಿನ್ನ ಪಾದ
ಕಮಲವನೆನ್ನ ಹೃತ್ಕಮಲದೊಳು ತೋರಿ ಸಲಹೊ
ಕಮಲಾಕ್ಷ ಶ್ರೀ ರಂಗೇಶವಿಠಲ

## ೧೧೩

ಕರುಣಿಸು ಕರುಣಿಸು ಪರಮ ಪುರುಷ ರಂಗ ಪ

ಕರಿಯ ಮೊರೆ ಕೇಳಿ ಹರಿತಂದಂತೆನ್ನಾ ಅ.ಪ

ನೀರೊಳು ಮುಳುಗುತ ಗಿರಿಯ ಬೆನ್ನಲಿ ಪೊತ್ತ
ಕೋರೆಯ ತೋರುತ ನರಹರಿಯಾದರು ಬಿಡೆನೊ ೧

ನೀನೆ ತರಿದುಂಡರು ನಾ ನಿನ್ನ ಬಿಡುವೆನೆ
ಮೌನಿ ಕುವರನಾಗಿ ಜನಿಸಿದರು ಬಿಡೆನೊ ೨

ಪುರವ ಕಳೆದು ವನಕೆ ತೆರಳಿದರು ಬಿಡೆನೊ
ಉರಗನ ಮಡುವಿನೊಳು ಸರಿದರು ನಾ ಬಿಡೆನೊ ೩

ದಿಗಂಬರ ನೀನಾಗಿ ಹಗರಣವ ಮಾಡಲು
ಮಗುಳೆ ತೇಜಿಯನೇರಿ ಪೋಗಲು ನಾ ಬಿಡೆನೊ ೪

ಗರುಡನ ಹೆಗಲೇರಿ ತಿರುಗಿದರು ಬಿಡೆನೊ
ಸಿರಿ ರಂಗೇಶವಿಠಲನೀ ಕರೆಕರೆಗೊಳಿಸದೆ ೫

## ೧೧೪

ಕಾವೇರಿ ತೀರದಲಿ ನಿಂದಿರುವ ರಂಗಯ್ಯ
ಕಾವುದೆಮ್ಮನು ನೀನು ದೇವರಂಗಯ್ಯ ಪ

ಭಾವಮೈದುನಗೆ ಬೋವನಾದ ರಂಗಯ್ಯ
ನೋವುಬಾರದಂತವನ ಕಾಯ್ದೆ ರಂಗಯ್ಯಾ ೧

ಮಾಯವಾದಿಗಳ ಸಂಗ ಬಿಡಿಸೋ ರಂಗಯ್ಯ
ತೋಯಜಾಕ್ಷನೆ ಬೇಡುವೆ ಸ್ವಾಮಿ ರಂಗಯ್ಯ ೨

ಏಸು ಕಷ್ಟವ ಇತ್ತರೂ ಸಹಿಸುವೆ ರಂಗಯ್ಯ
ದಾಸತ್ವ ಮಾತ್ರ ದಯಮಾಡೊ ರಂಗಯ್ಯ ೩

ಸತ್ತು ಹುಟ್ಟುವಿಕೆ ಬಿಡಿಸಿ ಸಲಹೊ ರಂಗಯ್ಯ
ಮತ್ತೇನು ಬೇಡೆನು ಮಮ ಬಂಧು ರಂಗಯ್ಯ ೪

ರಂಗೇಶವಿಠಲ ನೀನಲ್ಲವೆ ರಂಗಯ್ಯ
ಭಂಗಪಡಲಾರೆ ಭವಹಿಂಗಿಸು ರಂಗಯ್ಯ ೫

## ೧೧೫

ಕೋಲು ಕೋಲೆನ್ನ ಕೋಲೆ ರನ್ನದಾ
ಕೋಲು ಕೋಲೆನ್ನ ಕೋಲೆ ಪ

ಅಂಜಾನೆ ಗಿರಿಯಲ್ಲಿ । ಸಂಜೀವರಾಯ ಸಹ
ಕಂಜನಾಭನಿರುವ । ಅಂಜಿಕ್ಯಾತಕಮ್ಮ ೧

ಮೂಡಲು ಗಿರಿವಾಸ । ನಾಡಿಗೊಡೆಯನೆಂದು
ಪಾಡುವವರ ದೋಷ । ಓಡಿಸುವನಮ್ಮ ೨

ವೆಂಕಟರಮಣನು । ಕಿಂಕರ ಜನಗಳ
ಸಂಕಟಗಳ ಕಳೆವ । ಶಂಕೆ ಇಲ್ಲವಮ್ಮ ೩

ಈಶ ಶ್ರೀನಿವಾಸ । ದಾಸ ಜನರ ಪೋಷ
ರಾಶಿ ದೋಷ ಸುಟ್ಟು । ಲೇಸುಗೈವನಮ್ಮ ೪

ಮತ್ಸ್ಯ ಮೂರುತಿ ತ । ನ್ನಿಚ್ಛೆಯಿಂದಲಿ ಬಲು
ತುಚ್ಛ ದೈತ್ಯನನು । ಕೊಚ್ಚಿ ಬಿಸುಟನಮ್ಮ ೫

ಕಮಠ ರೂಪನಾಗಿ । ಅಮಿತ ಭಾರ ಪೊತ್ತು
ಸುಮನಸರಿಗಮೃತ । ಮಮತೆಲಿತ್ತನಮ್ಮ ೬

ಕ್ರೋಡಾಕಾರನಾಗಿ । ರೂಢಿಚೋರನಾದ
ಹೇಡಿ ರಕ್ಕಸನ । ತೀಡಿ ಕೊಂದನಮ್ಮ ೭

ಘೋರ ರೂಪ ಕೊಂಡು । ಕ್ರೂರ ರಕ್ಕಸನ
ದೋರೆ ಕರುಳಕಿತ್ತು । ಪೋರನ ಪೊರೆದನಮ್ಮ ೮

ಪುಟ್ಟ ಪೋರನಾಗಿ । ಬೆಟ್ಟದಂತೆ ಬೆಳೆದು
ದಿಟ್ಟ ಬಲಿಯ ಶಿರವ । ಮೆಟ್ಟಿ ತುಳಿದನಮ್ಮ ೯

ತಾತನ ನುಡಿ ಕೇಳಿ । ಕಾತರನಾಗದೆ
ಮಾತೆಯ ಶಿರವನ್ನು । ತಾ ತರಿದಿಟ್ಟನಮ್ಮ ೧೦

ಸೀತೆಯ ಬಿಡಿಸಲು । ಸೇತುವೆಯನು ಕಟ್ಟಿ
ಭೂತನನ್ನು ಕೊಂದು । ಖ್ಯಾತಿಗೊಂಡನಮ್ಮ ೧೧

ದ್ವಾರಕಪತಿ ತಾನು । ನಾರಿ ಪಾಂಚಾಲೆಯು
ಕೋರಿದ ಕ್ಷಣದಲ್ಲಿ । ಸೀರೆಯ ನೇದನಮ್ಮ ೧೨

ಚಿತ್ತಜನಯ್ಯನು । ಅತ್ತಿತ್ತ ಅಲೆಯುತ
ಬೆತ್ತಲೆ ನಾರಿಯರ । ಮುತ್ತುಗೊಂಡನಮ್ಮ ೧೩

ಜಲಜನಾಭನು ತಾ । ಕಲಿಗಾಲ ಕಡೆಯಲ್ಲಿ
ಹಲವು ಪಾಪಿಗಳನು । ಛಲದಿ ಕೊಂದನಮ್ಮ ೧೪

ಮುಟ್ಟಿ ಭಜಿಸುವರಿಗೆ । ಇಷ್ಟವಾದ ವರವ
ಕೊಟ್ಟನು ರಂಗೇಶ । ವಿಠಲ ಕೇಳಮ್ಮ ೧೫

## ೧೧೬

ಗರುಡನೇರಿ ಬಂದ ಸಿರಿರಮಣನು ತಾನು ಪ

ಗರುಡನೇರಿ ಬಂದ ಸಿರಿರಮಣನು ತನ್ನ
ಶರಣ ಕರುಣದಿ ಪೊರೆಯಲೋಸುಗ ಭರದಿ ಅ.ಪ.

ಕರಿರಾಜನು ಅಂದು ಕ್ರೂರ ನಕ್ರಗೆ ಸಿಲ್ಕಿ
ತೆರವಿಲ್ಲದೆ ಕೂಗುತ ಚೀರುತಿರಲು
ಸುರರು ಮೊದಲಾಗಿ ಸತಿಸುತ ಬಾಂಧವರು
ಅರಿತು ಅರಿಯದಂತೆ ತ್ರಾಸದಿಂದ್ದಾಗ ೧

ಉತ್ತಾನಪಾದನು ಚಿತ್ತದಿ ಮರುಗದೆ
ಮತ್ತೆ ಬಾಲನ ಕರೆದು ಮನ್ನಿಸದೆ
ಅತ್ತ ಸಾರೆಂದು ಸುರುಚಿ ನೂಕಿದ ಮೇಲೆ
ಚಿತ್ತಜನಯ್ಯನ ಸ್ಮರಿಸಿದ ಮಾತ್ರದಿ ೨

ನೀಚ ರುಕ್ಮನು ತನ್ನನುಜಾತೆಯನಂದು
ಮಾಚಿಸಿ ಶಿಶುಪಾಲಗೀವೆನೆಂದು
ಯೋಚಿಸಿ ಮನದೊಳು ಹರಿಯ ದೂರುತಲಿರೆ
ತಾ ಚಿಂತೆ ತಾಳಿದ ರುಕ್ಮಿಣಿಯ ಕೈಪಿಡಿಯಲು ೩

ಅಕ್ಷಯ ಪಾತ್ರೆಯ ತೊಳೆದು ಪಾಂಚಾಲೆ
ಪಕ್ಷಿದೇರನ ಧ್ಯಾನದೊಳು ಕುಳಿತಿರಲು
ಭಿಕ್ಷೆ ಬೇಡುತ ಬಂದು ದೂರ್ವಾಸ ಮುನಿಪನು
ಶಿಕ್ಷಿಸೆನೆಂದಾಗ ಸತಿಗೆ ಮುಂದೋರದಂದು ೪

ಗರುವ ಪಾರ್ಥನು ಅಂದು ಗಂಗಾ ಶಾಪದಲಿ ಅಸುವ
ತೊರೆದು ರಣದೊಳು ಬಿದ್ದಿರಲು
ಅರಿತು ಮನದೊಳು ಅನಿಲಜನೊಡಗೂಡಿ
ವರ ಮಣಿಪುರಕಾಗ ಸಿರಿ ರಂಗೇಶವಿಠಲನು ೫

## ೧೧೭

### ಉಗಾಭೋಗ

ಚಿಕ್ಕ ಮಗುವಾದ ಪ್ರಹ್ಲಾದ ದೇವನನು
ರಕ್ಕಸನು ಪಿಡಿದತಿ ಹಿಂಸೆಪಡಿಸುವದ ನೋಡಿ
ಉಕ್ಕಿಬರುತಿಹ ಕೋಪದಿಂ ಕಿಡಿಕಿಡಿಯಾಗಿ
ಉಕ್ಕಿನ ಕಂಬದಿಂ ಉರಿಯ ಕಾರುತ ಬಂದು
ಪಕ್ಕಿದೇರನು ಹಿರಣ್ಯಕಶಿಪನ ಪಿಡಿದು ತಾ
ಕುಕ್ಕಿ ಉಗುರಿಂದ ಉರ ಬಗೆದು ಕರುಳ ಮಾಲೆಯ
ಗಕ್ಕನೆ ಗಳಕಿಕ್ಕಿಕೊಂಡು ಆರ್ಭಟಿಸಿದಂದು
ಲಕ್ಕುಮಿಯಾದಿಯಾಗಿ ಮುಕ್ಕೋಟಿ ದೇವತೆಗಳು ಬೆದರಿ

ದಿಕ್ಕೆಟ್ಟು ಗಡ ಗಡ ನಡುಗುತಿರಲಾಗ
ಅಕ್ಕರದ ಭಕುತ ಪ್ರಹ್ಲಾದ ಬರೆ ಬಿಗಿಯಪ್ಪಿ
ತಕ್ಕೈಸಿ ಮುಂಡಾಡಿ ಪ್ರಸನ್ನನಾದನು ತನ್ನ
ಭಕ್ತರೊಳಿನ್ನೆಷ್ಟು ಪ್ರೀತಿಯೋ ರಂಗೇಶವಿಠಲಗೆ

## ೧೧೮

ಚಿತ್ತೈಸಬೇಕೆನ್ನ ಮಾತು ಕೇಳಯ್ಯ
ಮತ್ತೆ ಹುಟ್ಟದಂತೆ ಮಾಡೊ ರಂಗಯ್ಯ ಪ

ನಾನಾ ಯೋನಿಯಲೆನ್ನ ನೀನಿಡದಿರಯ್ಯ
ಶ್ರೀನಿವಾಸ ಬೇಡಿಕೊಂಬೆ ಶ್ರೀ ರಂಗಯ್ಯ ೧

ದೀನ ರಕ್ಷಕನೆಂದು ದೈನ್ಯದಿಂ ಬೇಡುವೆ
ಜ್ಞಾನವಂತನ ಮಾಡಿ ಸಲಹೊ ರಂಗಯ್ಯ ೨

ದಾನವಾಂತಕ ನಿನ್ನ ಭಕುತರಪರಾಧ
ನೀನೆಣಿಸದೆ ನಿರುತ ಸಲಹೊ ರಂಗಯ್ಯ ೩

ನಾ ನಿನ್ನ ಮರೆತರೂ ನೀ ನನ್ನ ಮರೆಯೆ
ಏನೆಂಬೆ ನಿನ್ನ ಕರುಣಕೆ ಶ್ರೀ ರಂಗಯ್ಯ ೪

ಭಾನು ಕೋಟಿ ಪ್ರಕಾಶ ಶ್ರೀ ರಂಗಯ್ಯವಿಠಲ
ಮಾನದಿಂದಲಿ ಪೊರೆಯೊ ಶ್ರೀನಿಧಿ ರಂಗಯ್ಯ ೫

# ೧೧೯

ಜಯ ಮಂಗಳಂ ನಿತ್ಯ ಶುಭಮಂಗಳಂ ಪ

ಮತ್ಸ್ಯಾವತಾರನಿಗೆ ಮಹದಾದಿ ದೇವನಿಗೆ
ಕುತ್ಸಿತ ಸೋಮಕನ ಕುಟ್ಟಿ ಬಿಸುಟಾತಗೆ
ಕಚ್ಛಪ ರೂಪದವಗೆ ಕನಕ ಗಿರಿಯೆತ್ತಿದವಗೆ
ಸ್ವಚ್ಛವಾದಮೃತವ ಸುರರಿಗುಣಿಸಿದವಗೆ ೧

ಭೂಕಾಂತೆಯರಸನಿಗೆ ಭೂವರಾಹದೇವಗೆ
ಲೋಕೇಶಗೊಲಿದು ಭೂಲೋಕ ಪೊರೆದಾತಗೆ
ಭೀಕರಾಕಾರನಿಗೆ ಭೀಮ ಪರಾಕ್ರಮನಿಗೆ
ಶ್ರೀಕರಾರ್ಚಿತನಾದ ಶ್ರೀ ನಾರಸಿಂಹಗೆ ೨

ವಟುರೂಪಿಯಾದವಗೆ ವಾಮನಾವತಾರಗೆ
ತ್ರೈಟಿಯೊಂದರೊಳು ಬೆಳೆದ ತ್ರಿವಿಕ್ರಮ ರೂಪಗೆ
ಪಟುತರಾಂಗನಿಗೆ ಶ್ರೀ ಪರಶುರಾಮದೇವಗೆ
ಹಟದಿಂದ ಕ್ಷತ್ರಿಯರ ಹನನಗೈದಾತಗೆ ೩

ದಶರಥ ನೃಪಾತ್ಮಜಗೆ ದನುಜ ಕುಲಾಂತಕನಿಗೆ
ಪಶುಪತಿಯ ಚಾಪವನು ಪ್ರತಾಪದಿ ಮುರಿದಗೆ
ಕುಸುಮಶರನಯ್ಯನಿಗೆ ಕುಜನಮರ್ಧನ ಹರಿಗೆ
ವಸುದೇವ ಸುತನಾದ ವರದ ಶ್ರೀ ಕೃಷ್ಣಗೆ ೪

ಬತ್ತಲೆ ನಿಂತವಗೆ ಬೌದ್ಧವತಾರನಿಗೆ
ಮೃತ್ಯುಂಜಯನಿಗೆ ತಾ ಮಮತೆಯಲೊಲಿದಗೆ
ಉತ್ತಮ ರಾಹುತಗೆ ಉದಯರವಿ ಶತತೇಜಗೆ
ಚಿತ್ತದೊಲ್ಲಭ ಚಲುವ ರಂಗೇಶವಿಠಲಗೆ ೫

## ೧೨೦

ಜೋ ಜೋ ಜೋ ರಂಗ ಜೋ ಮುದ್ದು ರಂಗ
ಜೋ ಜೋ ಮಂಗಳ ಮೂರುತಿ ರಂಗ ಜೋ ಜೋ ಪ

ದೇವ ಪಾರಿಜಾತ ಪುಷ್ಪವ ತಂದ
ದೇವಕಿ ದೇವಿಯ ಮೋಹಕ ಕಂದ ೧

ಮಾವ ಕಂಸನ ಶಿರವನು ತಂದ
ಹಾವಿನ ಹಡೆ ಮೇಲಿ ಕುಣಿಯುತ್ತ ನಿಂದ ೨

ಕಾವೇರಿ ತೀರದಿ ನೆಲೆಯಾಗಿ ನಿಂದ
ದೇವ ರಂಗೇಶವಿಠಲ ಅತಿ ಮೋಹದಿಂದ ೩

## ೧೨೧

ಜೋ ಜೋ ರಂಗಯ್ಯ ಜೋ ಜೋ ಕೃಷ್ಣಯ್ಯ
ಜೋ ಜೋ ಅಹಿತಲ್ಪ ಶಯ್ಯ ಸ್ವಸ್ಥ
ಮಲಗಯ್ಯ ಜೋ ಜೋ ಪ

ಕಣ್ಣೇಕೆ ನೀನು ಮುಚ್ಚಲೊಲ್ಲೆಯೊ ರಂಗ
ಬೆನ್ನು ಭಾರವಾಗಿರುವುದೇನೋ ದೇವ
ಮಣ್ಣಿನೊಳು ನೀನಾಡಿ ಮೈ ನೋಯುವುದೇನೊ
ಹೊನ್ನು ಕಶಿಪುವಿನ ಕರುಳ ಕಂಡಂಜಿದೆಯೇನೊ ೧

ಚಿಣ್ಣ ನೀ ಧರೆಯನಳೆಯಲೇತಕೆ ಪೋದೆ
ಗಣ್ಡುಗೊಡಲಿ ಪಿಡಿದು ಕೈಯಿ ಉಳುಕಿಹುದೇನೊ
ಅನ್ನವ ಬಿಟ್ಟು ನೀ ಪರ್ನವೇತಕೆ ತಿಂದೆ
ಬೆಣ್ಣೆಯ ಮೆದ್ದು ನಿನ ಹೊಟ್ಟೆ ನೊಯ್ಯುವದೇನೊ ೨

ಬತ್ತಲೆ ತಿರುಗಿ ಮೈ ಬಿಸಿಯಾಗಿರುವದೇನೊ
ಕತ್ತಿಯ ಪಿಡಿದು ತೇಜಿಯ ಹತ್ತಬೇಕೇನೊ
ಹೊತ್ತಾಯ್ತು ಕಂದಯ್ಯ ಮಲಗೆಂದು ಯಶೋದೆ
ಮುತ್ತಿಟ್ಟು ತೂಗಿದಳು ರಂಗೇಶವಿಠಲನ ೩

## ೧೨೨

ಧರಾ ರಮಣ ಸ್ವಾಮಿ ಪುಷ್ಕರಿಣೀ ತೀರದೊಳಿರುತಿಹನೆ ಪ

ವರಾಹರೂಪದಿ ಹಿರಣ್ಯಾಕ್ಷನ ಸಂಹರಿಸಿದವ ನೀನೆ ಭೂಧರನೇ ಅ.ಪ.

ನೀನಲ್ಲದೆ ಭಕುತರ ಮಾನದಿಂ ಪೊರೆವರಿನ್ಯಾರು ಪೇಳೊ
ಭಾನುಕೋಟಿ ಪ್ರಕಾಶನೆ ನೀನೆನ್ನ
ಮೊರೆಯ ಕೇಳೊ । ದಯಾಳೊ ೧

ಅಂದಿನಿಂಗೆಂದೆಂದಿಗು ನಿನ ಪಾದ ನಂಬಿದೆನೊ ಸ್ವಾಮಿ
ಮಂದಮತಿಯನು ದಯದಿಂದ ಸಲಹೊ ಸೇವಿತ
ಶ್ರೀಭೂಮಿ ನಿಷ್ಕಾಮಿ ೨

ಏಸು ಜನುಮದ ಪಾಪರಾಸಿಗಳಳಿದು ಹೋದವೆಲ್ಲ
ಶ್ರೀಶ ನಿನ್ನ ಸಂದರ್ಶನದಿಂದ ರಂಗೇಶವಿಠಲ ಭೊಲೋಲ ೩

## ೧೨೩

ಧ್ಯಾನ ಮಾಡಿರೊ ರಂಗಯ್ಯನ ಪ

ಗಾನ ವಿಲೋಲನ ದೀನಾರ ಪೊರೆವೊನ ಅ.ಪ.

ಮೀನ ರೂಪವ ತಾಳಿ ದಾನವಾಖ್ಯನ ಸೀಳಿ
ಮಾನವ ಪೊಂದಿದ ಜಾಣ ರಂಗೈಯ್ಯನ ೧

ವರ ಕೂರ್ಮ ತಾನಾಗಿ ಗಿರಿಯ ಬೆನ್ನಲಿ ಪೊತ್ತು
ಸುರರನ್ನೆ ಪೊರೆದ ಗಂಭೀರ ರಂಗೈಯ್ಯನ ೨

ವರಾಹ ರೂಪದಿ ಕೋರೆಯ ಕೊನೆಯಲಿ
ಧರಣಿಯನೆತ್ತಿದ ಶೂರ ರಂಗೈಯ್ಯನ ೩

ನರಹರಿ ರೂಪದಿ ಘೋರ ದೈತ್ಯನ ಸೀಳಿ
ತರಳನ ಸಲಹಿದ ಕರುಣಿ ರಂಗೈಯ್ಯನ ೪

ಪುಟ್ಟ ಹಾರುವನಾಗಿ । ದಿಟ್ಟ ಬಲಿಗೆ ಒಲಿದು
ಕೊಟ್ಟ ವರಗಳ ದಿಟ್ಟ ರಂಗೈಯ್ಯನ ೫

ಪರಶು ಪಿಡಿದು ಭೂವರರ ಗೆಲಿದು ಭೂ
ಸುರರನ್ನೆ ಸಲಹಿದ ಧೀರ ರಂಗೈಯ್ಯನ ೬

ಮಾನವ ರೂಪದಿ ದಾನವಾಂತಕನಾಗಿ
ದೀನರ ಪೊರೆದ ಸುಜ್ಞಾನಿ ರಂಗೈಯ್ಯನ ೭

ಕಂಸನ ವಂಶ ನಿರ್ವಂಶಾಕೋಸುಗ ಯದು
ವಂಶದೊಳು ತಾನು ಜನಿಸಿದನು
ಹಿಂಸೆ ಮಾಡುತಲಿರ್ದ ಹಂಸ ಡಿಬಿಕರನ್ನು
ಧ್ವಂಸ ಮಾಡಿದ ಮುರಧ್ವಂಸಿ ಕೃಷ್ಣಗೆ ೮

ಸತಿಯರ ವ್ರತದಿಂದ ಪತಿತರಳಿಯದಿರೆ
ಗತಿ ತೋರದೆ ಭವಕಾತರಿಸೆ
ಅತಿ ನಗ್ನದಿ ಬಂದು ವ್ರತಭಂಗ ಮಾಡಿದ
ಸಿರಿ ಕಂಠನುತನಾದ ಸಿತವಾಹನ ಸಖನ ೯

ವೇದ ಬಾಹಿತರನ್ನು ಭೂದೇವಿ ಧರಿಸದೆ
ಮಾಧವ ಪೊರೆಯೆಂದು ಮೊರೆಯಿಡಲು
ಚದುರತನದಿ ಸತಿಯ ಕುದುರೆಯ ಮಾಡಿತಾ
ಹದನಾದಸಿಯ ಕೊಂಡ ಕದನದಿ ಕೊಂದವನ ೧೦

ಮಂಗಳ ಮಹಿಮನ ಶೃಂಗಾರ ಪ್ರಿಯನ
ಅಂಗಜಾರಿಯ ಧನುರ್ಭಂಗನ
ಅಂಗಳದೊಳು ಮೂರ್ಲೋಕಂಗಳ ತೋರಿದ
ತುಂಗ ವಿಕ್ರಮನಾದ ರಂಗೇಶವಿಠಲನ ೧೧

## ೧೨೪

ನರಹರಿ ದೀನದಯಾಳೊ ನರಹರಿ ಪ

ನರಹರಿ ಕಾಯೊ ನೀಯೆನ್ನ । ಮಹಾ
ದುರಿತಂಗಳ ಮರಿಯೊ ಮುನ್ನ । ಆಹ
ಪರಮ ಭಕುತಿಲಿ ನಿನ್ನ ಚರಣಾರಾಧನೆ ಮಾಳ್ಪೆ
ವರಭಯ ಹಸ್ತವೆನ್ನ ಸಿರದಲಿಡುತಲಿ ಅ.ಪ.

ಹಿಂದೆ ಪ್ರಹ್ಲಾದದೇವನಂದು । ಪಿತನ
ಬಂಧನದೊಳು ಸಿಲ್ಕಿ ಬಹುನೊಂದು । ತಾನು
ಸಂಧ್ಯಾಕಾಲದೊಳಾಗ ನಿಂದು ನಿನ್ನ
ಒಂದೇ ಮನದಿ ಸ್ತುತಿಸೆ ದಯಸಿಂಧು । ಆಹ
ಮಂದಮತಿಯ ಹಿರಣ್ಯಕನುದರವ ಬಗೆದು
ಛಂದದಿ ಕರುಳ ಮಾಲೆಯ ಧರಿಸಿದ ಧೀರ ೧

ಕಂದು ಕೊರಳನಂತರ್ಗತದೇವ । ಸಕಲ
ವೃಂದಾರಕ ವೃಂದವ ಕಾವ । ಭಕುತ
ಸಂದಣಿಗೆ ಬೇಡಿದನೀವ । ಭವ

ಬಂಧನವೆಂಬ ವಿಪಿನಕೆ ದಾವ । ಆಹ
ಎಂದಿಗೆ ನಿನ್ನಯ ಸಂದರುಶನವೀವೆ
ಮಂದಮತಿಯಾದೆನ್ನ ಮುಂದಕೆ ಕರೆಯೊ ೨

ನೊಂದೆ ಸಂಸಾರದೊಳು ಮಾಲೋಲ । ಕರುಣ
ದಿಂದ ನೋಡೆನ್ನ ದೀನಜನಪಾಲ । ದಿವ್ಯ
ಸುಂದರ ಮೂರುತಿಯೆ ಗೋಪಾಲ । ಪವನ
ವಂದಿತ ಶ್ರೀ ರಂಗೇಶವಿಠಲ । ಆಹ
ಬಂದೆನ್ನ ಹೃದಯಮಂದಿರದಿ ನೆಲೆಯಾಗಿ ನೀ
ನಿಂದು ಸಲಹೋ ಎನ್ನ ಕುಂದುಗಳೆಣಿಸದೆ ೩

## ೧೨೫

ನಾರಾಯಣ ತನ್ನ ನಂಬಿದ ಭಕುತರ ಕಾರುಣ್ಯದಿ ಕಾವ ಪ

ಮಾರುತಿ ಸಹಿತನಾಗಿ ತಾನೀ ಶರೀರದೊಳಿಹ ದೇವ ಅ.ಪ

ಅನಿರುದ್ಧನು ತಾ ಸಕಲ ಚರಾಚರ ಸೃಷ್ಟಿಯ ಗೈವ
ವನಧಿಶಯನ ಪ್ರದ್ಯುಮ್ನನು ಬ್ರಹ್ಮಾಂಡವ ಪಾಲಿಸುವ
ತ್ರಿನಯನನಂತರ್ಗತ ಸಂಕರ್ಷಣ ತಾನು ಲಯವನು ಗೈವ
ಅನಿಲಾಂತರ್ಗತ ವಾಸುದೇವ ಸುಜೀವರಿಗೆ ಮೋಕ್ಷವನೀವ ೧

ನರಸಿಂಹ ರೂಪದಿ ಹರಿಯು ಭಕುತ ಪ್ರಹ್ಲಾದನ ಕಾಯ್ದ
ಸಿರಿ ರಾಮನು ತಾನಾಗಿ ಬಂದು ದಶಶಿರನ ಭಂಜಿಸಿದ
ದುರುಳ ಕಂಸನ ನಿಗ್ರಹಿಸಲು ಯದು ವಂಶದೊಳುದಿಸಿ ಬಂದ
ಪರಾಶರಾತ್ಮಜನಾಗಿ ವರವೇದ ವಿಭಾಗವ ಗೈದ ೨

ಮತ್ಸ್ಯಕಚ್ಛಪ ವರಾಹ ನರಹರಿರೂಪವ ತಾ ಕೊಂಡ
ಇಚ್ಛೆಯಿಂದಲಿ ವಟುವಾಗಿ ಕೊಡಲಿಯ ಪಿಡಿದ ಪ್ರಚಂಡ
ತುಚ್ಛ ದೈತ್ಯರ ಸದೆದು ಸಿರಿ ಕೃಷ್ಣ ದಿಗಂಬರನಾಗಿ ಕಂಡ
ಸ್ವಚ್ಛ ಅಶ್ವವೇರಿದ ರಂಗೇಶವಿಠಲ ಬಿನಗು ದೈವರ ಗಂಡ ೩

## ೧೨೬

### ಉಗಾಭೋಗ

ನಿನ್ನಭಯವೇನೆನಗೆ ನೀ ನೀರಿನೊಳಿರುವೆ
ನಿನ್ನಭಯವೇನೆನಗೆ ನೀ ಭಾರ ಪೊತ್ತಿರುವೆ
ನಿನ್ನಭಯವೇನೆನಗೆ ನೀ ಬೇರ ಮೆಲ್ಲುತಲಿರುವೆ
ನಿನ್ನಭಯವೇನೆನಗೆ ನೀನರಣ್ಯದೊಳಿರುವೆ
ನಿನ್ನಭಯವೇನೆನಗೆ ನೀ ಪೋರನಾಗಿರುವೆ
ನಿನ್ನಭಯವೇನೆನಗೆ ನೀ ಪಾರ್ವನಾಗಿರುವೆ
ನಿನ್ನಭಯವೇನೆನಗೆ ನೀ ವನದಿ ಚರಿಸುತಲಿರುವೆ
ನಿನ್ನಭಯವೇನೆನಗೆ ನೀ ಜಾರನಾಗಿರುವೆ
ನಿನ್ನಭಯವೇನೆನಗೆ ನೀ ದಿಗಂಬರನಾಗಿರುವೆ
ನಿನ್ನಭಯವೇನೆನಗೆ ನೀ ಕಾಸ್ತಾರನಾಗಿರುವೆ
ನಿನ್ನ ಭಕುತರ ನುಡಿಗೆದುರಿಲ್ಲ
ನಿನ್ನವರಿದ್ದಲ್ಲಿಯೆ ನೀನಿರುವಿ
ನಿನ್ನವರ ಮತವೇ ನಿನ್ನ ಮತವು
ನಿನ್ನವರಾಡಿದ್ದೇ ಆಟ ಹೂಡಿದ್ದೇ ಲಗ್ಗೆ
ನಿನ್ನವರಿಗಾನಂಜುವೆನಯ್ಯ
ಚೆನ್ನ ಶ್ರೀ ರಂಗೇಶವಿಠಲ

## ೧೨೭

ನೋಡಯ್ಯಾ ಹರಿಯೆ ಪ

ಪಂಡರಪುರ ನಿಲಯನೆ ಕುಂಡಲಿಶಯನನೆ ಅ.ಪ.

ಪುಂಡರೀಕಗೊಲಿದವನೆ । ಅಂದು
ಶುಂಡಾಲವ ಪೊರೆದವನೆ
ಅಂಡಜ ವರ ವಾಹನನೆ । ಎನ್ನ
ಮಂಡೆಯ ಮೇಲ್ಕರವಿಡುತಲಿ ೧

ವಿಜಯಗೆ ಸಾರಥಿಯಾದಿ । ಅವನ
ಭುಜಗ ಶರದಿಂದ ಪೊರೆದಿ
ನಿಜ ಭಕುತಗೆ ನೀ ಒಲಿದ । ದೇವ
ಕುಜನಮರ್ದನ ಹರಿ ಮುದದಿ ೨

ಪಟುತರ ದೇಹ ಪ್ರಕಾಶ । ದಿಂದ
ವಟುವಂತೆ ಮೆರೆವ ಶ್ರೀಶ
ಕುಟಿಲ ರಹಿತ ರಂಗೇಶ । ವಿಠಲ
ಹಟಮಾಡದೆ ಕಣ್ತೆರದು ೩

## ೧೨೮

### ಉಗಾಭೋಗ

ಪಂಕಜನಾಭನಂಕಿತನಾದವಗೆ
ಪಂಕ ಲವಲೇಶವಿಲ್ಲ ಶಂಕೆ ಬೇಡಿದಕೆ
ಮಂಕುಮತಿಯವರು ಪಂಕಜ ಸಂಭವ
ಶಂಕರರ ನಂಬಿ ಸಂಕಟಪಟ್ಟುದನರಿಯ
ಬಿಂಕದ ಬಿರದಿನಕಳಂಕ ರಂಗೇಶವಿಠಲ ನಿರಾ
ತಂಕದಿ ಪೊರೆವ ತನ್ನವರ ಏಣಾಂಕ ಸನ್ನಿಭವಕ್ತ್ರ

## ೧೨೯

ಪದುಮನಾಭನೆ ಪಾಲಿಸಯ್ಯ ತುದಿ ಮೊದಲಿಲ್ಲದಂಥ ದೇವನೆ
ಹರಿನಾಲ್ಕು ಲೋಕಗಳೆಲ್ಲವನು ಉದರದೊಳಿಂಬಿಟ್ಟಿಹ ಭೂಪನೆ ಪ

ಆದಿಯಲಿ ಮಧುಕೈಟಬರನು ಸಂಹರಿಸಿದಂಥ ಶೂರನೆ
ವೇದವನು ಕದ್ದೊಯ್ದ ದಾನವನೊಳು ಕಾದಿಗೆದ್ದ ಧೀರನೆ ೧

ಹದಿನಾರು ಸಾವಿರ ಗೋಪಿಯನಾಳಿದಾಮಿತ ಬಲವಂತನೆ
ಕದನಕೊದಗಿದಸುರರನ್ನು ಸದೆ ಬಡಿದ ಪ್ರಖ್ಯಾತನೆ ೨

ಸಾಧು ಸಜ್ಜನರ ಸಂತಾಪ ಕಳೆದಾಮೋದ ತೀರ್ಥಾರಾಧ್ಯನೆ
ಆದಿದೈವಿಕಾದಿ ಈತಿ ಬಾಧೆ ಕಳೆಯೊ ರಂಗೇಶವಿಠಲನೆ ೩

## ೧೩೦

### ಉಗಾಭೋಗ

ಪಾಪ ಪುಣ್ಯ ಫಲಲೇಶವಿಲ್ಲದವ ಮತ್ಸ್ಯಾದ್ಯನಂತವತಾರ
ಮಾಡಿದೆ ಯಾಕೆ
ನಿತ್ಯ ತೃಪ್ತನಾದವ ಶಬರಿಯು ಕೊಟ್ಟೆಂಜಲು
ಫಲಗಳ ಮೆದ್ದೆಯಾಕೆ
ಪಾಲಸಾಗರದಿ ಪವಡಿಸಿರ್ಪವ ವಿದುರ ಕೊಟ್ಟ
ಒಕ್ಕುಡಿತೆ ಪಾಲ ಕುಡಿದೆಯಾಕೆ
ಅನ್ನ ಅನ್ನದ ಅನ್ನಾದನೆನಿಸಿದವ ಕುಚೇಲ ಕೊಟ್ಟ ಒಪ್ಪಿಡಿ
ಅವಲ ಮೆದ್ದೆಯಾಕೆ
ಶ್ರೀ ಭೂದೇವಿಯರ ಸ್ತುತಿಗೆ ಮೊಗವೆತ್ತಿ ನೋಡಿದವ
ಕುರೂಪಿ ಕುಬುಜೆಗೆ ಮನಸೋತೆಯಾಕೆ

ಅಖಿಲಾಂಡಕೋಟಿ ಬ್ರಹ್ಮಾಂಡನಾಯಕನಾದವ
ಪಾಂಡವರೋಲೆಕಾರನಾದೆಯಾಕೆ
ನಿನಗಾಗಿ ನೀನು ಬವಣೆಪಡಲಿಲ್ಲವೊ ದೇವ
ನಿನ್ನ ಭಕುತರ ಪೊರೆಯಲೋಸುಗವೆಂಬುದ ನಾ ಬಲ್ಲೆ
ನಿನ್ನ ದಯಕೆಣೆಯುಂಟೆ ಎನ್ನಪ್ಪ ರಂಗೇಶವಿಠಲ

## ೧೩೧

ಬಂಡು ಮಾಡುವರಲ್ಲೊ ರಂಗೈಯ್ಯ ಪ

ಮಡುವ ಪೊಕ್ಕೆನುಯೆಂದು ಮಡದೇರೆಲ್ಲರು ಕೂಡಿ
ಬಿಡುಗಂಣನಿವನೆಂಬರೋ ರಂಗೈಯ್ಯಾ ೧

ಗುಡ್ಡ ಹೊತ್ತನು ಎಂದು ಸಡ್ಡೆನು ಮಾಡದೆ ನಿನ್ನ
ದೊಡ್ಡ ದೆವ್ವಯೆಂಬರೊ ರಂಗೈಯ್ಯಾ ೨

ಧರಣಿ ಎತ್ತಿದೆ ಎಂದು ಪರಿಹಾಸ ಮಾಡುತ
ಕೋರೆದಾಡಿಯನೆಂಬರೊ ರಂಗೈಯ್ಯಾ ೩

ತರಳನ ಸಲಹಲು ಸಿರಿಗೆ ಪೇಳದೆ ಬಂದ
ಉರಿಮೋರೆಯುವನೆಂಬರೊ ರಂಗೈಯ್ಯಾ ೪

ಕೃಪೆಯ ಮಾಡದೆ ಬಲಿಯ ತಪಭಂಗ ಮಾಡಿದ
ಕಪಟ ತಿರುಕನೆಂಬರೊ ರಂಗೈಯ್ಯಾ ೫

ಪಿತನ ಮಾತನು ಕೇಳಿ ಮಾತೃಹತ್ಯವಗೈದ
ಪತಿತ ಹಾರುವನೆಂಬರೊ ರಂಗೈಯ್ಯಾ ೬

ಸತಿಯ ರಕ್ಕಸನೊಯ್ಯೆ ಅತಿಶೋಕ ಪೊಂದಿದ
ಹತಭಾಗ್ಯನಿವನೆಂಬರೊ ರಂಗೈಯ್ಯಾ ೭

ನೆರೆಹೊರೆ ಹೆಂಗಳ ಸುರತದಿ ಕೂಡಿದ
ಜಾರ ಚೋರನು ಎಂಬರೊ ರಂಗೈಯ್ಯಾ ೮

ಬಟ್ಟೆಯಿಲ್ಲದೆ ಪೋಗಿ ನೆಟ್ಟನೆ ನಿಂತಿರ್ದ
ಕೆಟ್ಟಾ ಭಂಡನಿವನೆಂಬರೊ ರಂಗೈಯ್ಯಾ ೯

ಅಷ್ಟಾ ಭಾಗ್ಯವ ನೀಗಿ ಕಷ್ಟಕ್ಕೆ ಗುರಿಯಾದ
ದುಷ್ಟ ರಾಹುತನೆಂಬರೊ ರಂಗೈಯ್ಯಾ ೧೦

ಕಂದಾ ನೀ ನಿರ್ದೋಷ ರಂಗೇಶವಿಠಲ
ನೆಂದು ತಿಳಿದು ದೂರುವರೊ ರಂಗೈಯ್ಯಾ ೧೧

## ೧೩೨

ಬಂದನು ರಘುವೀರ ರಣಧೀರ ಪ

ತಡೆ ಭರತನೆ ಮುಂದಡಿಯಿಡಬೇಡ
ದುಡುಕಿ ಬೀಳದಿರು ಬಡಜನ ಮುಖಕೆ ೧

ಸೀತಾನಾಥನ ದೂತನಾದೆನ್ನ
ಮಾತನು ಕೇಳು ಆತುರಪಡದೆ ೨

ಭ್ರಾತನ ನೋಡಲು ಕಾತರನಾಗಿ
ವಾತವೇಗದೊಳು ಆತನು ಬರುತಿಹ ೩

ಅದೊ ನೋಡದೊ ನೋಡದರ ದೆಶೆಯಲಿ
ವಿದುಶತಕಿಲ್ಲದಗದಿರದದ್ಯುತಿಯ ೪

ಅದೊ ಪುಷ್ಪಕವು ಅದರ ಪ್ರಭೆ ನೋಡು
ಅದರಿರವ ನೋಡು ಒದಗಿ ಬರುತಿದೆ ೫

ಆ ಮಹಕಾಂಚನ ಧಾಮ ಮಧ್ಯೆ ನಿ
ಸ್ಸೀಮ ನಿಮ್ಮಣ್ಣ ರಾಮನ ನೋಡು ೬

ವಾಮದಿ ಸೀತಾಭಾಮೆ ಕುಳ್ಳಿಹಳು
ಪ್ರೇಮದಿ ಲಕ್ಷ್ಮಣ ಚಾಮರ ಬೀಸುವ ೭

ಬಲದಿ ಸುಗ್ರೀವ ನೆಲೆಸಿಹ ನೋಡು
ಕೆಲದಿ ವಿಭೀಷಣ ನಲಿಯುತ ನಿಂತಿಹ ೮

ಅಂಗದ ತನ್ನಯ ಜಂಘೆಲಿ ದೇವನ
ಮಂಗಳ ಚರಣವ ಹಿಂಗದೆ ಸೇವಿಪ ೯

ವೃದ್ಧ ಜಾಂಬವ ಗದ್ದುಗೆ ಮುಂದಿಹ
ಯುದ್ಧ ಪ್ರವೀಣರು ಸಿದ್ಧರಾಗಿಹರು ೧೦

ಉಳಿದ ಕಪಿ ದನುಜ ದಳಗಳು ಹಿಂದೆ
ಕಲಕಲ ಮಾಡುತ ಉಲಿಯುತಲಿಹವು ೧೧

ಅರರೆ ವಿಮಾನವು ತಿರುಗಿತು ನೋಡು
ಧರಣಿಗೆರಗುತಿದೆ ಭರದೊಳು ನೋಡು ೧೨

ಭಳಿರೇ ರಾಮನು ಇಳಿದನು ನೋಡು
ಕಳವಳವೆಲ್ಲವ ಕಳೆಯುತ ನೋಡು ೧೩

ಬಂದನು ಅದಕೊ ಬಂದೇ ಬಂದನು
ಇಂದುಮುಖಿಯ ತಾ ಹಿಂದಿಟ್ಟುಕೊಂಡು ೧೪

ಮುಂದೆ ಬರುವ ಕಪಿಯನು ಉಳಿದು
ಸುಂದರ ಮುಖವು ಕುಂದಿದೆ ನೋಡು ೧೫

ನಡೆದು ಬರುತಿಹ ಮಡದಿಯೊಡಗೂಡಿ
ತಡಮಾಡದಿರು ಪೊಡಮಡು ಪೋಗು ೧೬

ಇಂತು ನುಡಿದು ಧೀಮಂತನಾದ ಹನು-
ಮಂತ ಚಿಗಿದು ಖಗನಂತೆ ಬಂದಿಳಿದ ೧೭

ವಾತಸುತನ ಸವಿಮಾತಲಿ ಭರತನು
ಪ್ರೀತಿಲಿ ತಿರುಗಿದನಾತುರದಿಂದ ೧೮

ನೋಡುತ ರಾಮನ ಓಡುತ ಬಂದೀ
ಡಾಡಿದ ತನುವ ಬಾಡಿದ ಮುಖದಿ ೧೯

ಅನುಜನ ನೋಡಿ ದನುಜಾರಿಯಾಗ
ಮನ ಮರುಗಿದ ಬಲು ಕನಿಕರದಿಂದ ೨೦

ರಂಗೇಶವಿಠಲ ಕಂಗಳ ಜಲದೊಳು
ಮಂಗಳಯುತನಾಲಿಂಗನಗೈದ ೨೧

## ೧೩೩

ಬಾ ಬಾ ಬಾರೈಯ್ಯಾ ಶ್ರೀ ಗಿರಿದೊರೆಯೆ
ತ್ವರಿತದಿ ಸಿರಿ ಹರಿಯೆ ಪ

ನೀ ಬರುವೆಂದಬುಜಾಭವಾದೀ ಸುರರು
ಕಾದೂಕೊಂಡಿಹರು
ಶ್ರೀ ಭೂಮಿ ಸಹಿತದಿ ಶ್ರೀ ಗಿರಿಯಿಳಿದು
ಈ ಭವನವನು ನೀ ಪಾವನ ಮಾಡಲು ಅ.ಪ

ಮೃಡನೊಡನೆ ಪರ್ವತದಿ ವಾಸವು ಯಾಕೊ
ಕರೆದರೆ ಬರೆ ಯಾಕೊ
ಬಡವರೊಳೀಪರಿಯ ಪಂಥವು ಸಾಕೊ ಸುಲಭನಾಗಿರಬೇಕೊ
ಕೊಡುವ ದೊರೆಯೆಂದು ದೃಢದಿ ತಿಳಿದು ನಿ
ನ್ನಡಿ ಬಿಡದೆ ಬಲು ಕಾಡದೆ ಬಿಡುವರೆ ೧

ಜಡಜಭವಾದ್ಯರ ಮನೆ ದೈವಾವೆ ಭವ ಶರಧಿಗೆ ನಾವೆ
ಬಡವರಾದರೀಯೂ ನೀನಲ್ಲವೆ ಕೊಡೆನಗೆ ನಿನಸೇವೆ
ಒಡೆಯ ನೀನಲ್ಲದೆ ಬಡದೇವತೆಗಳು
ಕೊಡಬಲ್ಲವೆ ಪೇಳು ತಡಮಾಡದೆ ನೀ ೨

ಹದಿನಾಲ್ಕು ಲೋಕದೊರೆಯು ನೀನು ಎನುತ ತಿಳಿದು ನಾನು
ಪದುಳದಿ ನಿನ್ನ ಸೇವಿಸ ಬಂದೆನು ಕೇಳಯ್ಯಾ ಇನ್ನು
ಪದುಮನಾಭನೆ ನೀ ಸದಯದಿ ನೋಡಿ
ಇದನೆ ಕರುಣಿಸು ನಿನ್ನ ಪದಸೇವೆಯನು ೩

ಸಿರಿ ಧರೆ ನಾರಿಯರ ನಾ ಕೇಳಲಿಲ್ಲಾ ಕೊಟ್ಟರು ಬೇಕಿಲ್ಲ
ದೊರೆತನ ಬಯಸಿ ನಾ ಬೇಡ ಬಂದಿಲ್ಲ ಕೇಳೆನ್ನೆಯ ಸೊಲ್ಲ
ಪರಿ ಪರಿ ಬೇಡುವೆ ನಿನ್ನ ಪದಸೇವಕರ
ಪರಿಚಾರಕರನೆನಿಸೊ ಪರಮ ದಯಾಳೊ ೪

ಕೋರಿದನು ಕೊಡುವಿಯೆಂಬರು ಜನರೆಲ್ಲಾ
ಮಾತಿದು ಪುಸಿಯಲ್ಲ
ನೀರಜ ಭವಾಂಡದಿ ನಿನಗೆದುರ್‍ಯಾರಿಲ್ಲ ರಂಗೇಶವಿಠಲ
ದೂರ ನೋಡುತಲಿ ಘೋರಪಾತಕರೊಳು
ಸೇರಿಸದೆನ್ನನು ಪಾರುಮಾಡಲು ಬೇಗ ೫

## ೧೩೪

ಬಾರೊ ನೀ ಭಕುತರ ಸುರಧೇನು ಪ

ಕರಗಳ ಮುಗಿವೆನು ಅ.ಪ.

ಮೂರು ಲೋಕದ ದೊರೆ ನೀನಾಗಿರೆ
ನೀರಿನೊಳೀಪರಿಯಾಟವು ತರವೆ
ಕೂರುಮ ರೂಪದಾಕಿಟಿ ನರಮೃಗದಾ
ಕಾರನೆನುತ ಪರಿಹಾಸವ ಮಾಳ್ಪರು ೧

ಪೋರ ನಗುತ ಬಲಿಯನು ವಂಚಿಸಿ
ಮೀರಿದ ಕೋಪದಿ ಮಾತೆಯನಿರಿದು
ನಾರಿಯ ನೀಗುತ ಮಾವನ ಕೊಂದು
ಜಾರಿದ ವಸನದ ರಾಹುತನೆಂಬರು ೨

ವಾರಿಧಿಯೊಳು ನಿನಗಾಟವು ಸಲ್ಲದು
ಕೋರಿದ ಕೊಡುವೆನು ಬಾರೆನ ದೊರೆಯೆ
ವಾರಿಜಾಭನೆ ಕರೆ ಕರೆ ಮಾಡದೆ
ಶ್ರೀರಂಗೇಶವಿಠಲನೆ ಬೇಗದಿ ೩

## ೧೩೫

ಬೇಗನೆ ಬಾರೊ ದೇವ ಜಾಗೂ ಮಾಡದೆ ಪ

ಬೇಗನೆ ಬಾರೊ ನೀನು ನಾಗಶಯನ ಕೃಷ್ಣ
ಯೋಗಿ ಜನರು ಕಂಡು ಪೋಗಲೀಸರೆ ನಿನ್ನ ಅ.ಪ.

ಹತ್ತಾವತಾರವಾಯ್ತು ಮತ್ತಗಜವ ಪೊರೆದೆ
ಉತ್ತಮಪದ ಧ್ರುವಗಿತ್ತೆ ಮತ್ತೇನು ಕಾರ್ಯವ್ಯೆಯ್ಯ ೧

ತರಳ ಪ್ರಹ್ಲಾದನ ಕರುಣಾದಿ ಸಲಹಿದೆ
ದುರುಳರ ಸದೆದ ಪರಿಯೆಲ್ಲವಾಯಿತು ೨

ಪರಿ ಪರಿ ರೂಪವ ಧರಿಸಿದ ಎನ್ನದೇವ
ಸಿರಿರಂಗೇಶವಿಠಲನೆ ಕರವೆತ್ತಿ ಮುಗಿಯುವೆ ೩

## ೧೩೬

ಬ್ರಹ್ಮಾದಿದೇವಗಣ ನಮಿತ ಪಾದಯುಗಳನೆ
ಬ್ರಹ್ಮಾಂಡ ಜೀವರೊಡೆಯನೆ ಸನ್ಮಂಗಳಂ
ನಿನಗೆ ರಂಗಧಾಮನೆ ಪ

ಸುಮನಸರೊಡೆಯನೆ ಕಮಲಾಪತಿಯೆ ಅ.ಪ.

ಗೋಪಾಲ ಬಾಲಕಿಯರ ಮನಕುಮುದ ಚಂದ್ರನೆ
ಭೂಪಾಲ ಹಲಧರನನುಜನೆ ಸನ್ಮಂಗಳಂ
ನಿನಗೆ ರಂಗಧಾಮನೆ
ಕಪಟ ರಕ್ಕಸರನು ಮಡುಹಿದನೆ ೧

ಕಾವೇರಿ ತೀರದಲ್ಲಿ ನಿಂದ ಪಾವನರೂಪನೆ
ಹಾವಿನಹೆಡೆಯೊಳ್ಮಣಿದವನೆ ಸನ್ಮಂಗಳಂ
ನಿನಗೆ ರಂಗಧಾಮನೆ
ನಮ ತೋಹನಾಂಗೀಯ ರಾಮನಾಪಹಾರಿಯೆ ೨

ಮಾನಿನಿ ದ್ರೌಪದಿಯ ಮಾನವನ್ನು ಕಾಯ್ದನೆ
ಜ್ಞಾನಿಗಳ ಹೃತ್ಕಮಲವಾಸನೆ ಸನ್ಮಂಗಳಂ
ನಿನಗೆ ರಂಗಧಾಮನೆ
ದಿನಕರ ಕೋಟಿತೇಜನೆ ರಂಗೇಶವಿಠಲನೆ ೩

## ೧೩೭

ಮಂಗಳಂ ಶ್ರೀ ರಂಗನಿಗೆ ಗಂಗೆಯ ಜನಕಗೆ ಪ

ಶರಧಿ ಪೊಕ್ಕವನಿಗೆ ಗಿರಿಯ ಪೊತ್ತವನಿಗೆ
ಧರೆಯ ನೆಗಹಿದವಗೆ ನರಹರಿ ರೂಪಗೆ ೧

ಬಲಿಯನು ತುಳಿದಗೆ ಕಲಿಭೃಗು ತನುಜಗೆ
ಶಿಲೆಯ ಪೆಣ್ಮಾಡಿದವಗೇ ಹಲಧರನನುಜಗೆ ೨

ಚಾರು ಬೌದ್ಧನಿಗೆ ವೀರರಾಹುತನಿಗೆ
ಕಾರುಣ್ಯ ಸಾಗರಗೆ ಶ್ರೀ ರಂಗೇಶವಿಠಲಗೆ ೩

## ೧೩೮

ಮಧುವೈರಿ ಬಂದನದಕೋ ದಧಿ ಕಡೆವ ವೇಳೆಗೆ ಪ

ಮಧುವೈರಿ ಬಂದನದಕೋ ಸಂಗಡಿಗರೊಂದಿಗೆ
ವಿಧವಿಧ ರಾಗದಿ ಕೊಳಲನೂದುತ ತಾನು ಅ.ಪ.

ಅರಳೆಲೆ ಮಾಗಾಯಿ ಕಿರುಗೆಜ್ಜೆ ಪಾಗಡ
ಪರಿ ಪರಿಯಾಭರಣಗಳಿಟ್ಟು ಕಿರುನಗೆ ಮುಖದ ೧

ವಾರಿಜನೇತ್ರನು ಓರೆನೋಟದಿ ಸಕಲ
ನಾರೀಮಣಿಗಳ ಮನಸೂರೆಗೊಳ್ಳುತಲಿ ೨

ಬಾಲನಂದದಿ ತಾನು ಲೀಲೆಯ ತೋರುತ
ಮಾಲೋಲನು ಆಗ ಬೆಂಣೆ ಕೊಡೆನ್ನುತಲಿ ೩

ಏನು ಪುಣ್ಯ ಯಶೋದೆ ತಾನು ಮಾಡಿರ್ದಳೊ
ಶ್ರೀನಿಧಿ ಕೃಷ್ಣನು ಸಾನುರಾಗದಲಪ್ಪಿದ ೪

ಮುಟ್ಟಿ ಭಜಿಸುವರಘ ಸುಟ್ಟು ಸಲಹು
ದಿಟ್ಟ ಶ್ರೀ ರಂಗೇಶವಿಠಲ ನಲಿಯುತ ೫

## ೧೩೯

ಮರೆವೆನೆ ನಾ ನಿನ್ನ ಕರಿಗಿರಿ ದೊರೆ ಕರುಣಾಪೂರ್ಣನ್ನ ಪ

ನರಹರಿ ರೂಪದವನ ನಖದೀ ಹಿರಣ್ಯನ ಸೀಳಿದವನ
ವರಪ್ರಹ್ಲಾದ ವರದನ ಅಂಕದಿ ಸಿರಿಯ ಧರಿಸಿಕೊಂಡಿಹನ ೧

ದಾನವಕುಲ ಸಂಹರನ ತನ್ನ ಧ್ಯಾನಿಸಿದರೆ ಒದಗುವನ
ಆನೆಗೊಲಿದು ಬಂದವನ ಭಕ್ತಾಧೀನನಾಗಿ ಇರುತಿಹನ ೨

ಶುದ್ಧ ಸತ್ವ ಶರೀರನ ಅಷ್ಟ ಸಿದ್ಧಿಪ್ರದನೆಂಬುವನ
ಮದ್ಗುರು ಅಂತರ್ಗತನ ಸ್ತಂಭದಿ ಉದ್ಭವಿಸಿ ಬಂದವನ ೩

ಊರ್ವಿಪೆಸರುಗೊಂಡಿಹನ ಸಕಲ ಗೀರ್ವಾಣ ತತಿ ವಂದಿತನ
ದೂರ್ವಾಸ ಕರಾರ್ಚಿತನ ಮುಕುತಿಯ ತೋರ್ವ
ಶುಭತಮ ಚರಿತನ ೪

ಮಂಗಳ ಮಹಿಮಯುತನ ಜಯ
ಮಂಗಳಿ ತೀರದೊಳಿಹನು
ಇಂಗಡಲಸುತೆಯಾಣ್ಮನ ಮುದ್ದು ರಂಗೇಶವಿಠಲರೇಯನ ೫

## ೧೪೦

ಮಾತುಮಾತಿಗೆ ಮರೆಯಬೇಡ ಸೀತಾರಾಮನ ಪ

ಮಾತರಿಶ್ವನಾಥನು ಪ್ರೀತನಾಗುವ ಅ.ಪ.

ಹನುಮ ತಾನು ಭಕ್ತಿಯಿಂದ ನೆನೆದು ಸುಖಿಸುತ
ವನಜ ಸಂಭವ ಪದವಿ ಪೊಂದಿದ ಘನತರನ ಮಾತ ೧

ಅಬಲೆಯನ್ನು ಕುಲಕೆ ತಂದ ಪ್ರಬಲನ ಮಾತ
ಶಬರಿಯೆಂಬ ಭಕ್ತಳಿಗೆ ಅಭಯವಿತ್ತನ ಮಾತ ೨

ಅಂಗಜವೈರಿ ಶ್ರೀ ಶಿವನು ಹಿಂಗದೆ ಭಜಿಪ
ರಂಗೇಶವಿಠಲನೆಂಬುವ ಮಂಗಳನ ಮಾತ ೩

## ೧೪೧

ಮಾಸ ನಿಯಾಮಕ ದೇವತೆಗಳ ವರ್ಣಿಸುವೆನು ಪ

ಶ್ರೀಶನಾಜ್ಞೆಯಲಿ ಸಕಲ ಸುಜನರಿದ ಕೇಳಿ ಅ.ಪ.

ಸಹವೆಂಬ ಮಾರ್ಗ ಶಿರದಿ ಪುತ್ರ ನಾಮಕ ಸವಿತೃ
ಮಹಾ ವಿಶಾಲಾಕ್ಷಿರಮಣ ಕೇಶವ ನಿಯಾಮಕನು
ಸಹಸ್ಯವೆನಿಪ ಪುಷ್ಯದೊಳು ವಿಷ್ಣುವೆನಿಪನು
ಮಹಲಕುಮಿರಮಣ ನಾರಾಯಣನಿದಕೆ ಕರ್ತೃ ೧

ತಪವೆನಿಪ ಮಾಘದೊಳು ಅರುಣನಾಮಕ ಸವಿತೃ
ಚಪಲಾಕ್ಷಿ ರುಕ್ಮಿಣೀರಮಣ ಮಾಧವನು ದೊರೆಯು

ತಪಸ್ಯವೆನಿಪ ಫಾಲ್ಗುಣದಿ ಸೂರ್ಯನೆನಿಪನು
ಸುಪವಿತ್ರೆ ಧಾತ್ರೀಪತಿ ಗೋವಿಂದನಧಿದೇವತೆ ೨

ಮಧುಮಾಸವಾದ ಚೈತ್ರದೊಳು ವೇದಾಂಗನು
ಪದುಮಾಕ್ಷ ಮಾ ರಮಾರಮಣ ವಿಷ್ಣು ನಿಯಾಮಕನು
ಮಾಧವನೆನಿಪ ವೈಶಾಖದಿ ಭಾನುವೆಂದೆನಿಸುವನು
ಮಧುಸೂದನ ನಾಮಕ ಮೋಹಿನೀ ಪತಿಯು ೩

ಶುಕ್ರವೆನಿಪ ಜ್ಯೇಷ್ಠದೊಳು ಇಂದ್ರನೆನಿಪ ಸವಿತೃ ತ್ರಿ
ವಿಕ್ರಮನಿದಕಧಿಪತಿಯು ಪದುಮಾಕ್ಷಿರಮಣ
ಅಕ್ಕರದಿ ಶುಚಿಯೆನಿಪಾಷಾಡದಿ ರವಿಯೆನಿಪನು
ಚಕ್ರಧರ ವಾಮನನಿದರಧಿಪತಿ ಕಮಲಾರಮಣ ೪

ನಭವಾದ ಶ್ರಾವಣದಿ ಗಭಸ್ತಿಯೆನಿಸುವನು
ತ್ರಿಭುವನದಧಿಪತಿ ಶ್ರೀಧರನು ಕಾಂತಿಮತಿರಮಣ
ನಭಸ್ಯವೆನಿಪ ಭಾದ್ರಪದದಿ ಯಮನೆನಿಸುವನು
ಇಭವರದ ಹೃಷಿಕೇಶ ಅಪರಾಜಿತಾ ರಮಣ ೫

ಒದಗಿಹ ಇಷವೆನಿಪಾಶ್ವೀಜದೊಳು ಸ್ವರ್ಣರೇತಾ
ಇದಕಭಿಮಾನಿ ಪದಮಾವತಿಪತಿ ಪದುಮನಾಭ
ಉದಯಿಸುತಿಹ ಊರ್ಜಿಯೆನಿಪ ಕಾರ್ತಿಕದಿ ದಿವಾಕರ
ರಾಧಾರಮಣ ದಾಮೋದರನಿದರಭಿಮಾನಿ ೬

ಆಯಾಯ ಮಾಸದಲಿ ಮಾಳ್ಪ ಸಕಲ ಕರ್ಮಗಳನು
ಆಯಾಯಭಿಮಾನಿ ದೇವರುಗಳಿಗರ್ಪಿಸಿ
ಮಾಯಾರಮಣ ಶ್ರೀ ರಂಗೇಶವಿಠಲನ ನೆನೆಯುತ
ಆಯಾಸವಿಲ್ಲದೆ ಪರಮಪದವನು ಪಡೆಯಿರೊ ೭

## ೧೪೨

ಯಾಕೆನ್ನೊಳಿಂತು ನಿರ್ದಯವೆಲೊ ದೇವ
ನೀ ಕರುಣದಿ ನೋಡದಿರಲು ಮತ್ತಾವ ಕಾವ ಪ

ಗಜರಾಜನ ನೀ ಸಲಹಲಿಲ್ಲೇ ಅಂದು
ನಿಜಭಕ್ತ ಪ್ರಹ್ಲಾದನ ಪೊರೆಯಲಿಲ್ಲೇ
ವಿಜಯನಿಗೊಲಿದ ಪರಿ ಎಲ್ಲ ಬಲ್ಲೆ ನಿನ್ನ
ಭಜನೆಯೊಳಿಹ ಎನ್ನನೇಕೆ ನೋಡಲೊಲ್ಲೆ ೧

ದ್ರೌಪದಿ ಕರೆಯಲಕ್ಷಯ ವಸ್ತ್ರವ ಕೊಟ್ಟೆ ನೀನು
ಶಾಪದ ಶಿಲೆಯ ಕುಲಕೆ ತರಲಡಿಯಿಟ್ಟೆ
ಪಾಪಿ ಅಜಮಿಳನ ಅಘಗಳ ಸುಟ್ಟೆ ಸ್ವಾಮಿ
ಶ್ರೀಪದಗ್ರಸ್ತನಾದೆನ್ನ ನೀ ಕೈಬಿಟ್ಟೆ ೨

ಬಿಡಬೇಡೆನ್ನ ಕೈಯ ಶ್ರೀನಿವಾಸ ಬಹು
ಬಡವ ನಾನಹುದು ಮದ್ವಗೃಹವಾಸ
ಕಡುಪಾಪಿ ನಾನಲ್ಲವೊ ರಂಗೇಶವಿಠಲ
ದೃಢವಾಗಿ ನಂಬಿಹೆನೊ ನಿನ್ನ ಸರ್ವೇಶ ೩

## ೧೪೩

ರಂಗಬಾರನ್ಯಾತಕೆ ಸಖಿಯೆ ಮುದ್ದು ಪ

ಶರಧಿಯ ಪೊಕ್ಕನೇನೆ ಸುರರೆಲ್ಲರು ಕೂಡಿ
ಗಿರಿಯ ಬೆನ್ನಾಲಿ ಅವರು ಪೊರಿಸಿದರೇನೆ ೧

ಧರೆಯನೆತ್ತಲು ಪೋಗಿ ನರಹರಿಯಾದನೇನೇ
ಗರುವರಹಿತ ಬ್ರಹ್ಮಚಾರಿಯಾದನೇನು ೨

ಪರಶುಪಿಡಿದು ಕ್ಷತ್ರಿಯರ ಸವರುವೆನೆಂದು
ಗಿರಿವನಗಳಲಿ ತಾನು ಚರಿಸುತಲಿಹನೇನೇ ೩

ಸ್ಮರನ ಪಿತನು ತಾನು ನಾರಿ ಪಾಂಚಾಲೆಯ
ಮೊರೆಯ ಕೇಳುತ ಭರದಿ ಸಾರಿದನೇನೆ ೪

ನಾರೇರ ಮಾನವ ತಾ ಸೂರೆಗೊಳ್ಳಲು ತೇಜಿ
ಏರಿ ಪೋದನೇನೆ ಶ್ರೀ ರಂಗೇಶವಿಠಲ ೫

## ೧೪೪

ರಥವನೇರಿ ಬರುವ ರಂಗನಾಥನ ನೋಡಿ ಪ

ಅತಿಶಯವಾದಂಥ ಪರಗತಿಯನು ಪಡೆಯಿರೊ ಅ.ಪ.

ಹಸ್ತಿಗಳು ಚಾಮರ ಹಾಕುತಲಿರೆ
ಸ್ವಸ್ತಿವಾಚನಗಳನು ದ್ವಿಜರು ಪೇಳುತಲಿರೆ
ಸ್ವಸ್ತಿಲಿ ವಿವಿಧ ವಾದ್ಯತತಿ ಸೂಳೈಸುತಲಿರೆ
ಮಸ್ತಕಾಂಜಲಿಪುಟದಿ ಹರಿದಾಸರು ಪೊಗಳುತಿರೆ ೧

ಸಾಲು ಪಂಜಿನ ದೀವಟಿಗೆಗಳು ಮೆರೆಯೆ
ನಾಲ್ಕು ದಿಕ್ಕಲಿ ಜನರು ನಿಂತು ನೋಡುತ ನಲಿಯೆ
ಲೀಲೆಯ ತೋರುತ ಶ್ರೀ ಭೂದೇವಿಯರಿಂದ
ಲೋಲುಪ ತಾನಾಗಿ ಬಹು ಸಂಭ್ರಮದಿಂದ ೨

ನಭದೊಳು ಸಕಲ ದಿವಿಜರೊಡಗೂಡಿ ತಾ
ನಭುಜಭವನು ನಿಂತು ನೋಡಿ ಹಿಗ್ಗುತಿರೆ
ಇಭರಾಜವರದ ಶ್ರೀ ರಂಗೇಶವಿಠಲನು
ತ್ರಿಭುವನ ಪಾವನ ಮಾಡಿ ಸೊಬಗು ತೋರುತ ೩

# ೧೪೫

ರಾಮನ ನೋಡಿದೆ ರಘುಕುಲ ತಿಲಕನ
ಕೋಮಲ ಕಾಯ ಕೌಸಲ್ಯ ತನಯನ ಪ

ತಾಮಸ ದೈತ್ಯರ ಲೀಲೆಯಲಿ ಕೊಂದು
ಭೂಮಿ ಭಾರವನಿಳುಹಿದ ನಿಸ್ಸೀಮನ ಅ.ಪ.

ತಾಟಕಾದಿಗಳ ಘೋರಾಟವಿಯಲಿ
ಪಾಟುಪಡಿಸಿದ ಹಾಟಕಾಂಬರನ
ತೋಟಿಗೊದಗಿದ ಮಾರೀಚಾದಿಗಳ
ಆಟನಾಡಿಸಿದ ನೀಟುಗಾರ ೧

ಹಲವು ಕಾಲದಿ ಶಿಲೆಯಾಗಿರ್ದ
ಲಲನೆ ಅಹಲ್ಯೆಯ ಶಾಪವ ಹರಿಸಿ
ಕಲುಷವ ಕಳೆಯುತ ಕುಲಸತಿ ಮಾಡಿದ
ಚಲುವ ಮೂರುತಿ ನಳಿನ ನಯನನ ೨

ಹರನ ಧನುವನು ಸ್ಮರನ ಧನುವಿನಂತೆ
ತ್ವರದಿ ಮುರಿದು ನಿಂದ ಸುಕುಮಾರನ
ಧರಣಿಪ ಜನಕನ ಭಕ್ತಿಗೆ ಒಲಿದು
ಧರಣಿಜೆಯ ವರಿಸಿ ಹರುಷವಿತ್ತನ ೩

ತಾತನ ಭಾಷೆಯ ಪ್ರೀತಿಯಿಂ ಸಲಿಸೆ
ಸೀತೆ ಸಹಿತ ಭ್ರಾತ ಲಕ್ಷ್ಮಣವೆರಸಿ
ಆತುರದಿಂದಲಿ ಅರಣ್ಯವನ್ಯೆದಿ
ಕೌತುಕ ತೋರುತ ಚರಿಸಿದವನ ೪

ಖರದೂಷಣ ತ್ರಿಶಿರಾದಿ ರಕ್ಕಸರ
ಅರೆಕ್ಷಣದಲಿ ತರಿದು ಬಿಸುಟವನ
ಹಿರಣ್ಯಮೃಗವ ಬೆನ್ನಟ್ಟಿ ಕೆಡಹುತ
ವರ ಜಟಾಯು ಶಬರಿಗೆ ಒಲಿದವನ ೫

ವಾತಸುತನ ಕಂಡಾತನ ಪದುಳಿಸಿ
ಆ ತರಣಿ ಸುತಗೆ ಅಭಯವನಿತ್ತ
ಜಾತವೇದನೆದುರಲಿ ಸಖ್ಯವ ಮಾಡಿ
ಘಾತಕ ವಾಲಿಯ ನಿಗ್ರಹಿಸಿದನ ೬

ಕೋತಿ ಕರಡಿಗಳ ಹಿಂಡನು ಕೂಡಿಸಿ
ಸೇತುವೆಗಟ್ಟಿಸಿ ಜಲಧಿಯ ದಾಟಿ
ಪಾತಕಿ ರಾವಣನ ಶಿರಗಳ ಕಡಿದು
ಸೀತೆಯ ಸೆರೆಯನು ಬಿಡಿಸಿದಾತನ ೭

ಮೊರೆಯನು ಪೊಕ್ಕಾ ವರ ಭೀಷಣನ
ಕರುಣದಿ ಕರೆದು ಕರವನು ಪಿಡಿದು
ಧರೆಯಿದು ಸ್ಥಿರವಾಗಿರುವ ಪರಿಯಂತ
ದೊರೆತನ ಮಾಡೆಂದ್ಹರಸಿದಾತನ ೮

ಅಕ್ಕರೆಯಿಂದಲಿ ಅರ್ಚಿಸುವರಿಗೆ
ತಕ್ಕಂತೆ ವರಂಗಳ ನೀಡುತಲಿ
ಮಿಕ್ಕು ರಾಜಿಸುತಿಹ ಪಂಪಾಪುರದ
ಚಕ್ರತೀರ್ಥದಿ ನೆಲೆಸಿಹನ ೯

ಕಂತುವೈರಿ ವಿರುಪಾಕ್ಷಗೆ ತಾರಕ
ಮಂತ್ರ ನಾಮಕನಾಗಿರುತಿರ್ಪನ

ಯಂತ್ರೋದ್ಧಾರನಾಗಿರುವ ಹನುಮನ
ಮಂತ್ರಿಯ ಮಾಡಿಕೊಂಡು ರಾಜಿಪನ ೧೦

ದುಷ್ಟ ರಕ್ಕಸ ದಮನವ ಮಾಡಿ
ಶಿಷ್ಟ ಜನರುಗಳಿಷ್ಟವ ಸಲಿಸುತ
ಶ್ರಿಷ್ಟಿಗೊಡೆಯನೆನಿಸಿ ಮೆರೆಯುತಲಿರುವ
ದಿಟ್ಟ ಶ್ರೀ ರಂಗೇಶವಿಠಲನ ೧೧

## ೧೪೬

ವೆಂಕಟೇಶ ತೋರೊ ಪಾದ ಪಂಕಜವನು ಪ

ಮಂಕುಮತಿಯ ಬಿಡಿಸಿ ನಿನ್ನ ಕಿಂಕರನೆಂದೆನಿಸೊ ಅ.ಪ.

ಕಲಿಯುಗದೊಳು ನೀನು ಸಕಲ ಸುಜನರ
ಕಲುಷ ಕಳೆಯುವೆನೆಂದು ಬಹುಮೋದದಿಂದ
ಎಲರುಣಿ ಪರುವತದೊಳಗೆ ವಾಸನಾಗಿ
ಒಲಿದು ಪದುಮಾವತಿಯ ಕರ ಪಿಡಿದಂಥ ೧

ತೆತ್ತೀಸಕೋಟಿ ದೇವತೆಗಳು ತನ್ನ
ಸುತ್ತಲು ನಿಂತು ಪರಿಚರಿಯವನು ಮಾಡೆ
ಎತ್ತ ನೋಡಲು ಸಿರಿಯು ಓ ಎನುತಿರೆ
ಚಿತ್ತಜನೈಯ್ಯನು ನಗುತ ನಿಂದಿರುವಂಥ ೨

ಭುವನತ್ರಯಂಗಳನೆಲ್ಲ ಲೀಲೆಯಿಂ ಕಾವ
ಪವನವಂದಿತನೆ ಮಹಾನುಭಾವ
ನವ ಮೋಹನಾಂಗ ಶ್ರೀ ರಂಗೇಶವಿಠಲ
ಜವನ ಬಾಧೆಯ ಬಿಡಿಸಯ್ಯಾ ಶ್ರೀಲೋಲ ೩

## ೧೪೭

ಶೇಷಾಚಲನಿಲಯನಾಗಿರುತ ಭಕುತರ
ಪೋಷಿಸುತಿಹನ್ಯಾರೆ ಪೇಳಮ್ಮಯ್ಯ ಪ

ದೋಷರಾಸಿಗಳನು ನಾಶ ಮಾಡುತಲಿ
ಶೇಷಸುರಸೇವ್ಯ ಶ್ರೀನಿವಾಸ ಕಾಣಮ್ಮ ಅ.ಪ.

ಕಲಿಯುಗದೊಳು ಪ್ರಜ್ವಲಿಸುತಿರುವೀ ಗಿರಿ–
ಗಿಳಿದು ಬಂದನ್ಯಾಕೆ ಪೇಳಮ್ಮಯ್ಯ
ನಲಿಯುತ ಸ್ತುತಿಪ ಜನರ ಕಲುಷವ ಕಳೆಯಲು
ಒಲಿದು ಬಂದ ದಯದಿಂದಲಿ ಕೇಳಮ್ಮ ೧

ಸ್ವಾಮಿ ಪುಷ್ಕರಿಣಿ ತೀರದಿ ನಗುತ ನಿಂದಿಹ
ಕೋಮಲಾಂಗನವನ್ಯಾರೇ ಪೇಳಮ್ಮಯ್ಯ
ಕಾಮಿನಿ ಪದುಮಾವತಿ ತಾ ಮೋಹಿಸುತಲಿ
ಪ್ರೇಮದಿ ವರಿಸಿದ ಭೂಮಿಪ ಕಾಣಮ್ಮ ೨

ಬಂಗಾರ ನವರತ್ನ ಮಂಡಿತನಾಗಿ ವಿ
ಹಂಗವೇರ್ದನ್ಯಾರೇ ಪೇಳಮ್ಮಯ್ಯಾ
ಗಂಗಾಜನಕ ಪಾಂಡುರಂಗನೆನಿಪ ಆ
ರಂಗೇಶವಿಠಲನೆ ಇವ ಕಾಣಮ್ಮ ೩

## ೧೪೮

ಶ್ರೀ ಕರಾರ್ಚಿತ ಪರಮಪುರುಷ ಶೋಕವರ್ಜಿತ ಪ

ನೀ ಕರುಣಿಸದೆ ನಿರಾಕರಿಸಲಿನ್ನು
ಸಾಕುವರ‍್ಯಾರೊ ಮಾಕಳತ್ರಹರಿ ಅ.ಪ.

ರಜತಪೀಠ ಪುರದೊರೆಯೆ ನಿನ್ನ ಭಜನೆಗೈವರ
ಸುಜನರಿಗೆ ಸಕಲ ವಿಜಯವಹದೆಂದು ತ್ರಿಜಗವು
ಬಲ್ಲುದು ಗಜರಾಜವರದ ೧

ಮೋದಮುನಿಮನಾನಂದ ನೀ ಯಶೋದೆ ನಂದನ
ಆದಿಮೂರುತಿಯನಾದಿಯಾದೆನ್ನ ವೇಧೆಕಳೆಯೊ
ನಿನ್ನ ಪಾದವ ನಂಬಿದೆ ೨

ಕಂಗಳಿಂದ ನಾ ನಿನ ನೋಡಿ ವಿಹಂಗವಾಹನ
ಹಿಂಗಿವೆನ್ನ ಅಘಂಗಳು ಕೇಳೆಲೊ ಮಂಗಳಾಂಗ
ಶ್ರೀ ರಂಗೇಶವಿಠಲ ೩

## ೧೪೯

ಶ್ರೀನಿವಾಸ ನೀನೆಮ್ಮ ಪೊರೆಯೊ ನಿರುತ ।
ಪದುಮಾವತಿ ಕಾಂತ ಪ

ಸಾನುರಾಗದೊಳು ಲಾಲಿಸೆನ್ನ ಮಾತ ।
ಬ್ರಹ್ಮಾದ್ಯರ ತಾತ ಅ.ಪ.

ನಿನ್ನ ದರ್ಶನವು ಸಂಸಾರ ಸಮೇತ । ಬೇಡನೆ ಜನವ್ರಾತ
ಮನ್ನಿಸಲಿಲ್ಲವೊ ನಾನವರ ಮಾತ । ಪಾವನ ಶುಭಚರಿತ
ನಿನ್ನನು ಸತಿಸುತೆವೆರೆಸಿ ನೋಳ್ಪೆನೆನುತ ।
ನಾ ಮಾಡಿದೆ ಶಪಥ
ಘನ್ನಮಹಿಮನೆ ನೀ ಮಾಡದಿರು ಘಾತ ।
ಸದ್ಗುಣ ಗಣಭರಿತ ೧

ಹದಿನಾಲ್ಕು ಲೋಕವ ನೀನು ಪೊರೆವಾತ ।
ದ್ವಿಜರಾಜ ವರೂಥ
ಇದು ಏನಧಿಕವೊ ನಿನ್ನಸಮದಾತ । ರಿಲ್ಲವೊ ಶುಭಗಾಥ

ವಿಧಿವಿಹಿತ ಕರ್ಮಗಳನರಿಯೆನೊ ನಾಥ ।
ಭವ ಶರಧಿಗೆ ಪೋತ
ಮುದದೊಳು ನಾ ಮಾಡುವ ಸ್ತೋತ್ರಕೆ ಪ್ರೀತ ।
ನಾಗಯ್ಯಾತ್ವರಿತ ೨

ಸಿರಿಯುತ ಕ್ರೋಧನ ವತ್ಸರ ಚೈತ್ರ ಪಿತ ।
ಪ್ರತಿಪದ ಬುಧಸಹಿತ
ಮೆರೆವ ಉದಯದಿ ನಾನ್ಮಿಂದು ಮಡಿಯುಡುತ ।
ಊರ್ಧ್ವಪುಂಡ್ರವಿಡುತ
ಗುರು ಮಧ್ವಾಂತರ್ಗತ ನಿನ ಸ್ಮರಿಸುತ ।
ಏರಿದೆ ಪರುವತ
ಉರದಿ ಮೆರೆವ ಸಿರಿ ಸಹಿತ ಜಗನ್ನಾಥ ।
ನಿನ ಕಂಡೆವೊ ತಾತ ೩

ಹಲವು ಜನುಮಗಳಲಿ ಮಾಡಿದ ಸುಕೃತ । ಈ ದಿನ ಒದಗುತ
ಫಲವಾದುದಕೆ ನಾವೆಲ್ಲ ಬಹುಪ್ರೀತ । ರಾದೆವು ಶ್ರೀಕಾಂತ
ಕಲುಷ ನಾಶನಿಯೊಳು ಕಲಿಮಲ ಕಳೆಯುತ ।
ಉತ್ಸವ ನೋಡುತ
ಒಲಿದು ನಿನ್ನ ತೀರ್ಥಪ್ರಸಾದವ ಕೊಳುತ । ನಾವಿದ್ದೆವೊ ಸತತ ೪

ತುಂಗ ವಿಕ್ರಮನೆ ರಣದೊಳು ನಿರ್ಭೀತ । ಬಲರಿಪು ಸಹಜಾತ
ಮಂಗಳಾಂಗ ಶ್ರೀ ಗಾಂಗೇಯಗೆ ಸೋತ ।
ಗಾಂಡೀವಿಯ ಸೂತ
ಗಂಗಾಜನಕನೆ ತ್ರಿಗುಣಾತೀತ । ಭುವನದಿ ವಿಖ್ಯಾತ
ರಂಗೇಶವಿಠಲನೆ ನಾ ನಿನ್ನ ದೂತ । ಯದುಕುಲ ಸಂಭೂತ ೫

## ೧೫೦

ಶ್ರೀರಂಗೇಶವಿಠಲ । ಪೊರೆಯೆನ್ನ ಹೃದಯಾ-
ಧಾರನೆ ಮಾಲೋಲ । ಸ್ಮರಕೋಟಿ ಸುಂದರಾ-
ಕಾರ ನತಜನಪಾಲ । ಅರಿಮಸ್ತಕ ಶೂಲ ಪ

ಆರು ಅರಿಗಳ ಗೆಲಿಸಿಯೆನ್ನಿಂ-
ದಾರು ಎರಡನು ಮುರಿಸಿ ನಿನ್ನೊಳು
ಆರು ಮೂರನೆಯಿತ್ತು ಸರ್ವದ
ಪಾರುಗೈಯ್ಯಬೇಕೆಂಬೆ ದೇವ ಅ.ಪ.

ಆನೆಗೊಂದಿ ನಿವಾಸ । ಭಕುತರ ನಿರಂತರ
ಮಾನದಿಂ ಪೊರೆವ ಶ್ರೀಶ । ಎಂದೆಂದಿಗು
ನಾನಿನ್ನ ದಾಸರ ದಾಸ । ನೆಂದು ಕರುಣಿಸು
ನೀನೆನಗೆ ಲೇಸ । ಭಾನುಕೋಟಿ ಪ್ರಕಾಶ
ಮಾನ ಅವಮಾನಗಳು ನಿನ್ನಾ-
ಧೀನವೆಂದೇ ನಂಬಿಕೊಂಡಿಹ
ದೀನನೆನ್ನನು ದೂರ ನೋಡದೆ
ಸಾನುರಾಗದಿ ಪೊರೆವುದೈಯ್ಯಾ
ಈ ನಳಿನಭವ ಅಂಡದೊಳಗೆ
ದಾನಿ ನೀನಲ್ಲದನ್ಯರುಂಟೆ
ಏನ ಬೇಡೆನು ನಿನ್ನ ಬಳಿಯಲಿ
ಜ್ಞಾನ ಭಕುತಿ ವೈರಾಗ್ಯವಲ್ಲದೆ ೧

ಮೀನ ಕಚ್ಛಪರೂಪ । ಧರಿಸಿದ ವರಾಹ ಜನ
ತ್ರಾಣ ನರಹರಿ ತಾಪ । ತ್ರಯ ದೂರ ವಾಮನ
ಮಾನವೇಂದ್ರರ ಪ್ರತಾಪ । ವಡಗಿಸಿದೆ ಪ್ರಬಲ
ದಾನವೇಂದ್ರನ ಶಾಪ । ನೀನೆ ಕಳೆದೆಯೊ ಶ್ರೀಪಾ
ವಾನರ ಬಲ ನೆರಹಿಕೊಂಡು

ನೀನು ರಾವಣನನ್ನು ಕೊಂದು
ಮಾನಿನಿಯ ಪೊರೆದು ಶರಣಗೆ ನಿ
ದಾನ ಮಾಡದೆ ಪಟ್ಟಗಟ್ಟಿದೆ
ದಾನವಾಂತಕನೆಂಬ ನಾಮವ-
ನ್ಯೂನವಿಲ್ಲದೆ ಪರಸತಿಯರಭಿ
ಮಾನ ಕಳುಪಿದ ಜಾಣ ಕಲ್ಕಿಯೆ ೨

ಸೂರಿಜನ ಪರಿಪಾಲ ಸದ್ಗುಣಗಣನಿಲಯ
ಘೋರರಕ್ಕಸಕಾಲ । ವರಶೇಷತಲ್ಪವ
ನೇರಿ ನಿರುಪಮ ಬಾಲ । ನಂದದಿ ನಿರುತ ನೀ
ತೋರುತಿರುವೆಯೊ ಲೀಲ । ಶ್ರೀ ರಂಗೇಶವಿಠಲ
ಮಾರ ಜನಕನೆ ಮಂಗಳಾಂಗನೆ
ಕ್ರೂರ ಕುಲವನದಾವ ಅನಲನೆ
ಭೂರಿ ಕರುಣವ ಬೀರಿ ಎನ್ನಸು
ಪಾರುಮಾಡುವ ಭಾರ ನಿನ್ನದು
ವಾರಿಜಾಕ್ಷನೆ ಎನ್ನ ಹೃದಯದಿ
ತೋರು ನಿನ್ನಯ ಚಾರು ಬಿಂಬವ
ಸಾರಿ ಬೇಡುವೆ ಬಾರಿ ಬಾರಿಗೆ
ಘೋರ ದುಷ್ಕೃತ ಶರಧಿ ಬಡಬನೆ ೩

## ೧೫೧

### ಉಗಾಭೋಗ

ಶ್ರೀ ಸದನ ನಿನ್ನ ಸುಗುಣಗಳ ಪೊಗಳುವಡೆ ಕಡೆಯುಂಟೆ
ಸಾಸಿರ ಮುಖದಾದಿಶೇಷಗಳವಡದು ವೇದ
ರಾಸಿಗಳೆಲ್ಲ ಮುಂಬರಿಯಲಾಗದೆ ಮೌನವಾಂತಿಹವು
ಲೇಶ ಭಕುತಿಯಿಲ್ಲದ ಪಾಮರನಾದ ನಾನು ಮ
ತ್ತೇಸು ಬಗೆಯಿಂದ ಸ್ತುತಿಸಲಾಪೆನೊ ದೇವ ಸ

ವರ್ೀಶನೇ ನೀನೆಂಬ ನುಡಿಮಾತ್ರ ಘೋಷಿಸುತಲಿರುವೆ
ಈಸು ಮಾತ್ರಕೆ ನೀ ಪ್ರಸನ್ನನಾಗಿ ರಕ್ಷಿಸೋ ರಂ-
ಗೇಶವಿಠಲರೇಯ ನಾ ನಿನ್ನ ದಾಸರ ದಾಸನೆಂದು

## ೧೫೨

ಸಮಯಕ್ಕೊದಗುವ ನೆಂಟ ನಿನ್ನ ಭಕುತರ ಬಂಟ ಪ

ಕನಕಕಶಿಪು ತನಯ ತನ್ನ
ಜನಕನ ಹಿಂಸೆ ತಡೆಯದೆಲೆ
ದನುಜಹರನೆ ರಕ್ಷಿಸೆನಲು
ಕ್ಷಣದಿ ಬಂದು ಸಲಹಿದ್ಯೆಯ್ಯಾ ೧

ನಾರಿ ದ್ರುಪದನಂದನೆಯಳ
ಸೀರೆ ಖಳನು ಸೆಳೆಯುತಿರಲು
ವಾರಿಜಾಕ್ಷ ನಿನ್ನ ಸ್ಮರಿಸೆ
ಯಾರು ಅರಿಯದಂತೆ ಬಂದೆ ೨

ದಾಸಜನರ ಸಕಲ ಪಾಪ-
ರಾಸಿಗಳನು ದಹಿಸೆ ಪೊರೆವೆ
ಶ್ರೀಶ ನಿನ್ನ ಭಜಿಸಿದರೆ ರಂ-
ಗೇಶವಿಠಲರೇಯ ನೀನು ೩

## ೧೫೨

ಸರಿ ಯಾರೊ ನಿನಗೆ ಪರಮ ಕರುಣಾನಿಧೆ ಪ

ಸರಿ ಯಾರೊ ನಿನಗೆ ಗರುಡವಾಹನ ನಿನ್ನ
ಸ್ಮರಿಸುತಿರುವರನು ಕರುಣದಿ ಪೊರೆಯುವೆ ಅ.ಪ.

ಕರಿರಾಜ ಕೂಗಲು ಭರದಿಂದ ಪೋದೆಯೊ
ಸರಸಿಜ ಭವನುತ ಸುರಗಣ ಸೇವಿತ ೧

ಕಂದನ ಮಾತನು ಛಂದದಿಂ ಕೇಳುತ
ಬಂದು ಸಂತೈಸಿದ ಇಂದಿರ ರಮಣನೆ ೨

ದುಷ್ಟರ ಸದೆಯುತ ಶಿಷ್ಟರ ರಕ್ಷಿಸುವ
ದಿಟ್ಟ ರಂಗೇಶವಿಠಲರಾಯನೆ ೩

## ೧೫೪

ಸರುವದ ಪಠಿಸಿರೊ ಚತುರವಿಂಶತಿನಾಮ
ಸಿರಿವಿರಿಂಚಾದಿಗಳಿಗೇ ಪ್ರಿಯಕರ ನಾಮ ಪ

ಕೇಶವ ನಾರಾಯಣ ಮಾಧವ ಗೋವಿಂದನ
ಶ್ರೀಶ ವಿಷ್ಣು ಮಧುಸೂಧನ ತ್ರಿವಿಕ್ರಮನ ೧

ವಾಮನ ಶ್ರೀಧರ ಹೃಷಿಕೇಶ ಪದುಮನಾಭ
ದಾಮೋದರ ಸಂಕರುಷಣ ವಾಸುದೇವನ ೨

ಪ್ರದ್ಯುಮ್ನ ಅನಿರುದ್ಧ ಪುರುಷೋತ್ತಮ ದೇವನ
ಅಧೋಕ್ಷಜ ನಾರಸಿಂಹ ಅಚ್ಯುತರಾಯನ ೩

ಜನಾರ್ಧನ ಉಪೇಂದ್ರ ಹರಿ ಶ್ರೀ ಕೃಷ್ಣಸ್ವಾಮಿಯ
ಜನನ ಮರಣ ರಹಿತನಾದ ಶ್ರೀನಿವಾಸನ ೪

ಈ ಮಹಾನಾಮಂಗಳ ಪ್ರೇಮದಿಂ ಪಾಡಲು
ಕಾಮಿತಾರ್ಥವೀವ ಶ್ರೀ ರಂಗೇಶವಿಠಲ ೫

## ೧೫೫

ಸಾಧನವು ಮತ್ತೇನಾಗಬೇಕು ನಿನಗೇ ಪ

ಮಾಧವನ ನಾಮವು ಮನದೊಳಿದ್ದರೆ ಸಾಲದೇ ಅ.ಪ.

ಗೋಕೋಟಿ ದಾನವು ಗೋವಿಂದನ ಸ್ಮರಣೆಯ
ತಾಕಲಾರದಿದಕೆ ಸಂದೇಹವೇ ಇಲ್ಲ
ಸಾಕಲ್ಯದಿ ಮಾಳ್ಪ ಸಕಲ ದೇವತಾರ್ಚನೆಯು
ಮಾಕಳತ್ರನ ಪಾದ ಭಜನೆಗೆಣೆಯು ಅಲ್ಲ ೧

ಸ್ನಾನ ಸಂಧ್ಯಾವಂದನ ಜಪತಪಾದಿಗಳು
ದಾನವೇ ಮೊದಲಾದ ನೇಮ ನಿಷ್ಟೆಗಳು
ಆನುಪೂರ್ವಕ ಮಾಳ್ಪ ಸಕಲ ಕರ್ಮಗಳೆಲ್ಲ
ಶ್ರೀನಿವಾಸನ ನಾಮಸ್ಮರಣೆಗೆ ಎಣೆಯು ಅಲ್ಲ ೨

ರಾಸಿ ವಿದ್ಯ ವೇದಾಧ್ಯಯನ ಪಾಠಗಳು
ಬೇಸರಿಲ್ಲದೆ ಪಠಿಪ ಮಂತ್ರ ತಂತ್ರಗಳೆಲ್ಲ
ಈ ಸಮಸ್ತ ಭುವನಗಳೊಡೆಯನಾದ ಶ್ರೀ ರಂ
ಗೇಶವಿಠಲನ ನಾಮದಲ್ಲಡಗಿರುವುದಲ್ಲ ೩

## ೧೫೬

ಏಳಮ್ಮ ತಾಯೆ ಮುದದಿಂದೆಮ್ಮನು ಕಾಯೆ
ಕೋಳಿ ಕೂಗುತಲಿದೆ ಕೇಳಮ್ಮಯ್ಯಾ ಪ

ಕಾಲನಾಮಕ ಸೂರ್ಯದೇವನ ರಥದ ಕೆಂ–
ಧೂಳಿಯೇಳುವಂತೆ ಅರುಣೋದಯವಾಯ್ತು ಅ.ಪ.

ಮರುತಸುತನೆದ್ದು ಪರಾಕ್ಹೇಳುತಿಹನು
ಗರುಡನು ಹೊರಬಾಗಿಲೊಳು ಕಾದಿರುವನು
ಪರಿವಾರದವರೆಲ್ಲ ಕರಕಟ್ಟಿ ನಿಂದಿಹರು
ಹಿರಿಯ ಸೊಸೆ ವಾಣಿ ವಾರಿ ಕಲಶ ಪೊತ್ತಿಹಳು ೧

ಸಾರಭಕ್ತರು ಎಲ್ಲ ಸಾಲಾಗಿ ನಿಂದಿಹರು
ಭೂರಿ ಕುತೂಹಲದಿ ನಿನ್ನ ದರುಶನಕಾಗಿ
ವಾರಿಜಭವ ಮುಖ್ಯ ಸರುವ ದೇವತೆಗಳು
ಸಾರಿ ಬರುತಿರುವರು ನೀನೇಳಮ್ಮಯ್ಯಾ ೨

ನೀ ಪೋಗಿ ಆತನ ಕರಪಿಡಿದೆಬ್ಬಿಸಾದೊಡೆ
ಶ್ರೀಪತಿಯು ಶೇಷತಲ್ಪದಿಂದೇಳನು
ಅಪಾರಮಹಿಮ ಶ್ರೀ ರಂಗೇಶವಿಠಲನ
ವ್ಯಾಪಾರಂಗಳನರಿತವರಿನ್ಯಾರಮ್ಮ ೩

## ೧೫೭

ಕರುಣಿಸೆ ಕೋಮಲ ಗಾತ್ರೆ ಕಂಜಜಮಾತೆ ಪ

ಹರ ಸುರೇಶ್ವರ ಪ್ರಮುಖ ಸಮಸ್ತ ಸುರರು
ನಲಿಯುತ ಶಿರವ ಬಾಗಿ
ಕರವ ಮುಗಿಯಲು ಪರಮ ಹರುಷದಿ ವರವ ಕೊಡುತಿಹ
ಹರಿಯ ಮಡದಿಯೆ ಅ.ಪ.

ಕ್ಷೀರವಾರಿಧಿ ತನಯೆ ನಿನ್ನಯ ದೇಹ
ಬೀರುತಿದೆ ವಿದ್ಯುಚ್ಛವಿಯೆ ಶ್ರೀ ಹರಿಜಾಯೆ
ವರ ಸುದರ್ಶನ ಶಂಖಹಸ್ತದಿ

ಮೆರೆಯುತಿರೆ ಭಕುತರನು ಸಲಹಲು
ಕರವೀರಪುರ ನಿಲಯದಿ ನೆಲಸಿ
ವರದಭಯ ಹಸ್ತವ ತೋರುತಿರ್ಪೆ ೧

ಮನಸಿಜಕೋಟಿ ಸುರೂಪಿಣಿ ಮೃದುಮಧುರ ವಾಣಿ
ಧನಕನಕಾದಿಗಳಭಿಮಾನಿ ಕೈವಲ್ಯದಾಯಿನಿ
ವನಜಸಂಭವೆ ನಿನ್ನ ಒಂದರೆ–
ಕ್ಷಣವು ಬಿಡದಲೆ ತನ್ನ ಉರದೊಳು
ದನುಜಮರ್ಧನ ಧರಿಸಿಕೊಂಡು
ತನುವು ಮನವನು ನಿನಗೆ ತೆತ್ತಿಹ ೨

ರಂಗೇಶವಿಠಲನ ರಾಣಿ ಪಂಕಜಪಾಣಿ
ಡಿಂಗರೀಕರ ಪೊರೆವ ಕರುಣಿ ಕಾಳಾಹಿವೇಣಿ
ಮಂಗಳಾಂಗಿಯೆ ಖೂಳ ಕುಜನರ
ಸಂಗಬಿಡಿಸುತ ತವ ಪದ ಸರೋ
ಜಂಗಳಲಿ ನಾ ನಲಿದು ವಿಹರಿಪ
ಭೃಂಗನಾಗುವ ಪರಿಯ ತೋರೆ ೩

## ೧೫೮

ಬಾರಮ್ಮ ಲೋಕಮಾತೆ ಆನಂದಪ್ರದಾತೆ ಪ

ಸಿಂಧುರಾಜತನಯೆ ಅರವಿಂದ ಮಂದಿರೆ
ಸಿಂಧುಶಯನನ ಪ್ರಿಯೆ ಮುದದಿಂದೆಮ್ಮನು ಕಾಯೆ ೧

ಕಮಲಸಂಭವನ ಮಾತೆ ಕಮಲಾಕ್ಷಗೆ ಪ್ರೀತೆ
ಕಮಲಶರನ ಪೆತ್ತ ಕಮಲಾರಿ ಕೋಟಿಕಾಂತೆ ೨

ರಂಗೇಶವಿಠಲನ ಉರದಲಿ ಮೆರೆಯುವ
ಮಂಗಳದೇವತೆ ಸ್ಮಿತ ತಿಂಗಳ ಬೀರುತ್ತ ೩

## ೧೫೯

ಮಂಗಳಂ ಮಹಿಜಾತಗೆ ಇಂಗಡಲ ಮಂದಿರಗೆ ಪ

ಬಂಗಾರದೊಡಲ ಮುಖ್ಯ ಪದಂಗಳನೆಲ್ಲ
ಕಂಗಳ ಭ್ರೂಭಂಗಾದಿ ಕರುಣಿಪ ದೇವಿಗೆ ೧

ರಂಗು ಮಾಣಿಕದಾಭರಣಂಗಳನಿಟ್ಟು
ಡಿಂಗರೀಕರಂತರಂಗದಿ ನಲಿಯುವ ದೇವಿಗೆ ೨

ರಂಗೇಶವಿಠಲನರ್ಧಾಂಗಿಯೆನಿಸಿಕೊಂಡು
ಹಿಂಗದೆ ಭಜಿಪರ್ಗೆ ಶುಭಗಳ ನೀಡುವ ದೇವಿಗೆ ೩

## ೧೬೦

ಮಲಗು ಮಲಗಮ್ಮ ತಾಯೆ ಶ್ರೀಹರಿಯ ಜಾಯೆ
ಮಲಗು ದುಗ್ಧಾಬ್ಧಿನಿಲಯೆ ಸಾಗರನ ತನಯೆ ಜೋ ಜೋ ಪ

ಇಂದಿರೆಯೆ ಹರಿ ನಿನ್ನ ಅಂದವನು ನೋಡಿ
ಮಂದರಧರ ತನ ವಕ್ಷದಿ ಮಂದಿರವ ಮಾಡಿ
ಚಂದದಿ ಮುದ್ದಿಪನು ಗೋವಿಂದ ನಲಿದಾಡಿ
ಮಂದಸ್ಮಿತನಾಗಿ ತಾ ನಿಂದಿರುವ ನಿನ ಕೂಡಿ ೧

ಮೂರುಕಣ್ಣ ಮೋಹಿಸಿದನೇನೆಂಬೆನಾಗ
ಮಾರಮಣನು ಸ್ತ್ರೀ ವೇಷಧರಿಸಿದಾಗ
ಆ ರಮೇಶ ಮರುಳಾದನಮ್ಮ ನಿನಗೀಗ
ನೀರೆ ನೀ ಮಲಗು ನಿಶ್ಚಿಂತಳಾಗಿ ಬೇಗ ೨

ಪನ್ನಗಾರಿಧ್ವಜಗೆ ಛತ್ರ ಚಾಮರವಾದಿ
ಉನ್ನಂಥ ವಸ್ತ್ರ ಆಭರಣಗಳು ನೀನಾದಿ
ಅನ್ನಪಾನಾದಿಗಳಿತ್ತು ತೃಪ್ತಿಪಡಿಪಳಾದಿ
ನಿನ್ನಂತೆ ಸೇವಿಪರ್‍ಯಾರು ಮೂರು ಭುವನದಿ ೩

ಏನು ಸುಕೃತಗೈದಿದ್ದೆ ನಾ ಕಾಣೆನಮ್ಮಾ
ಜಾಣೆ ನಿನಗೆಣೆಯ ಕಾಣೆ ಜನನಿ ಕೇಳಮ್ಮಾ
ತಾನೆ ತನ್ನಲ್ಲಿ ರಮಿಪನಲ್ಲವೇನಮ್ಮಾ
ದಾನವಾಂತಕನು ನಿನ್ನ ಕೈಪಿಡಿದನಮ್ಮಾ ೪

ಮಂಗಳಾಂಗಿಯೆ ನಿನಗೆ ಸರಿಸಮರ್‍ಯಾರಿಲ್ಲ
ಭೃಂಗಕುಂತಳೆ ಕೈ ಜೋಡಿಪರು ಸುರರೆಲ್ಲ
ಬಂಗಾರದ ಮಂಚವಣಿಯಾಗಿಹುದಲ್ಲ
ರಂಗೇಶವಿಠಲ ತಾ ಪವಡಿಸಿರ್ಪನಲ್ಲ ೫

## ೧೬೧

ಸರಸಿಜಾಲಯೆ ಪೊರೆಯೆ ಬೇಗನೇ ಹೇ ಮಾತೆ ಪ

ಸಾರಸಭವನ ವೀರ ಮಾತೆಯೆ
ನೀರಜಾಕ್ಷಿಯೆ ಹೇ ಮಾತೆ
ಸಾರಸಾಕ್ಷ ಪರಮಪ್ರಿಯಳೆ
ಸಾರಿಬಾರೆನ್ನ ಹೇ ಮಾತೆ ೧

ತುರುವು ತನ್ನ ಕರುವ ಧ್ವನಿಯಂ
ಅರಿತು ಬಾರದೆ ಹೇ ಮಾತೆ ಈ
ತೆರದಿ ಎನ್ನ ಮೊರೆಯ ಕೇಳಿ
ಕರವ ಹಿಡಿಯೆ ಹೇ ಮಾತೆ ೨

ಪರಿಯು ಯಾರೆ ಸಿರಿಯು ನಿನಗೆ
ಪರಮಪಾವನೆ ಹೇ ಮಾತೆ
ಕರುಣದಿಂದ ಪೊರೆದು ತೋರೆ
ಸಿರಿರಂಗೇಶವಿಠಲನ ಹೇ ಮಾತೆ ೩

## ೧೬೨

ಏಳಯ್ಯ ಭಾರತಿ ಮೋಹನ ಶ್ರೀ
ಲೋಲನೇಳುವದಕಿನ್ನ ಮುನ್ನ ಪ

ತಾಳಮೇಳದವರೆಲ್ಲಿ ಬಂದು ದ್ವಾರ
ದೊಳು ಸೇರಿ ಪಾಡುತಿಹರೊ ನಿಂದು ೧

ಜಲಜಭವ ಭವಾದಿ ಸುರರು ಸಭೆ
ಯಲಿ ಬಂದಾಗಲೆ ಓಲೈಸುತಲಿಹರು ೨

ತಡಮಾಡಬೇಡಯ್ಯ ನೀನು ನಿನ್ನ
ಒಡೆಯನೆದ್ದು ನಿನ್ನನು ಕೂಗ್ಯಾನೊ ೩

ಕಪಿಯಾಗಿ ನೀ ಪುಟ್ಟಬೇಕಂತೆ ತಾನು
ವಿಪಿನವಾಸಕಾಗಿ ತೆರಳುವನಂತೆ ೪

ಶರಧಿಯ ನೀ ದಾಟಬೇಕಂತೆ ಅಲ್ಲಿ
ಸಿರಿಗೆ ಮುದ್ರೆಯ ನೀನೀಯಬೇಕಂತೆ ೫

ದುರುಳನ ಪುರವ ನೀನುರುಹಬೇಕಂತೆ ಅವನ
ಪರಿವಾರವೆಲ್ಲವ ನೀ ತರಿಯಬೇಕಂತೆ ೬

ಕುಂತೀಲಿ ನೀ ಪುಟ್ಟಬೇಕಂತೆ ತಾನು
ಕಂತುವಿಗೆ ಪಿತನಾಗುವನಂತೆ ೭

ಮಗಧ ಮುಖ್ಯರ ನೀ ಸೀಳಬೇಕಂತೆ ದೇವ
ಜಗಕೆ ಮಂಗಳವ ನೀ ಮಾಡಬೇಕಂತೆ ೮

ದುರುಳ ದುಶ್ಶಾಸನನ ಇರಿಯಬೇಕಂತೆ ಅವನ
ಕರುಳ ನಿನ್ನರಸಿಗೆ ಮುಡಿಸಬೇಕಂತೆ ೯

ಮುದ್ದು ಭಾರತಿಯ ನೀ ಬಿಡಬೇಕಂತೆ ನೀನು
ಹೊದ್ದು ಕಾವಿಬಟ್ಟೆ ಯತಿಯಾಗಬೇಕಂತೆ ೧೦

ಅದ್ವೈತ ಮತವನು ನೀ ಖಂಡ್ರಿಸಬೇಕಂತೆ ಗುರು
ಮಧ್ವಮುನಿಯೆಂದು ನೀ ಮೆರೆಯಬೇಕಂತೆ ೧೧

ಬದರಿಕಾಶ್ರಮಕೆ ಪೋಗಬೇಕಂತೆ ಅಲ್ಲಿ
ಬಾದರಾಯಣನಾಗಿ ತಾನಿರ್ಪನಂತೆ ೧೨

ಹಿಂಗದೆ ಶ್ರೀಶನ ನೀ ನುತಿಸಬೇಕಂತೆ ಸಿರಿ
ರಂಗೇಶವಿಠಲ ನಿನಗೊಲಿದಿಹನಂತೆ ೧೩

## ೧೬೩

ಕರುಣದಿ ಪೊರೆಯೆನ್ನ ಪ್ರಭುವೇ ಮೂಲ ಗುರುವೆ ಪ

ಪರಮ ದಯಾನ್ವಿತ ಸುರಕಲ್ಪತರುವೆ ಅ.ಪ.

ಅಂಗಜಪಿತನಾಜ್ಞೆ ಹಿಂಗಾದೆ ನೀಯಾಂತು
ಅಂಗನೆ ಸೀತೆಯ ಅರಸುತ್ತ ಪೋದೆಯೊ

ತುಂಗವಿಕ್ರಮ ನೀನು ಮಂಗಳಾಂಗಿಯ ಕಂಡು
ಶೃಂಗಾರವನವನ್ನೆ ಭಂಗಮಾಡಿದೆಯೊ ೧

ಕರಿಪುರದರಸನ ವರಪುತ್ರ ನೀನಾಗಿ
ಕರಿರಾಜವರದಗೆ ಭಾವನಾಗಿ
ಕುರುರಾಯ ಮುಖ್ಯ ದುರುಳರ ನೀ ಕೊಂದು
ಧರಣಿ ಭಾರವೆಲ್ಲ ಹರಿಸಿದೆ ನೀನು ೨

ಯತಿಯ ರೂಪವ ತಾಳಿ ಕ್ಷಿತಿಯೊಳು ಚರಿಸುತ
ದಿತಿಜರ ಬಾಯ್ಗಳ ಬಡಿಯುತಲಿ
ಪತಿತ ಪಾವನ ಶ್ರೀ ರಂಗೇಶವಿಠಲನೆ
ಪ್ರತಿಯಿಲ್ಲವೆಂತೆಂಬ ಮತಿಯಿತ್ತದೇವ ೩

## ೧೬೪

ಕರುಣೆ ತೋರೋ ಕಣ್ಣ ತೆರೆದು
ಗುರುವು ನೀನೆ ಗತಿಯು ನೀನೆ ಪ

ತ್ವರದಿ ಜಪವ ಪೂರ್ಣ ಮಾಡಿ
ವರದ ಕರವ ಶಿರದಲಿಡುತ ಅ.ಪ.

ಸಿರಿಯ ವರನ ಪರಮ ಭಕುತ
ಸಿರಿದಮಣಿಗಳಲ್ಲಿ ನೀನು
ಹಿರಿಯ ಅಹುದೊ ಜಗದ ಗುರುವೆ
ಪರಮ ಕರುಣಾಕರನೆ ದೇವ ೧

ಹರಿಯ ಆಜ್ಞದಂತೆ ನೀನು
ಸರುವ ಪ್ರಾಣಿಗಳಲಿ ನಿಂದು
ಹಿರಿದು ಜಪವನಾಚರಿಸಿ ಅವರು
ಅರಿಯದಂತೆ ನಿರುತ ಪೊರೆವೆ ೨

ಶರಧಿ ಮಥನದಿಂದ ಬಂದ
ಗರಳನಂದು ಭುವನಗಳನು
ಉರುಹುತಿರಲು ಹರಿಯ ಮನವ
ಅರಿತು ನೀನು ಭರದಿ ಕುಡಿದೆ ೩

ಪೊಗಳಲವೆ ನಿನ್ನ ಮಹಿಮೆ
ಸುಗುಣಮಣಿ ಭಾರತಿಯ ಪತಿಯೆ
ಅಗಜೆಯರಸನನ್ನು ಪೆತ್ತ
ನಗಧರನ ಪ್ರೀತಿ ಪಾತ್ರ ೪

ಅಜನಪದಕೆ ಅರುಹನಾದೆ
ದ್ವಿಜ ಫಣೀಶಾದಿಗಳ ಗುರುವೆ
ಭಜನೆಗೈವೆನೆಂತು ನಿನ್ನ
ತ್ರಿಜಗವಂದ್ಯ ತ್ರಿಜಗಪೂಜ್ಯ ೫

ತ್ರೇತೆಯಲಿ ಅಂಜನಿಯಳ
ಪೂತ ಗರ್ಭದಿಂದ ಬಂದು
ಪೋತನಾದ ರವಿಜನನ್ನು
ಪ್ರೀತಿಯಿಂದ ಸಲಹಿದೆಯ್ಯ ೬

ಅಂದು ಕಪಿಯ ವೃಂದವೆಲ್ಲ
ಬಂದು ಶರಿಧಿ ತಟದಿ ನಿಂದು
ಮುಂದೆ ದಾರಿ ಕಾಣದಿರಲು
ಸಿಂಧುವನ್ನು ದಾಟಿ ಬಂದೆ ೭

ಮಂಗಳಾಂಗಿ ಸೀತೆಯನ್ನು
ಕಂಗಳಿಂದ ನೋಡಿ ಹಿಗ್ಗಿ
ಅಂಗನೆಯ ಪಾದಕೆರಗಿ
ಉಂಗುರವನಿತ್ತ ಧೀರ ೮

ಫಲವ ಸವಿವ ನೆವದಿ ನೀನು
ನಲಿದು ವನವ ಮುರಿದು ತುಳಿದೆ
ಕಲಹಕಿಳಿದು ಬಂದ ಅಕ್ಷನ
ಬಲಿಯಹಾಕಿ ಕುಣಿಯುತಿರ್ದೆ ೯

ಕುಲಿಶಧರನ ಗೆಲಿದ ವೀರ
ಜಲಜಭವನ ಶರವ ಬಿಡಲು
ಛಲದಿ ನೀನು ಅದನು ತಡೆದು
ಮಲೆತು ನಿಂತ ಮಹಿಮಯುತನೆ ೧೦

ವನಜಭವ ನಾಮನ ಕೇಳಿ
ಕನಲಿ ಬಂದಾ ಶರಕೆ ಸಿಲುಕಿ
ದನುಜ ಸಭೆಗೆ ಬಿಜಯಮಾಡಿ
ಅನುವ ತಿಳಿದು ಬಂದ ದೇವ ೧೧

ರಕ್ಕಸನ ಲೆಕ್ಕಿಸದೆ
ಧಿಕ್ಕರಿಸಿ ಮಾತನಾಡಿ
ಪಕ್ಕಿರಥನ ಬಲುಮೆಯನ್ನು
ಹೆಕ್ಕಳಿಸಿ ನೀ ಪೊಗಳಿ ನಿಂದೆ ೧೨

ಉಕ್ಕಿ ಬಂದ ರೋಷದಿಂದ
ರಕ್ಕಸನು ಚರರ ಕರೆದು
ಇಕ್ಕಿರಿವನ ಬಾಲಕುರಿಯ
ತಕ್ಕ ಶಿಕ್ಷೆ ಮಾಡಿರೆನಲು ೧೩

ಸುಟ್ಟಬಾಲ ನೆಗಹಿಕೊಂಡು
ದಿಟ್ಟ ನೀನು ಪುರವನೆಲ್ಲ
ಸುಟ್ಟುಖಳರ ಬಿಡದೆ ಸದೆದು
ಅಟ್ಟಹಾಸದಿಂದ ಮೆರೆದೆ ೧೪

ಮತ್ತೆ ಶರಧಿ ಹಾರಿ ಬಂದು
ಸತ್ಯಸಂಧ ರಾಮಗೆರಗಿ
ಇತ್ತು ಚೂಡಾಮಣಿಯನವನಾ
ಚಿತ್ತ ಹರುಷಗೈದ ಧೀರ ೧೫

ಹರಿಯು ತನ್ನ ಬೆರಳಿನಲ್ಲಿ
ಗಿರಿಯನೆತ್ತಿ ನಿಂತನೆಂದು
ಸರುವ ಗಿರಿಗಳನ್ನು ನೆಗಹಿ
ಶರಧಿಗೊಡ್ಡಿ ಸೇತುಗೈದೆ ೧೬

ಸುರರಿಗಮೃತವಿತ್ತನೆಂದು
ಅರಸಿ ಸಂಜಿವನವ ನೀನು
ಭರದಿ ತಂದು ಒರಗಿ ಬಿದ್ದ
ಹರಿಯ ವೃಂದಕೆರೆದು ಮೆರೆದೆ ೧೭

ಮಂದರಾದ್ರಿಯನ್ನು ಒಡೆಯ
ಅಂದು ಬೆನ್ನಲಿ ಪೊತ್ತು ನಿಂದು
ಸಿಂಧುವನ್ನು ಗೆಲಿದನೆಂದು
ಬಂದೆ ಹಾರಿ ಲಂಕಪುರಿಗೆ ೧೮

ಧರಣಿಧವಗೆ ನೆರಳಿನಂತೆ
ಸರುವ ಕಾಲ ಚರಿಸಿ ನೀನು
ಅರಸಿನಂತೆ ಬಂಟನೆಂಬ
ಕರೆಯವಾರ್ತೆ ಖರೆಯಗೈದೆ ೧೯

ಕಾಲನೇಮಿ ಯತಿಯ ರೂಪ
ಜಾಲದಿಂದ ವೇಳೆ ಕಳೆಯೆ
ಶೀಲವಂತ ಅವನ ಸೀಳಿ
ಬಾಲದಿಂದ ನಗವ ತಂದೆ ೨೦

ವ್ಯಾಸಮುನಿಯ ಯಂತ್ರದಲ್ಲಿ
ವಾಸವೆಂದು ತೂರಿಕೊಳುತ
ದಾಸ ಜನರ ಆಸೆಗಳನು
ಬೇಸರಾದೆ ನೀ ಸಲಿಸುವೆ ೨೧

ನೀನು ಒಲಿಯೆ ರಾಮನೊಲಿವ
ನೀನು ಮುನಿಯೆ ರಾಮ ಮುನಿವ
ನಾನು ನಿನಗೆ ಅನ್ಯನಲ್ಲ
ಸೂನುವಲ್ಲೇ ತಿಳಿದು ನೋಡೊ ೨೨

ನಿನ್ನ ನಂಬಿ ಸರಮೆಯರಸ
ಪನ್ನಗಾರಿರಥನ ಒಲುಮೆ-
ಯನ್ನು ಪಡೆದು ಹರುಷವಾಂತು
ಧನ್ಯನಾದ ಧರೆಯ ಮೇಲೆ ೨೩

ನಿನ್ನ ಜರೆದ ಅವನ ಅಣ್ಣ
ತನ್ನ ಬಂಧು ದೇಶ ಕೋಶ-
ವನ್ನು ನೀಗಿಕೊಂಡು ಕೊನೆಗೆ
ಮಣ್ಣುಗೂಡಿ ಪೋದನಯ್ಯ ೨೪

ದಂತಿಪುರದ ದೊರೆಯೆ ಮಡದಿ
ಕುಂತಿದೇವಿ ಕುವರನಾಗಿ
ಕಂತುಪಿತನ ಮತವ ತಿಳಿದು
ನಿಂತು ಖಳರ ಸದೆದ ಶೂರ ೨೫

ಏಕಚಕ್ರ ನಗರದಲ್ಲಿ
ಶೋಕ ಪಡುತಲಿರ್ದ ಜನರ
ವಾಕು ಕೇಳಿ ಕಾಕು ಬಕನ
ಏಕಮುಷ್ಠಿಯಿಂದ ಕೊಂದೆ ೨೬

ಕೀಚಕಾರಿ ನಿನ್ನ ಮಹಿಮೆ
ಯೋಚನೆಗೆ ನಿಲುಕದಯ್ಯ
ಯಾಚಿಸೂತಿ ದೀನನಾಗಿ
ಮಾಚದಂತೆ ಸಲಹೊ ಸ್ವಾಮಿ ೨೭

ಜರೆಯ ಸುತನ ಗರುವ ಮುರಿದು
ಭರದಿ ಅವನ ತನುವ ಸೀಳಿ
ಧರಣಿಧವರ ಸೆರೆಯ ಬಿಡಿಸಿ
ಪರಮ ಹರುಷಗರೆದ ಧೀರ ೨೮

ದುರುಳ ದುಶ್ಶಾಸನನ ಅಂದು
ಧುರದಿ ಕೆಡಹಿ ಉರವ ಬಗೆದು
ತಿರೆಯ ಹೊರೆಯ ಹರಿಸಿದಂಥ
ಸರುವ ಪುಣ್ಯ ಹರಿಗೆ ಇತ್ತೆ ೨೯

ಮಲ್ಲಯುದ್ಧದಲ್ಲಿ ನೀನು
ಖುಲ್ಲ ದುರ್ಯೋಧನನ ತೊಡೆಗ
ಳೆಲ್ಲ ಮುರಿಯೆ ಸುರರು ನೋಡಿ
ಫುಲ್ಲ ಮಳೆಯಗರೆದರಾಗ ೩೦

ಸೃಷ್ಟಿಕರ್ತ ಕೃಷ್ಣ ನಿನ್ನ
ಇಷ್ಟದೈವವೆಂದು ಅವನ
ನಿಷ್ಠೆಯಿಂದ ಭಜಿಸಿ ಇಳೆಯ
ಶಿಷ್ಟ ಜನರ ಕಷ್ಟ ಕಳೆದೆ ೩೧

ಖಲರು ನಿನ್ನ ಬಲುಮೆ ನೋಡಿ
ಗೆಲುವು ತಮಗೆ ಆಗದೆಂದು
ಕಲಿಯುಗದಿ ವಿಪ್ರರಾಗಿ
ಇಳೆಯ ಧವನ ಹಳಿಯುತಿರಲು ೩೨

ಜಡಜನೇತ್ರ ನಿನ್ನ ಕರೆದು
ಅಡಗಿಸಿವರವಾದವೆನಲು
ನಡುವೆ ಮನೆಯು ಎಂಬ ದ್ವಿಜನ
ಮಡದಿ ಗರ್ಭದಿಂದ ಬಂದೆ ೩೩

ಯತಿಯು ನೀನೆಂದೆನಿಸಿಕೊಂಡು
ಚ್ಯುತಿ ರಹಿತ ಪ್ರೇಕ್ಷರಿಂದ
ಶ್ರುತಿಪುರಾಣ ವೇದಮಂತ್ರ
ತತಿಗಳನು ಪಠಣಗೈದೆ ೩೪

ಹರಿಯೆ ಹರನು ಹರನೆ ಹರಿಯೆಂ-
ದರುಹುತಿರ್ದಾ ದುರುಳ ಖಳರ
ಕರೆದು ಕರೆದು ಜರೆದು ಭರದಿ
ಹರಿಯೆ ಶರಣೆಂದರುಹಿ ಮೆರೆದೆ ೩೫

ಮಾಯ ಮತವ ಧಿಕ್ಕರಿಸಿ
ನ್ಯಾಯ ಶಾಸ್ತ್ರವನ್ನು ರಚಿಸಿ
ಕಾಯಭವನ ಪಿತನ ಹಳಿದ
ನಾಯಿಗಳನು ಬಡಿದು ನಿಂದೆ ೩೬

ಕೃತಕಭಾಷ್ಯ ರಚಿಸಿದಂಥ
ದಿತಿಜರನ್ನಾನತರ ಮಾಡಿ
ಗತಿಯ ತೋರಿ ಜನಕೆ ಸತ್ಯಾ-
ವತಿಯ ಸುತನ ಒಲುಮೆ ಪಡೆದೆ ೩೭

ಮಧ್ವಮತವ ಉದ್ಧರಿಸಿ
ಶುದ್ಧವಾದ ಬುದ್ಧಿಗಲಿಸಿ
ಹದ್ದುವಾಹನ ಮುದ್ದುಕೃಷ್ಣನ
ಶ್ರದ್ಧೆಯಿಂದ ಬದ್ಧಗೈದೆ ೩೮

ಅಷ್ಟಮಠವ ರಚನೆ ಮಾಡಿ
ಶಿಷ್ಟಜನರ ಬಾಧೆ ಕಳದೆ
ತುಷ್ಟರಾದ ದ್ವಿಜರು ನಿನ್ನ
ಎಷ್ಟು ಪೊಗಳಿ ತೀರದಯ್ಯ ೩೯

ದಾನಧರ್ಮವ ಮಾಡಲಿಲ್ಲ
ಜ್ಞಾನಮಾರ್ಗ ಹಿಡಿಯಲಿಲ್ಲ
ದೀನತನದ ಭವಣೆಯಿಂದ
ನಾನು ಮರುಗಿ ಬಂದೆನೀಗ ೪೦

ವಚನ ಮಾರ್ಗದಲ್ಲಿ ನಿನ್ನ
ಪ್ರಚನೆ ಮಾಳ್ಪೆ ಕೇಳೊ ದೇವ
ರಚಿಸಲಾರೆ ನಿಯಮಗಳನು
ಉಚಿತ ತೋರಿದಂತೆ ಮಾಡೊ ೪೧

ನಾರಸಿಂಹ ರಾಮಕೃಷ್ಣ
ನಾರಿ ಸತ್ಯವತಿಯ ಮಗನ
ಮೂರುತಿಗಳ ಹೃದಯದಲ್ಲಿ
ಸೇರಿ ಭಜಿಪ ಭಾವಿ ಬ್ರಹ್ಮ ೪೨

ವಾಯು ಹನುಮ ಭೀಮ ಮಧ್ವ
ರಾಯ ನಿನ್ನ ನಂಬಿ ಬಂದೆ
ಮಾಯ ಪಾಶದಿಂದ ಬಿಡಿಸಿ
ಕಾಯಬೇಕೊ ಕೃಪಣ ಬಂಧು ೪೩

ಜನುಮ ಜನುಮದಲ್ಲಿ ನೀನೆ
ಎನಗೆ ಜನನಿ ಜನಕನಾಗಿ
ಕನಸು ಮನಸಿನಲ್ಲಿ ನಿನ್ನ
ನೆನೆಸುವಂತೆ ಮತಿಯ ನೀಡೊ ೪೪

ತುಂಗಭದ್ರ ತೀರ ವಾಸ
ಭಂಗಬಾಳನು ಹೊರೆಯಲಾರೆ
ಮಂಗಳಾಂಗ ಕಳುಹೊ ಎನ್ನ
ರಂಗಈಶವಿಠಲ ಪುರಿಗೆ ೪೫

## ೧೬೫

ಕೋರಿ ಬಂದೆನೊ ನಾನು
ಭಾರತಿ ಪತಿ ನಿನ್ನ ಪ

ಘೋರ ಸಂಸಾರದಿಂದ
ಪಾರು ಮಾಡುವಿಯೆಂದು ಅ.ಪ.

ಸರ್ವ ಪ್ರಾಣಿಗಳಲ್ಲಿ
ಸರ್ವವಸ್ತುಗಳಲ್ಲಿ
ಸರ್ವೇಶ ಹರಿಯ ಕೂಡಿ
ಸರ್ವದಾ ಇರುವೆಯೆಂದು ೧

ಅಂಜಾನೆ ಗರ್ಭದಿ
ಸಂಜಾನಿತ ನೀನಾಗಿ
ಕಂಜನಾಭನ ಮನ-
ರಂಜಾನೆ ಮಾಡಿದೆಯೆಂದು ೨

ದಾನವಾಂತಕನಿಂದ ಸ-
ನ್ಮಾನಿತನಾದಂಥ
ದೀನರಕ್ಷಕ ಭೀಮ-
ಸೇನ ವಿಕ್ರಮನೆಂದು ೩

ಹೀನಬುದ್ಧಿಯ ಬಿಡಿಸಿ
ದೀನ ಸುಜನರಿಗೆ

ಜ್ಞಾನ ಮಾರ್ಗವ ತೋರಿ–
ದಾನಂದತೀರ್ಥನೆಂದು ೪

ಶ್ರೀ ರಂಗೇಶವಿಠಲಗೆ ಸಮ
ರ್ಯಾರಿಲ್ಲವೆಂತೆಂದು
ಈರೇಳು ಜಗದೊಳು
ಸಾರುತಿರುವೆಯೆಂದು ೫

## ೧೬೬

ಗುರು ಮುಖ್ಯಪ್ರಾಣ ಕರವೆತ್ತಿ ನಿಂದ ಪ

ಹರಿಯೆ ಪರನೆನ್ನದವನ ಹಲ್ಮುರಿವೆನೆಂದು ಅ.ಪ.

ಸಿರಿ ರಾಮನಾಜ್ಞೆಯನು ಸಿರದೊಳಾನುತ ಬಂದು
ವರಕಪಿಗಳೊಡಗೂಡಿ ಸಿರಿದೇವಿಯನರಸುತ
ಶರಧಿತಟಕೆ ಬಂದು ಸಿರಿಪೋದ ಪಥವರಿಯದೆ
ಪರಿತೋರದಿರ್ದ ಹರಿವರರಿಗಭಯವಿತ್ತು ೧

ಇರುಳು ಇಂದ್ರಜಿತುವಿನ ಶರಹತಿಯಲಳಿದಂಥ
ಸರುವ ಕಪಿ ಭಟರನ್ನು ಸಿರಿ ರಾಮ ನೋಡುತ
ಮರುಗುತಿರಲಂದು ವರ ಜಾಂಬವನ ಸುಮತಿಯಲಿ
ತ್ವರಿತದಿ ಸಂಜೀವನ ಗಿರಿಯ ತಹೆನೆನ್ನುತ ೨

ಭರದಿ ದಶಶಿರನು ತಾನರಿಯದೆ ಹನುಮನ ಬಲ
ಭರವಸದಲಿ ಮಾಡಿ ಮೂರು ಗುದ್ದಿನ ಪಂಥ
ಕರಹತಿಗೆ ಕಂಗೆಟ್ಟು ಧುರವ ಬಿಟ್ಟೋಡುತಿರೆ
ಅರಸಿ ಅಸುರನ ಪಿಡಿದ ಹರಿಸು ಋಣವನೆಂದು ೩

ದುರುಳ ಕೀಚಕನಂದು ಕರಿಗಮನೆಯನು ಕಂಡು
ಸ್ಮರಶರಹತಿಯಿಂದ ಉರುತರದಲಿ ನೊಂದು
ಹರಿಣಾಕ್ಷಿಯನು ಒರಿಸಿ ಸೆರಗ್ಪಿಡಿದೆಳೆದುದನು
ತರಳೆ ಮುಖದಿ ಕೇಳವನ ಸಿರ ಮುರಿವೆನೆಂದು ೪

ಕುರುಪತಿಯ ಸಭೆಯಲಿ ದುರುಪದಿ ಗೈದ ಶಪಥ
ಮರೆಯದೆ ದುಶ್ಶಾಸನನ ಧುರದಿ ಕೆಡಹಿ ಕೊಂದು
ಉರ ಬಗೆದು ಕರುಳ ನಿಜತರುಣಿಗೆ ಮುಡಿಸುವಾಗ
ಬರಲಿ ಬಿಡಿಸುವರೆಂದು ಉರು ಗದೆಯನು ಪಿಡಿದು ೫

ಹರಿಹರರು ಸರಿಯೆಂದು ಹರಟುತಿರ್ದವರನು
ಗುರುತರ ವಾಕುಗಳೆಂಬ ಬಿರುಬಾಣದಿಂದ
ಗರ ಹೊಡೆದವರ ಮಾಡಿ ಪರತತ್ವವನು ಪೇಳಿ
ಭರದಿ ನಡೆದೆ 'ಪರಮೋನಹತಿ ಸದೃಶ' ವೆಂದು ೬

ಸರುವರಂತರ್ಯಾಖ್ಯ ಹರಿಯಾಜ್ಞಾನುಸಾರ
ಸರುವ ಜೀವರಿಗೆ ತಾನು ಗುರುವೆನಿಸಿಕೊಂಡು
ತರತಮವನರಿಯುತ ಸಿರಿ ರಂಗೇಶವಿಠಲನ
ಸ್ಮರಿಸುತಿರುವಗಾವ ದುರಿತ ಭಯವಿಲ್ಲೆಂದು ೭

## ೧೬೭

ಭಾರತೀಶನೆ ಕಾಯೋ ನಿನ್ನ ಸಿರಿ ಚರಣದಲ-
ಪಾರ ಭಕುತಿಯನೀಯೋ ತವ ಸೇವಕನೆನಿಸಿ
ಕೀರುತಿಯನು ಪಡೆಯೋ ಭವಕ್ಲೇಶ ಕಳೆಯೊ ಪ

ಸೂರಿ ಸುಬ್ಬಣಾಚಾರ್ಯಕರಸ-
ರೋರು ಹಗಲಲಿ ಪೂಜೆಗೊಳುತಲಿ
ಚಾರುತರ ಶ್ರೀ ಜಯಮಂಗಳಿಯ
ತೀರದೊಳಿರುವ ವೀರ ಮಾರುತಿ ಅ.ಪ.

ಪ್ರತಿ ವರುಷ ಮಾಘಸಿತ । ನವಮಿ ದಿನದೊಳು ನೀ-
ನತಿವಿಭವದೊಳು ನಗುತ । ಭಕುತರಿಷ್ಟವ ಸಲಿಸೆ
ರಥದೊಳಗೆ ಕುಳ್ಳಿರುತ । ವಿಧ ವಿಧ ವಾದ್ಯಗಳ
ತತಿಯನಾಲೈಸುತ । ಅತಿ ಮೋದಬಡುತ
ನತ ಜನರ ಬಹು ವಿವಿಧ ಪರಿ ಸಂ-
ಸ್ತುತಿಸೆ ಹಿಗ್ಗುತಲವರ ಸ್ವಮನೋ-
ರಥಗಳ ನೀ ಸಲಿಸುವೆನೆನುತಲಿ
ಅತುಳ ವಿಕ್ರಮದಭಯ ಹಸ್ತದಿ
ಕೃತಿರಮಣ ಸಿರಿವರ ಹರಿಯನನು
ಮತವ ಪಡೆಯುತ ರಥವ ನಡೆಸಿ
ಚತುರ ದಿಕ್ಕಲಿ ಬಿಜಯ ಮಾಡುತ
ಸತತ ಹರುಷವಗರೆವ ದೇವ ೧

ರಕ್ಕಸಕುಲ ತಮ ಭಾನು । ತಾಮಸರ ಧ್ಯಾನಕೆ
ಸಿಕ್ಕುವನಲ್ಲ ನೀನು । ಸುಜನರ ಹೃದಯದೊಳು
ಅರ್ಕನೊಲು ಪೊಳೆವನು । ಹರಿಸಿರಿಗಾಳುಳಿದು
ಬಕ್ಕ ದಿವಿಜರಿಗಿನ್ನು । ಗುರುಬಲ್ಲೆ ನಾನು
ಚಿಕ್ಕ ರೂಪವಗೊಂಡು ಲಂಕೆಯ
ಪೊಕ್ಕು ರಾಮನ ಸತಿಯ ಕಂಡು
ತುಕ್ಕಿ ವನವನು ಸೂರೆ ಮಾಡಿ
ಉಕ್ಕಿನ ಧ್ವಜಸ್ತಂಭದಿಂದ
ಸೊಕ್ಕಿ ಬಂದ ದನುಜವ್ರಾತವ
ಕುಕ್ಕಿ ಕೆಡಹಿ ಪುರವನುರಹಿ
ಅಕ್ಕರದ ಮಣಿಸಹಿತ ಬಂದು
ಪಕ್ಕಿದೇರನಿಗೆರಗಿ ನಿಂದೆ ೨

ತುತಿಸ ಬಲ್ಲೆನೆ ನಾನು । ನಿನ್ನಯ ಸುಗುಣಗಳ
ತತಿಗಳೆಲ್ಲವನು । ತ್ರಿಪುರ ಸುಂದರಿ ಪಾ–
ರ್ವತಿ ಪತಿಯ ಪಡೆದವನು । ರಂಗೇಶವಿಠಲಗೆ
ಅತಿಪ್ರೀತಿಸುತ ನೀನು । ನಿಷ್ಕಾಮಯುತನು
ಪತಿತರನುದ್ಧರಿಸಲು ನೀ ಸಿರಿ
ಪತಿಯ ಮತದೊಳು ಹನುಮ ಭೀಮ
ಯತಿಯ ರೂಪವ ತಾಳಿ ಹರುಷದಿ
ಕ್ಷಿತಿಯ ಭಾರವ ಹರಸಿ ಸಲಹಿದೆ
ಅತುಳ ಮಹಿಮ ನಿನ್ನಪರಿಮಿತ ಶ
ಕುತಿಗೆ ನಮೊ ನಮೊ ವಾಯುತನಯನೆ
ಸತತ ಮುದದೊಳು ನಿನ್ನ ಸ್ಮರಿಸುವ
ಮತಿಯ ಪಾಲಿಸು ಪತಿತ ಪಾವನ ೩

## ೧೬೮

ಮಂಗಳಂ ಶುಭಮಂಗಳಂ ಪ

ಅಂಜನೆ ಗರ್ಭದಿಂ ಬಂದವಗೆ
ಕಂಜಾಕ್ಷಿ ವಾರ್ತೆಯ ತಂದವಗೆ
ಸಂಜೀವನ ತಂದು ರಾಮನ
ರಂಜನೆಗೈದ ಮುಖ್ಯಪ್ರಾಣಗೆ ೧

ಕುಂತಿಯ ಕಂದನೆಂದೆನಿಸಿದವಗೆ
ದಂತಿ ಸಾಸಿರ ಬಲವಂತನೆಗೆ
ಕಂತು ಪಿತನ ಮಂತ್ರಿಯೆನಿಸಿ ಕುರುಕುಲ
ಅಂತಕನಾದ ಭೀಮಸೇನಗೆ ೨

ನಡುಮನೆ ವೇದವತಿ ವರಸುತಗೆ
ಉಡುದಾರ ಉಪವೀತ ತೊರೆದವಗೆ
ಉಡುಪೀಲಿ ಸಿರಿ ರಂಗೇಶವಿಠಲನ
ಬಿಡದೆ ಪೂಜಿಪ ಮದ್ವರಾಯಗೆ ೩

## ೧೬೯

ಮಾರಪಿತನ ತೋರಿದಲ್ಲದೆ ನಾ ಬಿಡೆ ನಿನ್ನ ಪಾದವ ಪ

ಧೀರ ಹನುಮ ಘೋರ ರೂಪವ
ತೋರಿ ಪಾರಲು ದೂರ ನಾ ಸಾರೆನು ಅ.ಪ.

ನೀರ ಸೇರುತ ಭಾರ ಧರಿಸಿ
ಕೋರೆ ತೋರುತ ಘೋರ ರೂಪದಿ
ಪೋರನೆನ್ನಿಸಿ ನಾರಿ ಹತ್ಯದಿ
ಚಾರುವನವ ಸೇರಿದವನ ೧

ಜಾರನೆನ್ನಿಸಿ ನಾರಿ ಮಾನವ
ಸೂರೆಗೊಳ್ಳುತ ಪಾರಿಪೋಗುವ
ಶೂರ ತೇಜಿಯನೇರಿ ಮೆರೆದ
ವಾರಿಜಾಕ್ಷನ ಧೀರ ಕಲ್ಕಿಯ ೨

ದಾರಿ ತೋರದೆ ಸಾರಿ ನಿನ್ನನು
ಕೋರಿ ಭಜಿಪೆನು ಬಾರಿ ಬಾರಿಗೆ
ಭಾರತೀಶನೆ ತೋರು ಕರುಣದಿ
ಸಾರಸಾಕ್ಷ ರಂಗೇಶವಿಠಲನ ೩

## ೧೭೦

ಮಲಗು ಮಲಗಯ್ಯ ಹನುಮ ಕಲಿಭಂಜನ ಭೀಮ
ಮಲಗು ಮುನಿ ಜಲಧಿ ಸೋಮ
ಅಲವಬೋಧನಾಮಾ ಜೋ ಜೋ ಪ

ತ್ರೇತೆಯಲಿ ರಾಮದೂತನಾಗಿ ನೀ ಬಂದು
ಭೀತಿಯಿಲ್ಲದೆ ಲಂಕೆಯ ದಹಿಸಿದೆಯೊ ಅಂದು
ಸೀತೆಯಿತ್ತಂಥ ಚೂಡಾಮಣಿಯನು ತಂದು
ಪ್ರೀತಿಪಡಿಸಿದೆ ರಾಮನ ನೀ ದಯಾಸಿಂಧು ೧

ದ್ವಾಪರಾಂತದಲಿ ಭೀಮನಾಗಿ ನೀ ಬಂದೆ
ಪಾಪಿ ಕೀಚಕ ದುಶ್ಶಾಸನಾದ್ಯರ ಕೊಂದೆ
ಶ್ರೀಪತಿ ಸಿರಿ ಕೃಷ್ಣನ ಪಾದಕೆರಗಿ ನಿಂದೆ
ಭಾಪು ಭಾಪುರೆಂದೆನಿಸಿಕೊಂಡೆ ಅವನಿಂದೆ ೨

ನಾನೆ ದೇವರೆಂಬ ಮತವನು ಹೆಮ್ಮೆಯಿಂದ
ದಾನವರೀ ಕಲಿಯುಗದಲಿ ಪೊಗಳೆ ಮುದದಿಂದ
ನೀನವತರಿಸಿ ಮಧ್ವಮುನಿ ಪೆಸರಿನಿಂದ
ಹೀನ ಮತವ ಮುರಿದೆಯೊ ವಾಗ್ಬಾಣಗಳಿಂದ ೩

ಏಕಾದ್ಯಶ ಕರ್ಮಗಳ ಶ್ರೀ ಹರಿಗರ್ಪಿಸಿ
ಆತನನು ನೀ ಬಹು ಸಂತೋಷವನುಪಡಿಸಿ
ಜಾತರಹಿತನಾಗೆನುತ ಆಶಿಷವ ವಹಿಸಿ
ವಾತಸುತ ಕುಳಿತಿಹೆ ಯಂತ್ರೋದ್ಧಾರನೆನಿಸಿ ೪

ಕಂಗಳನು ಮುಚ್ಚಿ ಜಪಮಾಲೆಯನು ತಿರುಗಿಸುತ
ರಂಗೇಶವಿಠಲನ ತಾನದೊಳು ಸ್ಮರಿಸುತ
ಹಿಂಗೇಕೆ ಕುಳಿತಿಹೆ ಮಲಗೇಳಯ್ಯ ದಾತ
ತುಂಗ ವಿಕ್ರಮ ನೀನು ತ್ರಿಭುವನದಿ ಪ್ರಖ್ಯಾತ ೫

## ೧೭೧

ನೆಲೆಸೆನ್ನ ವದನದಿ ವಾಣಿ ಬ್ರಹ್ಮಾಣಿ
ನೆಲೆಸೆನ್ನ ವದನದಿ ವಾಣಿ ಪ

ಜಲಜನಾಭನ ಗುಣಗಣ ನಲಿಯುತ ಪಾಡಲು
ಸುಲಲಿತವಾದಂಥ ಪದಗಳನು ನುಡಿಸುತ್ತ ಅ.ಪ.

ಸದಾಶಿವಾದಿ ಸಕಲ ಸುರಗಣ ಸೇವಿತ
ಸದಮಲ ದಿವ್ಯ ಪಾದ ಪಂಕಜವನ್ನು ೧

ಇಂದುವದನೆ ನಿನ್ನ ಮಂದಸ್ಮಿತವೆಂಬುವ
ಚಂದ್ರಕಾಂತಿಯ ಮನ್ಮನದೊಳು ಬೀರುತ ೨

ಕರದಲಿ ವೀಣೆಯ ನುಡಿಸುತ ವದನದಿ
ಹರುಷದಿ ರಂಗೇಶವಿಠಲನ ಪಾಡುತ ೩

## ೧೭೨

ವಾಣೀ ನೀ ಬಾರೆ ಪನ್ನಗವೇಣೀ ಓ ಪುಸ್ತಕ ಪಾಣಿ ಪ

ಆಣಿಮುತ್ತಿನ ಹಾರ ಕಟ್ಟಾಣಿಯ ಕೊರಳಿನ
ತ್ರಾಣಿ ಪಲ್ಲವಪಾಣಿ ಹಿರಣ್ಯಗರ್ಭನ ರಾಣಿ ಅ.ಪ.

ಕರವ ಮುಗಿದು ನಾ ನಮಿಪೆನೆ ಮಯೂರಯಾನೆ
ಕರುಣಾದಿ ನೋಡೆ ಮದಗಜಗಮನೆ
ಚರಣ ಸೇವಕರ ಬಹುದುರಿತಗಳೋಡಿಸಿ
ಸಿರಿರಮಣನೊಲಿಸುವ ಪರಿಯ ತೋರುತಲಿ ಬೇಗ ೧

ಪ್ರದ್ಯುಮ್ನ ಜಠರಾ ಸಂಭೂತೆ ಪೂರ್ವಾಭಾರತೆ
ಸದ್ವಿದ್ಯಾಭಿಮಾನಿ ದೇವತೆ
ಮಧ್ವವನದಲಿ ನೀನೆ ಬದ್ಧವಾಗಿ ನೆಲೆಸುತ
ಶುದ್ಧ ಮನದಲಿ ಅನಿರುದ್ಧನ ನಾಮ ನುಡಿಸುತ ೨

ಸರಸೀಜನವದನೆ ಮಂದಸ್ಮಿತ ಬೀರೆ ಸಿತವಸನಧಾರೆ
ಸಿರಿ ರಂಗೇಶಾವಿಠಲನ ತೋರೆ
ಅರೆಬಿರಿದೆಸೆಯುವ ತಾವರೆಸುಮವನು ಪೋಲ್ವ
ಸಿರಿಚರಣಂಗಳಿಗೆ ನಾ ನಿರುತದಿ ಎರಗುವೆ ೩

## ೧೭೩

ವಾರಿಜನ ಹೃದಯೇಶ್ವರಿ ಸರ್ವವಿದ್ಯಕಾಧಾರಿ ಪ

ವಾಣಿವಿರಂಚಿ ರಾಣಿ ಪಂಕಜ
ಪಾಣಿ ಕಾಳಾಹಿವೇಣಿ ನಿನ್ನಯ
ವೀಣೆಯಿಂದಲಿ ವೇಣುಗಾನವ
ಮಾಣದೆ ಪಾಡುತ ಕುಣಿಕುಣಿಯುತ ಬಾರೆ ೧

ಮಂದಯಾನೆ ಪೂರ್ಣೆಂದುವದನೆ
ಕುಂದುರಹಿತೆ ಬಂದು ರಕ್ಷಿಸೆ
ಮಂದಮತಿಯನಿಂದು ಬೇಗನೆ
ಕಂದ ನಾನೆಂದ ನೀ ಛಂದದಿ ಅರಿಯುತ ೨

ಸಾರಸಾಕ್ಷಿ ಮಯೂರವಾಹನೆ
ಶಾರದಾಂಬೆ ಕಲಕೀರವಾಣಿಯೆ
ಸಾರಿ ಬೇಡುವೆ ತೋರು ಕರುಣದಿ
ಧೀರನಾ ಗಂಭೀರನಾ ರಂಗೇಶವಿಠಲನ ೩

## ೧೭೪

ಕರುಣದಿ ಪೊರೆಯೆ ಭಾರತಿ
ಗುರು ಮುಖ್ಯಪ್ರಾಣನ ಸತಿ ಪ

ಪರಮ ಮಂಗಾಳೆ ನಿನ್ನ
ಚರಣ ಕಮಲಾವ
ಮರೆಯ ಹೊಕ್ಕೆನು ಕಣ್ಣ
ತೆರೆದು ನೋಡೌ ತಾಯೆ ೧

ಸರುವದ ದುರಿತದಿ
ಚರಿಸಿದವನೆಂದು
ತರಳನಾದೆನ್ನನು
ಜರಿದು ನೂಕುವರೆ ೨

ದುರಿತದೂರ ಗುಣಪೂರ್ಣ
ಸಿರಿ ರಂಗೇಶವಿಠಲನೆ
ಸರಿಯೆಂಬ ಮತಿಯನ್ನು
ಸ್ಥಿರವಾಗಿ ಕೊಟ್ಟೆನ್ನ ೩

## ೧೭೫

ತೋರೆ ನಿನ್ನ ಪದಸರಸಿಜವನು ತಾಯೆ
ಮಾರುತನ ನಿಜ ಜಾಯೆ ಪ

ಬಾರಿ ಬಾರಿಗೆ ನಿನ್ನ ಚರಣವ ಸ್ಮರಿಸುವೆ
ಚಾರುಮತಿಯನೀಯೆ ಅ.ಪ.

ಮೂರನೆ ಯುಗದಲಿ ಧೀರ ದ್ರುಪದನಧ್ವರದೊಳುದಿಸಿ
ಶೂರ ಪಾಂಡವರೈವರ ವೀರಪತ್ನಿಯು ನೀನೆನಿಸಿ
ಕೌರವನ ಸಭೆಯಲಿ ಸೀರೆಯನು ಸೆಳೆಯಲು ನೀ
ಮಾರಪಿತನ ಭಜಿಸಿ ಭೂರಿವಸನ ಪೊಂದಿದೆ ಧೀರೆ ೧

ಮೂರು ಲೋಕವರಿಯೆ ಮೀರಿದ ಕೋಪದಿ ಶಪಿಸಿದೆಯಂದು
ವೀರ ಮಾರುತಿಯ ಗದೆ ಕುರುಪನ ಊರು ಮುರಿಯಲೆಂದು
ಧಾರುಣಿ ನಡುಗಿತು ತಾರೆಗಳುದುರಿತು ವಾರಿಧಿ ಮಿತಿ
ಮೀರುತಿರೆ ನೀ ಸಾರಿದೆ ಪತಿಗಳ ಗಂಭೀರೆ ೨

ಆ ರಣಾಗ್ರದಿ ಕ್ರೂರ ದುಶ್ಯಾಸನ ಸಾರಿ ಬರುವುದ ನೋಡಿ
ದಾರಿ ಹಿಡಿದಪ್ಪಳಿಸವನ ದೋರೆ ಕರುಳ ಹಿರಿದೀಡ್ಯಾಡಿ
ಮೋರೆಯಿರಿದು ಪಲ್ಮುರಿದು ಹಂಗಿಸಿದಂಥ–
ಪಾರ ಪುಣ್ಯ ರಂಗೇಶವಿಠಲಗರ್ಪಿಸಿದನ ಸತಿ ೩

## ೧೭೬

ಕಾಮಪಿತ ಪದಸರಸಿರುಹ ಭೃಂಗ
ಆ ಮನಸಿಜನ ಮದಗರುವ ಭಂಗ ಪ

ದಾಕ್ಷಾಯಿಣೀಪತೇ ಬಾಗಿ ವಿಜ್ಞಾಪಿಸುವೆ
ದಾಕ್ಷಿಣ್ಯ ಲವಲೇಶವಿಲ್ಲವೊ ನನಗೆ
ಸಾಕ್ಷಿಯೇಸು ಕೊಡಲಿದಕೆ ಬ್ರಹ್ಮನ ಶಿರ ತರಿದೆ
ಸಾಕ್ಷಾತು ಪಿತನೆಂಬುದ ನೀ ಲಕ್ಷ್ಯವಿಡದೆ ೧

ಪಕ್ಷಿವಾಹನನ ಸುತ ಸ್ಮರ ನಿನ್ನ ಕಿರಿತಂದೆ
ಅಕ್ಷಿತೆರದೀಕ್ಷಿಸವನ ಬಿಡದೆ ದಹಿಸಿನಿಂದೆ
ದಕ್ಷ ನಿನಗೇನಾಗಬೇಕು ತಿಳಿದು ನೋಡೊ
ತಕ್ಷಣದಲವನನೆತ್ತಿ ಹರಿಗಡಿದೆ ನೀನು ೨

ಪಾಪಯೇಸು ಮಾಡಿದರೆಯು ಭಯವೇನು ನಿನಗೆ
ಶ್ರೀಪತಿ ರಂಗೇಶವಿಠಲಗೆ ಸರ್ವವರ್ಪಿಸಿ
ತಾಪತ್ರಯ ದೂರ ವಿರಾಗಿಯಾಗಿ ಮನಸ್ಸು ನಿ–
ರ್ಲೇಪವಾಗಿರುವಿ ಆ ಪರಿ ಮನಸ ಕೊಡು ಗುರುವೆ ೩

## ೧೭೭

ಸಕಲ ಭೂತಗಣಕಧಿನಾಥ ನೀನೆ
ಮುಕುತಿ ಪಥ ತೋರುವ ಮಹ ಮಹಿಮ ನೀನೆ ಪ

ಸುರರು ಕೊಂಡಾಡೆ ಗರಳ ಕುಡಿದವ ನೀನೆ
ಸರಸಿಜಾಕ್ಷನ ಪರಮ ಸಖನು ನೀನೆ
ವರ ಭಗೀರಥನುತಿಸೆ ಸುರನದಿಯನು ನಿಜ
ಸಿರಿಮುಡಿಯೊಳ್ಧರಿಸಿದಾತನು ನೀನೆ ೧

ಸಿರಿರಾಮ ಮಂತ್ರವನು ಗಿರಿಜೆಗುಸುರಿದವ ನೀನೆ
ವರ ಪಾಶುಪತ ಶರವ ನರನಿಗಿತ್ತವನು ನೀನೇ
ವರ ಮಾರ್ಕಂಡಗೆ ವರವನಿತ್ತವ ನೀನೆ
ಕರಿಚರ್ಮ ಧರಿಸಿರುವ ಪರಮ ವೈರಾಗಿಯೂ ನೀನೆ ೨

ಕೋರಿದನು ಕೊಡಲುಳ್ಳ ಕರುಣಪೂರ್ಣನು ನೀನೆ
ಶ್ರೀ ರಜತಗಿರಿಯಲಿ ಮೆರೆಯುವಾತನು ನೀನೆ
ನೀರಜಾಕ್ಷ ಶ್ರೀ ರಂಗೇಶವಿಠಲ ಪರನೆಂದು
ಸಾರುತಲಿ ಪೊಗಳುವ ಪರಮ ಭಾಗವತನು ನೀನೆ ೩

## ೧೭೮

ಉಮಾ ಹಿಮಗಿರಿ ಸಮಸ್ತ
ಸಮಾನ ಸುಗುಣವಂದ್ಯೆ ಪ

ಕಮಲಾಕ್ಷನ ಭಗಿನಿಯೆನ್ನಮಲನ ಮಾಡಿ
ವಿಮಲ ಮನಸು ಶಮದಮಗಳ ನೀಡಮ್ಮ ಅ.ಪ.

ತ್ರಿಪುರ ಸುಂದರಿ ನಿನ್ನ ಅಪಾರ ರೂಪಕೆ
ತ್ರಿಪುರಾರಿ ಮರುಳಾದನಮ್ಮ
ಶಫರಾಕ್ಷಿ ಕೇಳೆನ್ನ ಬಿನ್ನಪವನು ಮನ
ಚಪಲಾಕೆರಗದಂತೆ ಕೃಪೆ ಮಾಡಬೇಕಮ್ಮ ೧

ಜಪವ ನಾನರಿಯೆನು ತಪವ ನಾನರಿಯೆನು ಎ
ನ್ನಪರ ಬುದ್ಧಿಯ ಬಿಡಿಸಮ್ಮ
ಕೃಪಣ ವತ್ಸಲೆ ಎನ್ನ ಕುಪಥಾವ ತಪ್ಪಿಸಿ
ಅಪವರ್ಗ ಸೇರುವ ಸುಪಥವ ತೋರಮ್ಮ ೨

ಅಪ್ಪ ರಂಗೇಶವಿಠಲ ಒಪ್ಪುವ ರೀತಿಲಿ
ತಪ್ಪದೆ ಮತಿ ಪ್ರೇರಿಸಮ್ಮ
ತಪ್ಪು ಒಪ್ಪುಗಳೆಲ್ಲ ಸರ್ಪಶಯನಗೆ
ಅರ್ಪಿಸಿ ಎನ್ನ ನಿರ್ಲಿಪ್ತನ ಮಾಡಿಸಮ್ಮ ೩

## ೧೭೯

ಮೋಸ ಪೋದೆಯಲ್ಲೇ ಭಾಸುರಾಂಗಿ ನೀನು ಪ

ಕಾಶಿ ನಿವಾಸಿ ವಿಶ್ವೇಶ್ವರನಹುದೆಂದು ಅ.ಪ.

ವಿಶ್ವೇಶ್ವರನವನಲ್ಲ ತಿಳಿದು ನೋಡು ನೀನು
ವಿಶ್ವಪತಿಯಾ ವಿಷ್ಣುವಿನಡಿಯಾಳು ಅವನು
ಸುಸ್ವಭಾವದ ಸರಳ ಹೃದಯಾನ್ವಿತಳು ನೀನು
ದುಸ್ವಭಾವದ ಬಲು ಕಪಟ ಕಿರಾತನವನು ೧

ತ್ರಿಪುರ ಸುಂದರಿಯೆಂಬ ಬಿರುದು ಪೊತ್ತಿಹೆ ನೀನು
ಕಪಟ ವೇಷದೊಳು ಬಂದ ವಿಷಕಂಠನವನು
ಚಪಲಾಕ್ಷಿಯೆ ನಿಜಸ್ಥಿತಿ ಅರಿಯಲಿಲ್ಲ ನೀನು
ಗುಪಿತದಲಿ ನಿನ ಕಂಡು ಮರುಳು ಮಾಡ್ದನವನು ೨

ರಾಜರಾಜೇಶ್ವರಿಯಾಗಿ ರಾಜಿಸುವೆ ನೀನು
ಭೋಜನಕಾಗಿ ಭಿಕ್ಷ ಬೇಡುವನಲ್ಲೆ ಅವನು
ಮೂಜಗವು ಮೋಹಿಸುವ ಕೋಮಲಾಂಗಿಯು ನೀನು
ಈ ಜಗವರಿಯೆ ಸರ್ವದ ಭಸ್ಮಾಂಗನವನು ೩

ಕನಕ ಮಣಿಮಯದಂತಃಪುರವಾಸಿಯು ನೀನು
ಶುನಕ ಗೋಮಾಯ್ಗಳೆಡೆ ಮಸಣವಾಸಿಯವನು
ಘನ ವಿಶಾಲಾಕ್ಷಿಯೆ ಮಂದಹಾಸಮುಖಿ ನೀನು
ಮಿನುಗುವ ಬೆಸಗಣ್ಣಿನುರಿಮೊಗದೊಳಿಹನವನು ೪

ಚಾರು ಪೀತಾಂಬರ ಧರಿಸಿ ಶೋಭಿಸುವೆ ನೀನು
ಕೋರಿ ಗಜಚರ್ಮಧರಿಸುವ ಭಿಕಾರಿಯವನು
ಭೂರಿ ಸುಖಭೋಗಂಗಳನನುಭವಿಸುವೆ ನೀನು
ನಾರಸಿಂಹ ಮಂತ್ರ ಜಪಿಪ ವಿರಾಗಿಯವನು ೫

ಕರುಣಾ ಕಟಾಕ್ಷದಿಂ ಜಗವ ಪೊರೆದಪೆ ನೀನು
ಕರುಣವಿಲ್ಲದೆ ಮೂಜಗವನುರುಹುವನವನು
ಪರಮ ಭಕತರಿಗೆ ಮುಕುತಿಪಥ ತೋರುವೆ ನೀನು
ನರನಾದ ಭಕ್ತನೊಳು ಹೋರಾಡಿದವನು ೬

ಮಂಗಳಪ್ರದೆಯೆಂದು ಖ್ಯಾತಿಗೊಂಡಿರುವೆ ನೀನು
ಜಂಗಮ ಜೋಗಿಗಳಿಗೆ ನೆಲೆಯಾಗಿಹನವನೂ
ಗಂಗಾಜನಕನ ಪ್ರಿಯತಮ ಸೋದರಿಯು ನೀನು
ರಂಗೇಶವಿಠಲನ ಚರಣ ಸೇವಕನವನು ೭

## ೧೮೦

ಶೈಲರಾಜಸುತೆಯೆ ಗೌರಿ ಕಲಹಂಸಗಾಮಿನಿ ಪ

ನಿರುತವು ನಿನ್ನ ನಾ ಪರಿಪರಿಯಿಂ ನುಡಿಸುವೆನೆ
ಸಿರಿಯವರನ ಚರಿತೆ ಅರಿತು ಪಾಡು ೧

ನೀಲಕುಂತಳೆ ಪೊರೆಯೆ ಶಶಿಮೌಳಿ ಮೋಹದರಸಿಯೆ
ಶೂಲಪಾಣಿಯೆ ಕಲುಷ ಕಳೆದು ಒಲಿದು ಪಾಲಿಸೆ ೨

ಕಂತುಪಿತ ನಮ್ಮ ಶ್ರೀ ರಂಗೇಶವಿಠಲನ ಪದ
ಸಂತತ ನುತಿಪ ಮತಿಯನಿತ್ತು ಭ್ರಾಂತಿಯಾ ನೀಗೆ ೩

## ೧೮೧

ವರಗುರು ತಂದೆ ಮುದ್ದು ಮೋಹನದಾಸರೆಗಿತ್ತರು ಲೇಸ
ಪರಮ ಸಂಭ್ರಮದೊಳಿವರ ಸಹವಾಸ ಕರುಣಿಸಿದನು ಶ್ರೀಶ ಪ

ರಾಗ ದ್ವೇಷಾದಿಗಳಿವರೊಳಗಿಲ್ಲ ಪಾಮರರಿವರಲ್ಲ
ಶ್ರೀ ಗುರುಗಳೆನಗಿವರೆಂದು ಸ್ತುತಿಪನಲ್ಲ ಲಾಲಿಪುದೆನಸೊಲ್ಲ ೧

ಬಲ್ಲವರೆ ಬಲ್ಲರಿವರ ಶುಭ ಚರಿತೆಯನು ಜ್ಞಾನಿಗಳೆಂಬುದನು
ಖುಲ್ಲ ಜನ ನಿಂದಿಸಿದರಾಗುವದೇನೊ ಅರಿಯೆನಯ್ಯ ನಾನು ೨

ಅಜಪಿತನ ಪಾದ ಸರಸಿರುಹಕೆ ಭ್ರಮರರೆನಿಸುವ ಗುಣಯುತರ
ಕುಜನಗಳೇನು ಬಲ್ಲರಯ್ಯ ಇವರ ಮಹಿಮಂಗಳ ವಿವರ ೩

ಕರಿಗಿರಿಯೆಂಬ ವರಕ್ಷೇತ್ರದಲ್ಲಿ ವರುಷಂಪ್ರತಿಯಲ್ಲಿ
ಹರಿದಾಸೋತ್ತಮ ಧರಣಿಸುರರನಲ್ಲಿ ಬಲು ಸೇವಿಪರಲ್ಲಿ ೪

ಇಷ್ಟದೈವ ಅಪವರ್ಗಪ್ರದನೆಂಬ ಶ್ರೀ ನರಹರಿಯೆಂಬ
ದಿಟ್ಟ ಶ್ರೀ ರಂಗೇಶವಿಠಲನ ಬಿಂಬಾಕೃತಿಯ ಸದಾ ಕಾಂಬ ೫

## ೧೮೨

ತೆರಳಿ ಪೋದರಿಂದು ಪರಮ ಪದವನರಸುತ ಪ

ಶಿರೀಷ ಪುರದ ಸಿರಿ ಶೇಷದಾಸಾರ್ಯರು ಅ.ಪ.

ಸಿರಿಯುಕ್ತ ರಕಾಕ್ಷಿ ವರುಷ ಭಾದ್ರಪದಸಿತ
ವರಪೌರ್ಣಿಮಾ ಸಹಿತವಾದ ಕವಿವಾರದಿ
ಸರು ನಿಶಿಯೊಳು ಶತತಾರ ನಕ್ಷತ್ರ ಬರುತಿರೆ
ನರಹರಿಯ ಚರಣಕಾಂಬ ಕಡು ತವಕದಿಂದ ೧

ತಂದೆ ಮುದ್ದುಮೋಹನ ದಾಸವರ್ಯರಿಂದ
ಕುಂದುರಹಿತನಾದ ಪ್ರಾಣನಾಥವಿಠಲ-
ನೆಂದು ಅಂಕಿತೋಪದೇಶವನು ಕೈಕೊಂಡು
ಬಂಧುರವಾದನೇಕ ಪದಗಳನು ರಚಿಸಿ ೨

ದಾಸವೃತ್ತಿಯ ಕಂಡು ದೇಶ ದೇಶವ ಸುತ್ತಿ
ಕಾಸು ವೀಸದಾಸೆಗಾಗಿ ಕರವ ನೀಡದೆ
ಲೇಸು ಮಾಡುತಲಿ ಸಚ್ಛಿಷ್ಯರಿಗೆ ತತ್ತ್ವೋಪ-
ದೇಶವನು ಪರಮ ಸಂತೋಷದಿಂದಗೈದು ೩

ಆಶಪಾಶವ ತೊರೆದು ಮೀಸಲು ಮನರಾಗಿ
ವಾಸುದೇವನ ನಾಮ ಸೋಸಿನಿಂದ ಭಜಿಸಿ
ಸಾಸುವೆಯಷ್ಟಾದರಾಯಾಸವನುಪಡದೆ
ಈ ಶರೀರ ವಿಶ್ವೇಶನಾಧೀನವೆಂದು ೪

ಅಂಗೋಪಾಂಗವ ಮರೆದು ನಿಸ್ಸಂಗಯುತರಾಗಿ
ಕಂಗಳನು ಮುಚ್ಚುತ ಭಂಗವಿಲ್ಲದ ಸುಖವ
ಹಿಂಗದೆ ಕೊಡುವಂಥ ಮಂಗಳನ ಶ್ರೀ
ರಂಗೇಶವಿಠಲನಂತರಂಗದಿ ನೋಡುತ ೫

## ೧೮೩

ನೀನಲ್ಲದಿನ್ನಾರು ಸಲಹುವರೊ ಎನ್ನ ಪ

ನಾನು ನನ್ನದು ಎಂಬ ದುರಭಿಮಾನಿಯನ್ನ ಅ.ಪ.

ಶ್ರೀಮದಾಚಾರ್ಯರ ಪುಸ್ತಕ ಭಂಡಾರವನು
ಪ್ರೇಮದಿಂ ಧರಿಸುತ ವೃಷಭನಾಗಿರ್ದು ಚರಿಸಿ
ಕಾಮಪಿತನೊಲಿಮೆಯಿಂ ಮರಳಿ ಜನಿಸಿ ಗುರುಗಳ
ಆ ಮಹಾಭಾಷ್ಯವರುಹಿದ ಜಯತೀರ್ಥ ಗುರುವೆ ೧

ಬಾಲತನದಲಿ ಸಕಲ ಲೀಲೆಗಳ ತೊರೆದು
ಕಾಲುಂಗುಟಾಗ್ರದಿ ನಿಂದು ತಪವಗೈದು
ಶ್ರೀಲೋಲನ ಮೆಚ್ಚಿದಂಥ ಧೀರ ಧೈವ ಭೂ-
ಪಾಲನಂಶದ ಶ್ರೀಪಾದರಾಜ ಗುರುವೆ ೨

ಪಿತನ ಮತ ಧಿಕ್ಕರಿಸಿ ಶ್ರೀಪತಿಯೆ ಪರನೆಂಬ
ಮತಿಪೊಂದಿ ಶಿಶುತನದಲಿ ನರಹರಿಯ ಒಲಿಸಿ

ಅತಿಹಿತನಾದ ಪ್ರಹ್ಲಾದದೇವನಂಶದಿಂ
ಕ್ಷಿತಿಯೊಳುದ್ಭವಿಸಿದ ವ್ಯಾಸರಾಜ ಗುರುವೆ ೩

ಈ ಧರೆಯೊಳೆಸೆಯುತಿಹ ಉಡುಪಿಯೊಳು ನೆಲಸಿರ್ಪ
ಯಾದವ ತೀರ್ಥಾಯ ಪದ ಸರಸಿರುಹ ಭೃಂಗ
ಮೋದ ತೀರ್ಥಾರ್ಯರ ಪದಕರುಹನಾದಂಥ
ಸೋದೆಯೊಳ್ರಾಜಿಸುವ ವಾದಿರಾಜ ಗುರುವೇ ೪

ಕಂತುಜನಕನಿಗತ್ಯಂತ ಪ್ರಿಯನಾದ ಮತಿ
ವಂತನಾ ವ್ಯಾಸಮುನಿಯೆ ನೀನಾಗಿ ಬಂದು
ಸಂತಸದಲಿ ಸಾಧು ಜನರಿಷ್ಟ ಪೂರೈಸುತ
ಮಂತ್ರಾಲಯದಿ ಮೆರೆವ ರಾಘವೇಂದ್ರ ಗುರುವೆ ೫

ಜಲಜಭವನೂರುಭವನಂಶದಲಿ ಜನಿಸಿ
ಕಲಿಯುಗದಿ ಹರಿನಾಮವೆ ಗತಿಯೆಂದು ಸಾರಿ
ಹಲವು ಪದ ಸುಳಾದಿಗಳ ರಚಿಸಿ ಸಜ್ಜನರ
ಕಲುಷಗಳ ಕಳೆದ ಪುರಂದರದಾಸರಾಯ ೬

ಸಕಲ ಋಷಿಗಳ ಸಂಶಯವ ಪರಿಹರಿಸಿ ವೇದ
ಉಕುತಿಗಳಿಂದ ಹರಿಯೆ ಪರನೆಂದು ಸ್ಥಾಪಿಸಿ
ಭಕುತಿ ವೈರಾಗ್ಯನಿಧಿ ಭೃಗುಮುನಿಯೆಂದೆನಿಸಿದ
ಮುಕುತಿಪಥ ತೋರಿಸಿದ ವಿಜಯದಾಸರಾಯ ೭

ವಾಸಿಷ್ಠ ಕೃಷ್ಣ ಸೂತ್ರ ಪುರಾಣಗಳ ರಚಿಸೆ
ದಾಸತ್ವವಹಿಸಿ ಸಕಲ ಗ್ರಂಥಗಳ ಬರೆದು
ಶ್ರೀಶಗರ್ಪಿಸುತ ಲೇಸು ಜಗಕೆಗೈದಂಥ ಗ
ಣೇಶಾವತಾರಿ ಗೋಪಾಲದಾಸರಾಯ ೮

ಸಿರಿ ರಂಗೇಶವಿಠಲನ ಕಾಂಬ ತೃಷೆಯಲಿ ಹರಿಗೆ
ಹರಿಕಥಾಮೃತಸಾರ ಪಾನಗೈಯಲಿತ್ತ
ನರಹರಿಯ ಕೃಪಾಪಾತ್ರ ಸಹ್ಲಾದನಂಶದ
ಗುರುವರ ಶ್ರೀ ಜಗನ್ನಾಥದಾಸರಾಯ ೬

## ೧೮೪

ಈ ಸಂಸಾರ ಸುಖವು ಬೇಸರಾಯ್ತೆನಗೆ
ವಾಸವಾನಜ ಲಾಲಿಸೊ ಪ

ಏಸು ಜನುಮದ ಪಾಪವೊ
ಈ ಸಂಸಾರ ಬಂಧನವೊ ಅ.ಪ

ತಂದೆ ತಾಯಿ ಎಂಬುದದು ಒಂದು ಚಿಂತೆ
ಬಂಧು ಬಳಗವು ಎಂಬುದದು ಬೇರೆ ಚಿಂತೆ
ಸಂದಣೀಯ ಸತಿ ಸುತರೆಂಬದದು ದೊಡ್ಡ ಚಿಂತೆ
ಕಂದನಿಲ್ಲದಿರಲದು ಘೋರ ಚಿಂತೆ ೧

ಹಿಂದೆ ಮಾಡಿದ ಪಾಪಕೀಸು ಭವಣೆಯು ಸಾಕು
ಮುಂದೆ ಬೇಡವೊ ಸ್ವಾಮಿ ಈ ತೆರದ ತಾಪ
ಇಂದು ಮಾಡಿದ ಪಾಪ ಒಂದುಳುಹದಂತೆ
ತಂದೆ ಕರುಣದಿ ಸುಟ್ಟು ಸಲಹೆನ್ನ ದೊರೆಯೆ ೨

ಇಂದಿರಾಧವ ನಿನ್ನ ಪಾದ ಸರೋಜದಲಿ
ಮಂದಮತಿಯ ಮನ ಚಲಿಸದೆ ನಿಲುವಂತೆ
ಒಂದು ಬೇಡುವೆನೊ ದೇವ ಬೇರೊಂದ ನಾನೊಲ್ಲೆ
ಮಂದರೋದ್ಧಾರ ಶ್ರೀ ರಂಗೇಶವಿಠಲ ೩

## ೧೮೫

ಎಂದಿಗೆ ಕಾಂಬುವೆ ನಿನ್ನ ಚರಣವ
ಸಿಂಧು ಸುತೆಯ ಪತಿ ಘನ್ನ ಪ

ಪರಧನ ಪರಸತಿಯರನು ನಾ ಬಯಸುತ
ಸಿರಿಯರಸ ನಿನ್ನ ಮರೆದು ಪರಮ ನೀಚನೆಂದೆನಿಸಿರುವೆ ೧

ಅರಿತು ಅರಿಯದಂತೆ ದುರಿತಗಳನು ಮಾಡಿ
ಗುರು ಹಿರಿಯರನು ನಿಂದಿಸಿ ಗರುವದಿಂದಲಿ ಚರಿಸುತಿರುವೆ ೨

ಸರುವಂತರ್ಯಾಮಿ ಕರುಣಾಕರನಾದ
ಸಿರಿ ರಂಗೇಶವಿಠಲ ನಿನ್ನ ಅರೆಕ್ಷಣ ಸ್ಮರಿಸದಿರುತಿರುವೆ ೩

## ೧೮೬

ಎನಗೆಲ್ಲಿಯ ಕೊರತೆ ನಿನ ನಂಬಿದ ಮೇಲೆ
ಮನಸಿಜನೈಯ್ಯಾ ಶ್ರೀ ರಂಗೇಶವಿಠಲ ಪ

ಕೊಡುವ ಕರ್ತನು ನೀನು ಎಡಬಿಡದಿರುವಾಗ
ಬಡತನವೆನಗ್ಯಾಕೆ ರಂಗೇಶವಿಠಲ ೧

ಸತಿಯು ಸುತರು ಎನಗೆ ಹಿತವ ಬಯಸಲಿಲ್ಲ
ಗತಿಯು ಎನಗೆ ನೀನೆ ರಂಗೇಶವಿಠಲ ೨

ಮಂದಮತಿಯು ನಾನು ಸಿಂಧುಶಯನ ನಿನ್ನ
ಕಂದನೆಂದು ತಿಳಿಯೊ ರಂಗೇಶವಿಠಲ ೩

## ೧೮೭

ಎಲ್ಲರೂ ದಾಸರಹರೇ ಪ

ಪುಲ್ಲನಾಭನ ದಯವಿಲ್ಲದೆ ಅ.ಪ.

ಜ್ಞಾನವಿಲ್ಲ ಭಕುತಿಯಿಲ್ಲ
ಧ್ಯಾನ ವೈರಾಗ್ಯ ಮೊದಲೆ ಇಲ್ಲ
ಹೀನ ಕರ್ಮಗಳನು ಮಾಡಿ
ಶ್ರೀನಿವಾಸನ ಮರೆತವರು ೧

ಪರವಧುವಿನ ರೂಪ ಮನದಿ
ಸ್ಮರಣೆ ಮಾಡುತ ಬಾಯಿಯೊಳು
ಹರಿಯ ಧ್ಯಾನ ಮಾಡುತಿರುವ
ಪರಮ ನೀಚರಾದ ಜನರು ೨

ಪಟ್ಟೆನಾಮ ಹಚ್ಚಿ ಕಾವಿ
ಬಟ್ಟೆಯನ್ನು ಹೊದ್ದುಕೊಂಡು
ಅಟ್ಟಹಾಸ ತೋರಿಕೊಳುತ
ಗುಟ್ಟು ತಿಳಿಯದಿರುವ ಜನರು ೩

ದೊಡ್ಡ ತಂಬೂರಿಯ ಪಿಡಿದು
ಅಡ್ಡ ಉದ್ದ ರಾಗ ಪಾಡಿ
ದುಡ್ಡುಕಾಸಿಗಾಗಿ ಭ್ರಮಿಸಿ
ಹೆಡ್ಡರಾಗಿ ತಿರುಗುವವರು ೪

ನೋವು ಬಾರದಂತೆ ಸದಾ
ಓವಿಕೊಂಡು ಬರುತಲಿರುವ
ದೇವ ರಂಗೇಶವಿಠಲನ
ಸೇವೆಯನ್ನು ಮಾಡದಿರುವ ೫

## ೧೮೮

ಏನಬೇಡಲೊ ಕೃಷ್ಣ ನಾಚಿಕಿಲ್ಲದೆ ಪ

ಜ್ಞಾನಶೂನ್ಯನಾಗಿ ಬಹಳ ಹೀನ ಕಾರ್ಯ ಮಾಡಿ ನಾನು ಅ.ಪ.

ಪರರ ವನಿತೆ ಧನಗಳಿಂಗೆ
ಅರಿತು ಅರಿತು ಆಶೆಪಡುತ
ದುರಿತಕೋಟಿಗಳನು ಮಾಡಿ
ಪರಮ ನೀಚನೆನಿಸಿದವನು ೧

ವನಗಳನು ಕಡಿಸಿ ಹಿರಿದು
ಮನೆಗಳನ್ನು ರಚಿಸಿಕೊಂಡು
ವನಿತೆ ಮಾತು ಕೇಳಿ ಜನನಿ
ಜನಕರನ್ನು ತೊರೆದ ಪಾಪಿ ೨

ಸತ್ಯ ಮತವನು ತುಚ್ಛಗೈದು
ನಿತ್ಯಕರ್ಮಗಳನು ಬಿಟ್ಟು
ಮತ್ತನಾಗಿ ತಿಂದು ಮಲಗಿ
ಕತ್ತೆಯಂತೆ ಹೊರಳುವವನು ೩

ಆರ್ತರಾದ ಜನರ ಸಲಹಿ
ಕೀರ್ತಿಯನ್ನು ಹೊಂದಿ ದೇಹ
ಸಾರ್ಥಕವನು ಮಾಡಿಕೊಳದೆ
ಧೂರ್ತನೆನಿಸಿಕೊಳುವ ನರನು ೪

ವಾಸುದೇವ ಸಕಲ ದೋಷ
ರಾಸಿಗಳನು ದಹಿಸುವ ರಂ–
ಗೇಶವಿಠಲರೇಯ ನಿನ್ನ
ದಾಸನೆಂದು ಪೇಳದವನು ೫

## ೧೮೯

ಕಾಯೊ ಕರುಣದಿಂದೆನ್ನನು ತೋಯಜಾಕ್ಷನೆ ನೀನು ಪ

ಕಾಯೊ ಕರುಣದಿ ತೋಯಜಾಕ್ಷನೆ ನೀನು
ಹೇಯ ಜನಮವೆತ್ತಿ ಮಾಯಕೆ ಸಿಲುಕಿದೆ ಅ.ಪ.

ಹಿಂದೆ ತಪ್ಪಿದೆನ್ನಯ್ಯ ಮುಂದೆ ಬುದ್ಧಿಯು ಬಂತು
ಸಿಂಧುಶಯನ ನೀನು ಬಂದು ಮೈದೋರಿ ೧

ಸತಿಸುತರೆನಗೆ ಅತಿ ಹಿತರೆಂತೆಂದು
ಮತಿಭ್ರಾಂತನಾಗಿದ್ದೆ ಪತಿತ ಪಾವನನೆ ೨

ಕೊಟ್ಟು ಆದರಿಸಲು ಇಷ್ಟ ಮಿತ್ರರು ಇದ್ದು
ಕೆಟ್ಟುಪೋದಮೇಲೆ ಕೈಬಿಟ್ಟರು ನೀ ಬಿಡಬೇಡ ೩

ತಂದೆತಾಯಿಯು ನೀನೆ ಬಂಧು ಬಳಗವು ನೀನೆ
ಇಂದಿರೆರಮಣನೆ ಬಂಧವ ಬಿಡಿಸೀಗ ೪

ಕರುಣಾಸಾಗರ ನಿನ್ನ ಮರೆಹೊಕ್ಕೆ ನಾನೀಗ
ಶರಣರ ಪೊರೆಯುವ ರಂಗೇಶವಿಠಲನೆ ೫

## ೧೯೦

ತಂದೆ ನೀನೆಂದು ನಾ ಬಂದೆ ರಕ್ಷಿಸೆಂದೆ ಪ

ಮುಂದೆನ್ನ ಸಲಹುವ ಭಾರವು ನಿಂದೆ ಅ.ಪ.

ಮಾತು ಮಾತಿಗೆ ನಾ ನಿನ್ನ ನೆನೆವೆ ಸ್ಮರಿಸುತಿರುವೆ
ಜ್ಞಾತಿ ಬಾಂಧವರ ಮತ್ಸರ ಮರೆವೆ

ಮಾತಾಪಿತರುಗಳ ಸೇವೆಗೈವೆ
ಈ ತನು ನಿನ್ನ ಚರಣಕರ್ಪಿಸಿರುವೆ ೧

ಸಾಧನವೇನೆಂಬುದ ನಾನರಿಯೆ ಕೇಳೊ ದೊರೆಯೆ
ಮಾಧವ ನಿನ ನಾಮವೆಂದಿಗೂ ಮರೆಯೆ
ವೇದಬಾಹಿರರೊಡನಾಡಿ ಮೆರೆಯೆ
ಕಾದುಕೋಯೆನ್ನನೆಂಬೆನು ಶ್ರೀಹರಿಯೆ ೨

ನಾ ನಿನ್ನ ಕಾಡಿ ಬೇಡುವುದಿಲ್ಲ ದೂರುವನಲ್ಲ
ಜ್ಞಾನ ಮಾತುರವಿತ್ತು ಕಾಯಬೇಕಲ್ಲ
ನೀ ನನ್ನ ಸಲಹೊ ಲಕ್ಷ್ಮೀ ನಲ್ಲ
ಶ್ರೀನಿವಾಸ ರಂಗೇಶವಿಠಲ ೩

## ೧೯೧

ತಾರೊ ನಿನ್ನಯ ಕರವಾರಿಜವನು ಕೃಷ್ಣ
ಸಾರಿ ಬೇಡಿಕೊಂಬೆ ಮುರಾರಿ ದಯಮಾಡಿ ಪ

ಮಾರಮಣನೆ ಸಂಸಾರ ಶರಧಿಯೊಳೀಸ
ಲಾರದೆ ಬಳಲುತ ಚೀರೂತಲಿರುವೆ ಅ.ಪ

ದಾರಾ ಪುತ್ರರೆನಗೆ ದಾರಿ ತೋರುವರೆಂದು
ಹಾರೈಸುತಲಿದ್ದೆ ಮಾರ ಜನಕನೆ ಕೇಳೊ
ಮೋರೆ ತೋರದೆ ಅವರು ಜಾರಿಕೊಂಡರಯ್ಯ
ಭೂರಿ ಬಳಗದವರ್ಯಾರು ಬಾರರೊ ದೇವ ೧

ಧಾರುಣಿ ಧನ ಧಾನ್ಯ ಹೇರಳವಾಗಿದೆ ಜೀವ
ಹಾರಿ ಹೋಗುವಾಗ ಯಾರಿಲ್ಲವಯ್ಯ

ಕೋರಿ ಭಜಿಪೆ ನಿನ್ನ ಬಾರಿ ಬಾರಿಗೆ ನಾನು
ಕ್ಷೀರ ವಾರಿಧಿವಾಸ ವೀರ ಮಾರುತೀಶ ೨

ಘೋರಾಂಧಕಾರದಿ ಮೇರೆಯು ಕಾಣದೆ ಮಿತಿ
ಮೀರಿದ ಭಯದಿಂದ ಗಾರು ಪಡುತಿಹೆನೊ
ಕಾರುಣ್ಯನಿಧಿಯೆ ನೀ ಪಾರು ಮಾಡದಿರೆ ಮ
ತ್ತ್ಯಾರು ಕೇಳುವರೆನ್ನ ಶ್ರೀ ರಂಗೇಶವಿಠಲ ೩

## ೧೯೨

ದುಷ್ಟ ಮನುಜ ಕೇಳೊ ನೀ ಬಲು
ಭ್ರಷ್ಟನಾದೆಯಲ್ಲೋ ಪ

ಎಷ್ಟು ಪೇಳಿದರೇನು ನಿನಗೆಳ್ಳಿ–
ನಷ್ಟಾದರು ಮತಿ ಬರಲಿಲ್ಲ ಅ.ಪ
ಶುದ್ಧ ವೈಷ್ಣವನೆಂಬೀ ನೀನು ನಿ–
ಷಿದ್ಧ ಕೂಳನು ತಿಂಬೀ
ಬುದ್ಧಿಪೂರ್ವಕವಾಗಿ ನಮ್ಮ ಅನಿ
ರುದ್ಧನ ನಾಮದ ನೆನೆಯದಲಿರುವಿ ೧

ಬಾಯೊಳು ಬಹುನೀತಿ । ಬೊಗಳುವೆ
ಹೇಯ ಕರ್ಮದಿ ಪ್ರೀತಿ
ಮಾಯವಾದಿಯನುತವನು ಪೊಗಳುವೆ
ಕಾಯಕ್ಲೇಶ ನಿನಗಾಗದಿರದು ೨

ಭಂಗ ಹೋಗದೆ ಬಾಳೊ । ಮುಂದಕೆ
ಭಂಗಿಕೋರನೆ ಕೇಳೊ
ರಂಗೇಶವಿಠಲನ ಮೊರೆಹೊಗು ನಿನ ದುರಿ–
ತಂಗಳು ಪೋಪವು ಮಂಗನಾಗಬೇಡ ೩

# ೧೯೩

ಪೊರೆಯೊ ಶ್ರೀಶನೆ ಸರುವ ಲೋಕ ಪೊರೆವನೆ ಪ

ಅರಿತು ಅರಿಯದಂತೆ ನಾನು ಗರುವದಿಂದ ಮೆರೆದನಯ್ಯ ಅ.ಪ

ಅರುಣ ಉದಯದಲ್ಲಿ ಎದ್ದು
ಹರಿಯೆ ನಿನ್ನ ಸ್ಮರಣೆ ಬಿಟ್ಟು
ಗೊರಿಕೆ ಹೊಡಿದು ನಿದ್ರೆಮಾಡಿ
ದುರಿತದಲ್ಲಿ ಪೊರಳುವವನ ೧

ಕುತುಬ ಕಾಲದಲ್ಲಿ ಬಂದ
ಅತಿಥಿಗಳನು ಜರೆದು ನೂಕಿ
ಮಿತಿಯ ಮೀರಿ ಸವಿಯುತ ಪರ-
ಗತಿಯ ದಾರಿ ಕಾಣದವನ ೨

ದಾನಧರ್ಮ ಕೇಳಬಂದ
ಮಾನವಂತ ಜನರ ಬಹಳ
ಹೀನ ಮಾತಿನಿಂದ ಬೈದ
ಜ್ಞಾನರಹಿತನಾದ ನರನ ೩

ರೊಕ್ಕವಿರುವದೆಂದು ಬಹಳ
ಸೊಕ್ಕಿನಿಂದ ಬಡವರನ್ನು
ಲೆಕ್ಕಿಸದೆ ಮಾತನಾಡಿ
ಧಿಕ್ಕರಿಸಿದ ಅಧಮ ನರನ ೪

ಪಟ್ಟದರಸಿಯಿರಲು ಅವಳ
ಬಿಟ್ಟು ಪರರ ಸತಿಯ ಬಯಸಿ
ಅಟ್ಟಹಾಸದಿಂದ ನಗುತ
ಕೆಟ್ಟು ಹೋದ ಭ್ರಷ್ಟ ನರನ ೫

ಎಷ್ಟು ಮಾಡಲೇನು ಎಳ್ಳಿ
ನಷ್ಟು ಸುಖವ ಕಾಣಲಿಲ್ಲ
ಇಷ್ಟ ಮಿತ್ರ ನೀನೆಯೆಂದು
ಗಟ್ಟಿಯಾಗಿ ತಿಳಿದುಕೊಂಡೆ ೬

ಶ್ರಿಷ್ಟಿಗೊಡೆಯನು ರಂಗೇಶ–
ವಿಠಲನೆಂಬ ಮತಿಯ ಎನಗೆ
ಎಷ್ಟು ಮಾತ್ರ ಕೊಟ್ಟು ಸಲಹೊ
ಕೆಟ್ಟ ಮೇಲೆ ಬುದ್ಧಿ ಬಂತು ೭

## ೧೯೪

ಬೇಡಿಗೊಂಬೆನೊ ದೇವ ಮಹಾನುಭಾವ ಪ

ಮೂಡಲುಗಿರಿವಾಸ ಶ್ರೀ ಶ್ರೀನಿವಾಸ ಅ.ಪ

ನಾನಾ ಯೋನಿಗಳಲಿ ನಾ ಬಂದು ನೊಂದೆನೋ
ನೀನೇ ಸಲಹಬೇಕೋ ಎನಗೆ ಜನುಮವು ಸಾಕೊ ೧

ತನುವೂ ಮನಗಳನ್ನೂ ನಿನಗರ್ಪಿಸಿದೆನೊ
ವನಜಾಕ್ಷ ಬಿಡಿಸು ಸಿಕ್ಕುಯೆನಗೆ ನೀನೇ ದಿಕ್ಕು ೨

ಮಾನಾಪಮಾನವು ನಿನ್ನದು ಎನಗೇನೊ
ದೀನ ಜನರ ಪಾಲ ರಂಗೇಶವಿಠಲ ೩

## ೧೯೫

ವೇದ ಓದಿದರೇನು ನಮ್ಮ
ಬಾದರಾಯಣನ ಪಾದವ ನಂಬದೆ ಪ

ಹೃದಯದಿ ಕಲುಮಷ ತುಂಬಿ ತುಳುಕುತಿರೆ
ವದನದಿ ಮಂತ್ರವ ಪಠಿಸಿ ಫಲವೇನು
ಉದರ ಪೋಷಣೆಗಾಗಿಯೆ ಮಾಡುವ
ವಿಧ ವಿಧ ಕರ್ಮ ನೋಡಿ ನಗುವರು ೧

ಕಂಣನು ಮುಚ್ಚಿ ಮೌನದಿ ಕುಳಿತು ಪರ
ಹೆಂಣಿನ ರೂಪವ ಮನದೊಳು ನೆನೆದು
ಚಿಂಣತನದಿ ಅವಳ ಬೆರೆಯಲು ಯೋಚಿಸಿ
ಹೊನ್ನು ಕೂಡಿಸುವ ಪರಿಯದಲ್ಲದೆ ೨

ಗುಟ್ಟಲಿ ಪೂಜಿಪ ಗುರುತನು ಅರಿಯದೆ
ಪಟ್ಟೆ ನಾಮವ ಹಚ್ಚಿ ಮಡಿಗಳನು
ಉಟ್ಟು ಬಹಿರಾಡಂಬರ ತೋರುತ
ದಿಟ್ಟ ರಂಗೇಶವಿಠಲನ ಮರೆದು ೩

## ೧೯೬

ಶಾಮಸುಂದರ ಮಾಮನೋಹರ ತಾಮರಸಾಕ್ಷ ಪ

ಪ್ರೇಮದಿ ಕೊಡು ಕಾಮಿತಾರ್ಥವ ಭೂಮಿವಲ್ಲಭ ಅ.ಪ

ಮಾನವಿಲ್ಲದೆ ಹೀನ ನೃಪರನು ನಾನಾ ಪರಿಯಲಿ
ಶ್ವಾನನಂದದಿ ನಾನು ಸೇವಿಸಿ ದೀನನಾದೆನೊ ೧

ದಾನ ಧರ್ಮಗಳೇನು ಮಾಡದೆ ಮಾನನೀಯರ
ಸಾನುರಾಗದಿ ನಾನು ಕೂಡಿದೆ ಜ್ಞಾನವಿಲ್ಲಾದೆ ೨

ದಾಶರಥಿ ನೀ ಬೇಸರೀಸುತ ಘಾಸಿಗೈಯ್ಯಲೂ
ಘೋಷಿಪರ್‍ಯಾರೊ ವಾಸವನುತ ರಂಗೇಶವಿಠಲನೆ ೩

## ೧೯೭

ಸಲಹಯ್ಯಾ ಲಕ್ಷೀರಮಣ ಸರುವದ ನಮ್ಮನು ನೀ ಪ

ಊರೊಳಗಿರಲಿ ಊರು ಬಿಟ್ಟಿರಲಿ
ದಾರಿಯ ಬಿಟ್ಟು ನಾ ಸಂಚರಿಸುತಿರಲಿ
ಮಾರಮಣ ಮುರಾರಿ ನಿನ್ನಯ ಪಾದ
ವಾರಿಜನ ನಂಬಿ ಸೇರಿದ ಭಕುತರ ೧

ಸಿರಿಯೆನಗಿರಲಿ ಎಡರೆನಗಿರಲಿ
ಮರುಳುತನವೆನಗೇ ಆವರಿಸಿರಲಿ
ನರಹರಿ ನಿನ್ನಯ ಚರಣದ ಮಹಿಮೆಯ
ಪರಿಪರಿಯಿಂದ ಪೊಗಳುವ ಮತಿಯಿತ್ತು ೨

ದೊರೆತನ ಬರಲಿ ತಿರುಕನು ಆಗಲಿ
ಬಂದೆ ಡಂಭದೊಳು ತಿರುಗುತಲಿರಲಿ
ಕರಿವರದ ಶ್ರೀ ರಂಗೇಶವಿಠಲ ನಿನ
ಮರೆಯದೆ ಹರುಷದಿ ನೆನೆವಂತೆ ಮಾಡಿ ೩

## ೧೯೮

ಹರಿ ನಿನ್ನ ದಾಸರ ಸೇವೆಯ ಕರುಣಿಸೆನಗೆ
ಸುರಪತಿಯ ನಾನೊಲ್ಲೆನೈ ಪ

ಸ್ಮರನ ಹಾವಳಿ ಬಿಡಿಸಿ ಗುರುಭಕ್ತಿಯನು ಕೊಟ್ಟು
ನಿರುತವು ನಿನ್ನ ನಾ ಸ್ಮರಿಸುವಂದದಿ ಮಾಡು ಅ.ಪ

ಎಷ್ಟು ಸ್ಥಿರ ಮಾಡಿದಾಗ್ಯು ಎನ್ನ ಮನ
ಬಟ್ಟ ಕುಚೆಯರ ಬಲೆಗೆ ಸಿಲುಕುತಲಿ
ಬಿಟ್ಟು ನಿನ್ನಯ ಧ್ಯಾನ ಕೆಟ್ಟುಪೋಗುತಲಿದೆ
ದಿಟ್ಟ ನಿನ್ನ ಮಗನ ಬಲುಹಿನ್ನೆಷ್ಟೆಂದು ಪೇಳಲೊ ೧

ಕುಸುಮಗಂಧಿಯರ ಓರೆನೋಟವೆಂಬ
ಮಸೆದ ಕಣೆಯ ತಾನು ಪೂಡುತಲಿ
ಎಸೆ ಮೋಹತಿಗೆ ನಾ ಸೈರಿಸಲಾರೆನೋ
ಬಿಸಜನಾಭನೆ ನಿನ್ನ ಸುತಗೆ ಪೇಳೋ ಬುದ್ಧಿ ೨

ಅಂಗನೆಯರ ಸವಿ ನುಡಿಗಳಿಗೆ ನಾ ಮರುಗಿ
ಭೃಂಗದಂತವರ ಬಲೆಗೆ ಬೀಳದಂತೆ
ಸಂಗ ಸುಜನರಲ್ಲಿ ಇತ್ತು ಕಾಯೊ ದೇವ
ಅಂಗಜಪಿತ ಶ್ರೀ ರಂಗೇಶವಿಠಲನೇ ೩

## ೧೯೯

ಹರಿಯೇ ಪೊರೆಯದಿಹುದು ಸರಿಯೆ । ಎನ್ನ
ಮರೆತೆ ಯಾತಕೊ ನಾನರಿಯೆ ಪ

ಶುನಿ ಸೂಕರ ಯೋನಿಯಲಿ ಬಂದು । ನಾನು
ಮನುಜನಾಗಿ ನಿಂದಿಹೆನಿಂದು

ನಿನ ಬೇಡಿಕೊಂಬೆ ದಯಸಿಂಧು । ಎನ್ನ
ಪುನಹ ಪುಟ್ಟಿಸಬೇಡವೆಂದು ೧

ಮನಸು ವಚನ ಕಾಯಗಳಿಂದ । ನಿನ್ನ
ಅನುಚರನಾಗಿಹೆ ಮುದದಿಂದ
ದನುಜಾರಿ ಬಿಡಿಸೆನ್ನ ಬಂಧ । ಭವ–
ಜನಿತವಾಗಿಹ ಜಾಲದಿಂದ ೨

ಹಲವು ಮಾತೇಕೊ ಮಾಲೋಲ । ಮೌನಿ
ಅಲವ ಬೋಧಾರ್ಚಿತ ಗೋಪಾಲ
ಕಲಿ ಕಲುಷ ರಾಸಿಗಳನೆಲ್ಲ ಕಳೆದು
ಸಲಹೈಯ್ಯಾ ರಂಗೇಶವಿಠಲ ೩

## ೨೦೦

ಏನಿದ್ದರೇನಯ್ಯಾ ಜ್ಞಾನವಿಲ್ಲದ ಮೇಲೆ ಪ

ದೀನರಕ್ಷಕ ನಿನ್ನ ಧ್ಯಾನ ಮಾಡದವನೆ ಅ.ಪ.

ಸತಿಸುತ ಬಾಂಧವರು ಬಹಳಿದ್ದರೇನು
ಗತಿ ಕಾಣಿಸುವರೇನೋ ದೇವರ ದೇವ
ಪತಿತಪಾವನ ನಿನ್ನ ಅತಿಭಕುತಿಯಿಂದ
ಸ್ತುತಿಸಿ ಹಿಗ್ಗದಂಥ ಪಾಮರ ಮನಿಜನೆ ೧

ಕ್ಷೇತ್ರಮಾನ್ಯಗಳೇಸಿದ್ದರೇನು
ಪಾತ್ರೆ ಪದಾರ್ಥಗಳ್ ಗೃಹದಿ ತುಂಬಿದ್ದರೇನು
ಪಾತ್ರಂಗಳ ನೋಡಿ ದಾನಧರ್ಮಂಗಳ ಮಾಡಿ ಮಹ
ಯಾತ್ರೆಗಳ ಚರಿಸದೆ ಗಾತ್ರವ ಪೋಷಿಪಗೆ ೨

ರಾಶಿ ವಿದ್ಯವಿರಲು ಅದರಿಂದ ಫಲವೇನು
ಕೋಶವು ಕೊರೆಯಿಲ್ಲದೆ ಇರುತಿರ್ದರೇನೊ
ಈಶ ವಿನುತ ಶ್ರೀ ರಂಗೇಶವಿಠಲನೊಳು
ಲೇಶ ಭಕುತಿಯಿಲ್ಲದ ಹೇಸೀಕೆ ಮನದವನೆ ೩

## ೨೦೧

ಬಡಿವಾರವಿದ್ಯಾಕೊ ದಡಿಗ ಮಾನವನೆ ಪ

ಜಡಜಮಿತ್ರನ ಸೂನು ಹೆಡತಲೆಯಲಿ ನಗುವ ಅ.ಪ.

ಬಾಲನು ನಾನು ಭಾಗ್ಯಶಾಲಿಯೆನುತ ನಿತ್ಯ
ಲೀಲ ವಿನೋದವೆಂಬ ಜಾಲದೊಳು ಸಿಲುಕಿ
ಕಾಲವ ಕಳೆದು ಮಾಲೋಲನ ಮರೆತಂಥ
ಖೂಳ ಮಾನವ ಪಶುಪಾಲನಾದವ ನಿನಗೆ ೧

ತಾಸು ತಾಸಿಗೆ ನೀನು ಲೇಸಾಗಿ ಭುಂಜಿಪೆ
ಬೇಸರಿಲ್ಲವೊ ನಿನಗೆ ರಾಸಿ ಭೋಗಗಳಲಿ
ಕಾಸುವೀಸವ ಕೊಡೆ ಹರಿದಾಸರಾದವರಿಗೆ
ದೋಷಕಾರಿಯೆನಿಸಿದ ಹೇಸಿಕೆ ಮನದವನೆ ೨

ಕಡುಪ್ರಿಯರೆಂದೆನಿಸುವ ಮಡದಿ ಮಕ್ಕಳು ಎಂಬ
ಬೆಡಗು ತೋರುವ ಮೋಹ ಮಡುವಿನೊಳ್ಬಿದ್ದು
ಒಡೆಯ ಶ್ರೀ ರಂಗೇಶವಿಠಲರೇಯನ ಪಾದ
ಜಡಜವ ನಂಬದೆ ನೀ ಕೆಡಬೇಡ ಮನುಜ ೩

## ೨೦೨

ಫಲವೇನೊ ಫಲವೇನೊ ಫಲವೇನೊ ಮನುಜ ಪ

ಫಲವೇನೊ ಬಾಳಿ ಹರಿದಾಸನಾಗದ ಮೇಲೆ ಅ.ಪ.

ಅಧಿಕಾರವನು ಮಾಡಿ ಮಧುವೈರಿಯನು ಮರೆತು
ಎದುರಿಲ್ಲ ಎನಗೆಂದು ಬಲು ಮದದಿಂದ ಮೆರೆದೆ ೧

ಬಡವಾರ ಬಡಿಯುತ ಕಡುದುಷ್ಟನಿವನೆನಿಸಿ
ಹೆಡಿಗೇಲಿ ಹೊನ್ನ ತಂದು ನಿನ ಮಡದೀಗೆ ಕೊಡಲು ೨

ಮಡದಿ ಮಕ್ಕಳು ನಿನ ಹಡೆದ ತಾಯ್ತಂದೆ
ಕಡು ಸುಖಪಟ್ಟಾರು ನಿನ ಒಡಗೂಡಿ ಬರುವಾರೆ ೩

ಅನುದಿನದಲಿ ನೀನು ತನುವ ಪೋಷಿಸುತ
ಅನುರಾಗದಿಂದಾಲಿ ನಿನ್ನ ಮನಸಿನಂತಿದ್ದು ೪

ನರಜನ್ಮವನು ಕೊಟ್ಟ ರಂಗೇಶವಿಠಲನ
ಹರುಷದಿಂ ಪಾಡುವ ಹರಿದಾಸನಾಗದ ಮೇಲೆ ೫

## ೨೦೩

ಮರೆಯದಿರು ಮರೆಯದಿರು ಹರಿಯನು ಪಾಪಿ ಪ

ಮರೆಯದಿರೆ ನೀ ವೈಕುಂಠಕೆ ಪೋಪಿ ಅ.ಪ.

ಮೂರು ದಿನ ಬಾಳ್ವ ಸಂಸಾರವ ನೋಡಿ
ಬಾರಿ ಹರುಷಿಸದಿರು ನೀನೆಲೊ ಖೋಡಿ ೧

ಮತಿವಂತನಾದರೆ ಹರಿಪುರಕೆ ಪೋದಿ
ಸತಿಸುತರ ನಂಬೆ ನಿನ ಬಾಯಲಿ ಬೂದಿ ೨

ಸಿರಿಯ ನಂಬಿದ ದುರ್ಯೋಧನ ಬಿದ್ದ
ಹರಿಯ ನಂಬಿದ ಭೀಮಸೇನನು ಗೆದ್ದ ೩

ಆನೆ ಕುದುರೆ ರಥ ಭಂಡಾರವು ನಿಂದೆ
ಪ್ರಾಣ ಹೋಗುವಾಗವು ಬಾರವು ಹಿಂದೆ ೪

ರಂಗೇಶವಿಠಲನ ನಂಬಿದವ ಜಾಣ
ಅಂಗನೆಯರ ನಂಬಿದ ಮನುಜನೆ ಕೋಣ ೫

## ೨೦೪

ಸಂಸಾರ ಶರಧಿಯೊಳಗೆ ಮುಳುಗಿ ಆಡಬೇಡವೊ
ಅಲ್ಲೇನು ಇಲ್ಲವೋ ಪ

ಸಿರಿಯು ಇರುವದೆಂದು ನೀನು ಗರುವದಿಂದ ಹರಿಯ ಮರೆತು
ಉರುಳಿ ಪೋಪ ತನುವ ಪೋಷಿಸುತಲಿ ಬಹುತೋಷಿಸೂತಲಿ ೧

ಸತಿಯು ಸುತರು ಬಂಧುಗಳತಿ ಹಿತರು ಎಂದು
ಮತಿಯ ತೊರೆದು
ಪತಿತನಾಗಿ ಬಾಳ ಬೇಡೆಲೊ ಗತಿತೋರರವರೆಲೊ ೨

ಧರಣಿಗೊಡೆಯನಾದ ನಿನ್ನ ಭರದಿ ಯಮನ ಚರರು ಕರೆಯೆ
ಬರೆನು ಎನಲು ಅವರು ಬಿಡುವರೇನೆಲೊ
ನೀ ತಿಳಿದು ನೋಡಲೆ ೩

ಹೊನ್ನು ಹೆಂಣು ಮಂಣಿಗಾಗಿ ಬನ್ನ ಬಿಟ್ಟು ಲಜ್ಜೆ ಬಿಟ್ಟು
ಅಂಣ ತಮ್ಮನೆಂಬಭಿಮಾನ ತೊರೆದೆಲೋ
ಬಲು ನೀಚನಾದೆಲೊ ೪

ಮಂದಮತಿಯೆ ಕೇಳು ನೀನು ಮುಂದೆ ಹಿರಿದು ಬಳಲಬೇಡ
ಪೊಂದಿ ಭಜಿಸೊ ರಂಗೇಶವಿಠಲನ ಸುಖವೀವ ದೊರೆಯನ ೫

## ೨೦೫

ಸುಖವನು ಸರ್ವದ ಬಯಸಲದೇನೆಂದು ನೀ ತಿಳಿದಿಹೆಯಣ್ಣಾ ಪ

ಸುಖ ಬೇಕಾದರದರ ಗೂಢದ ನೆಲೆಯ ನೀ ಕಂಡ್ಹಿಡಿಯಣ್ಣಾ ಅ.ಪ.

ಸಕ್ಕರೆ ತುಪ್ಪ ಹಾಲ್ಮೊಸರಿನೂಟವು ಸುಖವಹುದೇನಣ್ಣ
ಬೊಕ್ಕಸ ಬರಿದಾಗದಲೆ ಸದಾ ರೊಕ್ಕ ತುಂಬಿಹುದೇನಣ್ಣ
ಅಕ್ಕಪಕ್ಕದ ರೂಪವತಿಯರ ಕಣ್ಣೋಟದೊಳೇನಿದೆಯಣ್ಣ
ಚಿಕ್ಕತನದ ಚಲ್ಲಾಟಗಳೋ ನಿರತನಾಗಿಹುದೇನಣ್ಣ ೧

ಚರ ಸ್ಥಿರ ಸ್ವತ್ತುಗಳ ನೀ ಗಳಿಸಿ ಧನಿಕನೆನಿಸುವುದೇನಣ್ಣ
ದೊರೆತನ ಬಯಸಿ ನೀ ದರ್ಪವ ತೋರುತ ಬಾಳುವುದೇನಣ್ಣ
ಪರಿಪರಿ ಬಣ್ಣದ ಪಾವುಡ ಧರಿಸಿ ನೀ ಮೆರೆಯುವುದೇನಣ್ಣ
ಕರಿ ತುರಗ ರಥ ಪಲ್ಲಕ್ಕಿಯಲಿ ಕುಳಿತು ಚರಿಸುವುದೇನಣ್ಣ ೨

ಈ ಪರಿ ಸುಖಗಳೆಲ್ಲವು ತಪ್ಪಲು ನೀನಳುವಿಯೇತಕ್ಕಣ್ಣ
ತಾಪತ್ರಯಂಗಳಂಕುರಿಸಲಿಕವೆಲ್ಲವು ಬೀಜಗಳೆ ಅಣ್ಣ
ಪಾಪ ರಾಸಿ ಬೆಳೆಯಲಿವೆ ಮೂಲ ಕಾರಣವೆಂದರಿಯಣ್ಣ
ಆಪತ್ತುಗಳು ಬಿಡದೆ ಬಂದಡರಿ ಬಹುತಾಪಗೊಳಿಪವಣ್ಣ ೩

ಈ ಸುಖಗಳೆಲ್ಲವು ಬಹುಕಾಲವಿರವು ಶಾಶ್ವತವಲ್ಲಣ್ಣ
ಆಸೆಯ ತೋರಿಸಿ ನಿನ್ನನು ಬಹುಮೋಸಗೊಳಿಪವು ಕೇಳಣ್ಣ
ಹೇಸಿಕೆಗಿಂತವು ಕಡೆಯಾಗಿಹವೆಂದು ದೃಢದಿ ನಂಬಿರಣ್ಣ
ಸಾಸಿರ ನಾಮದ ರಮೇಶನ ಸ್ಮರಿಸಲು ಬೇಸರ ಬೇಡಣ್ಣ ೪

ಕಟ್ಟಿಕೊಂಡ್ಹೋದ ಬುತ್ತಿಯು ತಾನೆಷ್ಟು ದಿನವಿದ್ದೀತಣ್ಣ
ಎಷ್ಟು ಹೇಳಿದರೇನಿ ಫಲವು ನಿನ್ನಲಿ ನೀನೆ ತಿಳಿಯಣ್ಣ
ಗುಟ್ಟಿನಲಿ ಮನಮುಟ್ಟಿ ಯೋಚಿಸಲದುವೆ ಬಯಲಾಗುವುದಣ್ಣ
ದಿಟ್ಟ ರಂಗೇಶವಿಠಲನ ನಾಮವೊಂದೇ ನಿಜ ಸುಖವಣ್ಣ ೫

## ೨೦೬

### ಉಗಾಭೋಗ

ಅಚ್ಯುತಾನಂತನ ಅಚ್ಛಿನ್ನ ಭಕ್ತರ ಸಚ್ಚರಿತ್ರೆಗಳನು
ಮುಚ್ಚುಮರೆ ಮಾಡದೆ ಬಿಚ್ಚಿ ಪೇಳುವೆ ನಾನು
ಇಚ್ಛೆಯುಳ್ಳ ಸುಜನರು ತುಚ್ಛವಾಗೆಣಿಸದೆ ನಿಚ್ಚಾಳ
ಮನದಿಂದ ಕೇಳಿ
ಸ್ವಚ್ಛವಾದ ಭಕುತಿಯಿಂದ ಸಚ್ಚಿದಾನಂದಗೆ ಕಣ್ಣೆಂಬ ದೀಪವ
ಹಚ್ಚಿ ಮನವೆಂಬ ಕುಸುಮದಿ ಅರ್ಚಿಸಿ ಅವನಂಘ್ರಿಕಮಲ–
ಕೆಚ್ಚರಿಸೆ ಪರಾಕು ಹೇಳಿ ಹೆಚ್ಚು ಕುಂದುಗಳನು ಮನ
ಮೆಚ್ಚಿ ಮಾಳ್ಪ ಕರ್ಮವೆಲ್ಲವ ಕಚ್ಛಪರೂಪಗರ್ಪಿಸುವರು
ಕುತ್ಸಿತ ಜನಾಪವಾದಕೆ ಬೆಚ್ಚಿ ಬೆದರದೆ ಕಿಚ್ಚಿಗೂ ಅಂಜದಂಥ
ಕೆಚ್ಚೆದೆಯುಳ್ಳವರಾಗಿ ಯದೃಚ್ಛಾಲಾವಧಿ
ತೃಪ್ತಿ ಹೊಂದಿ ನಿಶ್ಚಿಂತೆಯಲಿರ್ಪರು
ಅಚ್ಯುತನಾದ ರಂಗೇಶವಿಠಲನ ಸರುವದ
ನೆಚ್ಚಿಕೊಂಡಿರುವರಯ್ಯಾ

## ೨೦೭

ಧನ್ಯನಲ್ಲವೇ ಅವನು ಧನ್ಯನಲ್ಲವೆ ಪ

ಪನ್ನಗಾರಿ ಧ್ವಜನ ಮಹಿಮೆಯನ್ನು ಪೊಗಳುತಿರುವ ನರನು ಅ.ಪ.

ಅರುಣ ಉದಯದಲ್ಲಿ ಎದ್ದು
ದುರಿತದೂರವನ್ನು ಸ್ಮರಿಸಿ
ಹರುಷದಿಂದ ಶೌಚ ಕರ್ಮ
ಅರಿತು ನಿರುತ ಚರಿಸುವರನು ೧

ಸತ್ಯಮತದ ಪದ್ಧತಿಯನು
ಚಿತ್ತವಿಟ್ಟು ಆಚರಿಸುತ
ಭೃತ್ಯನೆಂದು ಪೇಳಿಕೊಳುವ
ನಿತ್ಯ ತೃಪ್ತನಾದವರನು ೨

ಸಿರಿಯುತ ರಂಗೇಶವಿಠಲ
ಸರುವ ದೇವರೊಡೆಯನೆಂದು
ಸ್ಥಿರದಿ ನಂಬಿ ಅವನ ಪಾದ
ಮರೆಯ ಹೊಕ್ಕ ಜಾಣ ನರನು ೩

## ೨೦೮

### ಉಗಾಭೋಗ

ನಾನು ನಾನು ಎಂದು ನೀನೇಕೆ ಬಡಕೊಂಬಿ
ನಾನು ನಾನು ಎಂಬುವನೆ ನಾನಾ ಯೋನಿಯೊಳು ಬರುವ
ನೀನು ನೀನು ಎಂಬುವಗೆ ನ್ಯೂನವೇನೂ ಇಲ್ಲ
ನಾ ಸತ್ತರೆ ನರಕವೇ ಇಲ್ಲ ನಿನ್ನಲಿ
ನೀನೆ ನೋಡಿಕೋ ಎಂದ ಶ್ರೀನಿಧಿ ರಂಗೇಶವಿಠಲ

## ೨೦೯

ನೀನು ನಾನು ಸಮನೆಂತಹೆವು ಕಾಣೆನ್ಯಯ್ಯಾ ಪ

ಮಾನವ ರಕ್ಕಸ ಜನರ ಕುತರ್ಕವದೇನೊ ಅ.ಪ.

ಹದಿನಾಲ್ಕು ಲೋಕಗಳನು ಪೊರೆವ ದಾತನು ನೀನು
ಉದರಕಾಗಿ ಅಂಡಲೆವ ತಿಂಡಿಪೋತನು ನಾನು
ಮಧುರ ರಕ್ಕಸನ ಸೀಳ್ದ ಘನ ಪರಾಕ್ರಮಿ ನೀನು
ಸುದತಿ ಗದರಿಸಲು ಗದಗದ ನಡುಗುವೆ ನಾನು ೧

ವ್ಯಾಳಶಯನನಾಗಿ ಸುಖದಿ ನಿದ್ರಿಸುವೆ ನೀನು
ಚೇಳು ಕುಟುಕಲು ಬಾಯ್ಬಡುಕೊಂಬುವೆನು ನಾನು
ಮಾಲೋಲನಾಗಿಹ ನಿತ್ಯ ತೃಪ್ತನು ನೀನು
ಕೂಳಿಲ್ಲದಿರೆ ಮೇಲಕೇಳಲಾರೆನೊ ನಾನು ೨

ಸರ್ವಜ್ಞನಾದ ರಂಗೇಶವಿಠಲ ನೀನು
ಗರ್ವಿಷ್ಟನಾದ ಮಹಾಜ್ಞಾನಿಯು ನಾನು
ಶರ್ವಾದಿಗಳಿಂದ ಸ್ತುತ್ಯನಾದವ ನೀನು
ಉರ್ವಿಯೊಳು ಸರ್ವರಿಂದ ನಿಂದಿತನು ನಾನು ೩

## ೨೧೦

ನೀನೆ ನಾನೆಂಬುವ ಮಾನವಾಧಮನನ್ನು
ಏನು ಮಾಡಲು ಬೇಕು ನಾನರಿಯೆನೊ ರಂಗ ಪ

ದಾನವಾರಿಯೆ ಎನ್ನನೇನೆಂದರೂ ಅನಲಿ
ನಾ ನಿನ್ನ ನಿಂದಿಸುವರಾನನವ ನೋಡೆನೋ ಅ.ಪ.

ಆನೆಕಾಲಿಗೆ ಕಟ್ಟಿ ಬೀದಿಯೊಳೆಳೆಸಲೆ
ಕಾನನಕೆ ಕೊಂಡೊಯ್ದು ಕೈಕಾಲು ಕಡಿಸಲೆ
ಮೀನು ಮೊಸಳೆಗಳಿರುವ ಮಡುವೀಲಿ ನೂಕಿಸಲೆ
ನೇಣುಗಳಿಂದಲಿ ಬಿಗಿದು ಶೂಲಕೇರಿಸಲೆ ೧

ಜೀವದೊರಸೆ ಅವನ ಹೂಳಿಸಿರೆಂದ್ಹೇಳಲೆ
ಹಾವುಗಳ ಹಿಂಡಿನೊಳು ನೂಕಿರೆಂದ್ಹೇಳಲೆ
ನೋವು ಬಹಳಾಗಲು ಸೂಜಿಗಳಿಂದಿರಿಸಲೆ
ಪಾವಕನೊಳು ಕಾಲ್ಕಟ್ಟಿ ಎತ್ತಿ ಹಾಕಿಸಲೇ ೨

ಗಿರಿಯ ತುದಿಯಲಿ ನಿಲಿಸಿ ಜರಿಯೊಳಗೆ ನೂಕಿಸಲೆ
ಭರದಿ ಕಣ್ಕಟ್ಟಿ ಕಾದತೈಲದೊಳಿಡಿಸಲೆ
ಸಿರಿಹರಿಯೆ ಪೇಳೆಂದು ರಂಗೇಶವಿಠಲನೊಳು
ತರಣಿನಂದನ ತಾನು ಬಿನ್ನೈಸಿದನಂದು ೩

## ೨೧೧

### ಉಗಾಭೋಗ

ಪಾಪ ಮಾಡಿದರೇನು ಮಾಡದಿದ್ದರೇನು
ಪಾಪಿ ಜನರ ಸಂಗವ ಮಾಡಿದರೇನು ಮಾಡದಿದ್ದರೇನು
ವಾಪಿ ಕೂಪದಿ ಮಿಂದು ಮಡಿಯುಟ್ಟರೇನು
ಮಡಿಯುಡದಿದ್ದರೇನು
ಧೂಪ ದೀಪಗಳಿಂದ ಹರಿಪೂಜೆ ಮಾಡಲೇನು
ಮಾಡದಿದ್ದರೇನು
ಶ್ರೀಪತಿ ರಂಗೇಶವಿಠಲ ಸರುವ
ವ್ಯಾಪಾರ ಮಾಡುತಿಹನೆಂದು ತಿಳಿಸು ನಿ–
ರ್ಲೇಪನಾಗಿದ್ದು ಅವನ ಶ್ರೀಪಾದ ಪದ್ಮವನು ನೀ–
ಜೋಪಾನವಾಗಿಟ್ಟುಕೊಂಡಿದ್ದರೆ ಸಾಕು

## ೨೧೨

### ಉಗಾಭೋಗ

ಮಧ್ವರಾಯರ ಸಿದ್ಧಾಂತ ಪದ್ಧತಿಯನು ಬಿಟ್ಟು
ಅದ್ವೈತಮಾರ್ಗವನು ಪಿಡಿದು ಸದ್ಗತಿಯ
ಬಯಸಿದವರೆ ಹಾಳೂರು
ಹದ್ದು ಹಾಲೋಗರ ಬಯಸಿದಂತಹುದು
ಸದ್ಗುರುವಿನ ಬುದ್ಧಿವಾದವ ಕೇಳಿ ತನು ಮನವ
ತಿದ್ದಿಕೊಳುತ ಸದ್ವಿದ್ಯವ ಕಲಿತು
ಹೃದ್ಗುಹದೊಳಾ ಹದ್ದುವಾಹನ ಅನಿ
ರುದ್ಧ ನಾಮಕ ಸಿರಿಮುದ್ದು ರಂಗೇಶವಿಠಲನ
ಬದ್ಧವಾಗಿ ನಿಲಿಸಿ ಶುದ್ಧಮನದಿ ಪೂಜಿಸಿ ಇಷ್ಟ
ಸಿದ್ಧಿಯ ಪೊಂದಿ ಊರ್ಧ್ವಲೋಕಂಗಳಲಿ ಚರಿಸೋ

## ೨೧೩

### ಉಗಾಭೋಗ

ಮುನ್ನ ಮುರಾರಿಯ ನಿಂದಿಸಿ
ಬನ್ನಪಟ್ಟ ಅನೇಕಾನೇಕ
ಘನ್ನ ರಕ್ಕಸರನು ನೋಡಿ
ಇನ್ನು ನಿನಗೆ ಮತಿ ಬಾರದೆ
ಅನ್ಯ ಶಾಸ್ತ್ರಗಳೋದಿ
ಭಿನ್ನ ಜ್ಞಾನವ ಪೊಂದಿ
ನಿನ್ನನು ನೀನೇ ಮರೆದು
ಭಿನ್ನವಾಗಬೇಡ

ಪನ್ನಗಾರಿ ಧ್ವಜ ನಮ್ಮ
ಚೆನ್ನ ರಂಗೇಶವಿಠಲನ
ಘನ್ನ ಪಾದಂಗಳ ನಂಬಿ
ಉನ್ನತ ಲೋಕಗಳ ಪಡೆಯೊ

## ೨೧೪

### ಉಗಾಭೋಗ

ರಂಗನಾ ಒಲುಮೆಯಿರಲು ಮಂಗನೇ ಅನಂಗನಕ್ಕು
ಮಂಗನಲಿ ಧನವಿರಲು ಭಂಗವಿಲ್ಲದ ಸುಖವಕ್ಕು
ಅಂಗನೆ ಒಲಿದಿರಲು ಭಂಗವಿಲ್ಲದ ಸುಖವಕ್ಕು
ಭಂಗವಿಲ್ಲದ ಸುಖಕೆ ರಂಗೇಶವಿಠಲನೆ ಕಾರಣಮಕ್ಕು

## ೨೧೫

ಸಕಲ ಕರ್ಮಗಳ ಮಾಡಿ ಮಾಡಿಸುವೆ ನೀನು ಪ

ವಿಕಳಮತಿಗಳಿದನರಿಯರೇನೆಂಬೆ ನಾನು ಅ.ಪ.

'ತೇನವಿನಾ ತೃಣಮಪಿ ನ ಚಲತಿ' ಎಂಬುದನು
ಆನುಪೂರ್ವಕದಿಂದ ತಿಳಿದು ತಿಳಿಯದಂತೆ
ತಾನು ಪುಣ್ಯಕರ್ಮಗಳನು ಮಾಳ್ಪವನೆಂದು
ನೀನು ಪಾಪಕೆಳಸುವೆನೆಂಬರಧಮ ಜನರು ೧

ವಿಧಿವಿಹಿತ ಕರ್ಮಗಳನು ಮಾಡಿಸುವಾತ ಹರಿಯು
ಆಧುನಿಕ ಕರ್ಮಗಳಿಗೆ ಕರ್ತೃ ತಾನೆ ಎಂದು
ಅಧಮ ಕಾರ್ಯಗಳ ಮಧುವೈರಿಗಾರೋಪಿಸದೆ
ನಿಧನರಾಗಿಹ ಜನರು ಮಧ್ಯಮರೆನಿಸುವರು ೨

ಪಾಪ ಪುಣ್ಯ ಕರ್ಮಗಳೇನು ಮಾಡುವುದಕೆ
ಶ್ರೀಪತಿ ರಂಗೇಶವಿಠಲ ಪ್ರೇರಕನಲ್ಲದೆ
ವ್ಯಾಪಾರ ತನಗಿನಿತಾದರಿಲ್ಲವೆಂದರಿತು
ಲೇಪರಹಿತರಾಗಿಹರೆ ಉತ್ತಮರಯ್ಯಾ ೩

## ೨೧೬

ಸ್ವಾಮಿಯು ನೀನಲ್ಲವೊ ಪಾಮರನೆ ಪ

ಸ್ವಾಮಿಯು ನೀನಾಗೆ ಭೃತ್ಯಾನು ನಿನಗ್ಯಾರು
ಈ ಮಾತಿಗೇನೆಂಬೆಯೊ ಸೋಮಾರಿ ಮನುಜನೆ ಅ.ಪ.

ನಿತ್ಯತೃಪ್ತನು ದೇವದೇವೋತ್ತಮನವನು
ಸತ್ಯ ಸಂಕಲ್ಪನು ಸಕಲ ಜಗವರಿಯೆ
ಹೊತ್ತು ಹೊತ್ತಿಗೆ ಗ್ರಾಸಕಿಲ್ಲದವ ಗೃಹಪಾಲ
ಸತ್ಯದನುಭವವಿಲ್ಲವೊ ನಿನಗೆ ೧

ಸ್ವಾಮಿ ಭೃತ್ಯರಿಗೆ ಬೇಧವಿಲ್ಲೆಂಬುವ ನಿನ್ನ
ಕಾಮಿನಿಯ ಮೋಹಿಸಿ ಭೃತ್ಯ ತಾ ಬರಲು
ಕಾಮಾರಿಯಂತೆ ಕೋಪವ ತಾಳುವೆ ನಮ್ಮ
ಸ್ವಾಮಿಗೆ ತಾಮಸ ಗುಣವೆಲ್ಲಿಹುದೊ ೨

ಕಾಸು ಕೊಟ್ಟರೆ ನೀನು ಹೇಸಿಕ್ಯಾದರು ಬಳಿವೆ
ದಾಸ ನೀನಲ್ಲದೆ ಈಶನೆಂತಾದೆಯೊ
ವಾಸುದೇವ ನೀನೆಂದು ಘಾಸಿಯಾಗಲು ಬೇಡ ರಂ–
ಗೇಶವಿಠಲನ ದಾಸರ ದಾಸ ನೀನಾಗೊ ೩

## ೨೧೭

ಹಟವ ಮಾಡದಿರು ಕೇಳೆಲೊ ಮೂಢ ಪ

ಕುಟಿಲವ ಬಿಡು ನೀ ಗಾಢ ಅ.ಪ.

ಹರಿ ಸರ್ವೋತ್ತಮ ವಾಯು ಜೀವೋತ್ತಮ
ಹರ ವೈಷ್ಣವೋತ್ತಮನೆನ್ನೊ ೧

ಮಧ್ವ ಸಿದ್ಧಾಂತದ ಪದ್ಧತಿ ಬಿಡದಲೆ
ಶುದ್ಧ ವೈಷ್ಣವರೊಳಾಡೊ ೨

ಹರಿ ಶರಣರ ಚರಣ ಕಮಲಂಗಳಿಗೆ
ಗರುವಪಡದೆ ನೀ ಬೀಳೊ ೩

ಸಂತತದಲಿ ಶ್ರೀಕಾಂತನ ಗುಣಗಳ
ಚಿಂತನೆ ಮಾಡುತ ಬಾಳೊ ೪

ಮಂಗಳಾಂಗ ತ್ರಿಜಗಂಗಳ ಪೊರೆವವ
ರಂಗೇಶವಿಠಲನೆನ್ನೊ ೫

# ೨೧೮

ಶ್ರೀ ಸಿದ್ಧಿಗಣಪ ಕೊಡು ನಿನ್ನ ನೆನಪ ಘಾಸಿ ತಿಮಿರದಿನಪ ಪ

ಈಶನ ವರಸುತ ದಾಸ ಜನರ ಹಿತ ಪಾಶಾಂಕುಶ ಹಸ್ತ ಅ.ಪ

ವಿದ್ಯೆ ಪ್ರದಾಯಕ ಬುದ್ಧಿ ಪ್ರಬೋಧಕ ಸಿದ್ಧಿದ ಶ್ರೀ ಬೆನಕ
ಹೊದ್ದಿ ನೆನೆವ ಭಕ್ತರುದ್ಧರಿಸುವ ಶಕ್ತ ಮುದ್ದು ಮುಖವ ತೋರಿತ್ತ ೧

ಗಿರಿಜೆ ಸತ್ಸುವರನೆ ದ್ವಿರದ ಸುವದನನೆ ಶರಣರ ಪಾಲಿಪನೆ
ಕರುಣ ಮಹೋಧದಿ ವರಗುಣಮಣಿ ನಿಧಿ
ಪೊರೆಯನ್ನ ಸದ್ದಯದಿ ೨

ಕಿಂಕರ ಶಂಕರ ಶತ್ರುಭಯಂಕರ ಶಂಖಚಕ್ರಾಬ್ಜಧರ
ಸಂಕಟ ಪರಿಹರ ಮಂಕು ಕಳೆವ ಧೀರ
ಪಂಕಜ ಮುಖವ ತೋರ ೩

ರಕ್ತ ವಸ್ತ್ರಾನ್ವಿತ ರಕ್ತ ಗಂಧಾಕ್ಷತ ರಕ್ತ ಮಾಲಾದಿಧೃತ
ಭಕ್ತ ಜನಾವನ ಶಕ್ತನೆ ನೀ ಎನ್ನ ಚಿತ್ತದಿ ಪೊಳೆಯೊ ಘನ್ನ ೪

ಬಾದರಾಯಣಪ್ರಿಯ ಭಾಗವತಧ್ಯೇಯ
ವೇದನಿಕರ ಸುಗೀಯ
ಆದಿ ಸಂಪೂಜಿತ ಮೋದಕ ಸುಪ್ರೀತ
ಸಾಧು ಸಜ್ಜನ ಸಮ್ಮತ ೫

ಅಂಬರಾಧಿಪ ನಿನ್ನ ಉದರದಿ ಜಗವನ್ನ
ಇಂಬಿಟ್ಟಿಯೆಂದು ನಿನ್ನ
ಲಂಬೋದರನೆಂದು ವಿಶ್ವಂಭರನೆಂದು
ಅಂಬರೊ ಸುಗುಣಸಿಂಧು ೬

ವಕ್ರವ ತುಂಡಿಪ ಕತದಿಂದಲಪ್ಪ ವಕ್ರತುಂಡನು ನೀನಪ್ಪ
ಶಕ್ರ ಪೂಜಿಸಿದನು ವೃತ್ರನ ವಧೆಗಿನ್ನುಪಕ್ರಮದಲೆ ತಾನಿನ್ನು ೭

ದುರಿಯೋಧನ ನಿನ್ನ ಮರೆತ ಕಾರಣ ತನ್ನ
ಪರಿವಾರಸಹಿತ ಘನ್ನ
ಧುರದಲ್ಲಿ ಬಿದ್ದನು ವರ ಧರ್ಮ ಗೆದ್ದನು ಎರಗಿ ಅರ್ಚಿಸಿ ನಿನ್ನನು ೮

ದುರಳ ದಶಾನನ ಸರಕುಮಾಡದೆ ನಿನ್ನ ಗರುವದಿಂದಿರಲವನ
ಪರಿಭವ ಕಾರಣವಾದುದೆಂಬರು ಕಣ ಶರಣಜನಾಭರಣ ೯

ಉರುಪರಾಕ್ರಮಿ ರಾಮ ಅರಿತು ಭಜಿಸಿ
ನೇಮದಿರುತಿದ್ದು ಹೇ ಮಹಿಮ
ಖರ ದಶಶಿರನನ್ನು ಧುರದಲ್ಲಿಗೆದ್ದನು ಕರುಣೆಯೆ ಒರೆಯಲೇನು ೧೦

ತಾರಕವಧೆಗೆಂದು ಶೂರ ಷಣ್ಮುಖ ಬಂದು
ಕೋರಲು ಸಿದ್ಧಿ ಅಂದು
ತೋರಿದೆ ಕರುಣವ ಚಾರುಕರದಿ ಅವನಾರೈಸಿ ಕರುಣಾರ್ಣವ ೧೧

ಮುಪ್ಪುರ ಗೆದ್ದನು ಮುಕ್ಕಣ್ಣ ನಿನ್ನನು ತಪ್ಪದೆ ನೆನೆದವನು
ಅಪ್ಪನೆ ನಿನ್ನಯ ಗೊಪ್ಪ ಚರಿತ್ರೆಯ ಇಪ್ಪಂತೆ ಪೇಳಿಸಯ್ಯ ೧೨

ಸೃಷ್ಟಿಕರ್ತನು ತನ್ನ ಸೃಷ್ಟಿಗೈಯ್ಯಲು ಮುನ್ನ ಮುಟ್ಟಿಭಜಿಸಿದ ನಿನ್ನ
ಎಷ್ಟೆಂತ ಪೇಳಲಿ ಶ್ರೇಷ್ಠಗುಣಾವಳಿ ಅಷ್ಟೆಲ್ಲ ನೀನೆ ಬಲ್ಲಿ ೧೩

ಬಂದಪವಾದವ ನಂದಿಸೆ ಮಾಧವ ಪೊಂದಿದ ನಿನ್ನನವ
ದಂದುಗ ಪರಿದುದು ಸಂದೇಗ ಪೋದುದು
ದ್ವಂದ ವಿವಾಹಾದುದು ೧೪

ಭಾರತ ಬರೆಯಲು ಆಕಾರ ನೋಡಲು ತೋರದೆ ಇರುತಿರಲು
ಶೂರನೆ ನಿನ್ನನು ಅರಿಸಿ ವ್ಯಾಸನು ಬೀರಿದ ಮಹಿಮೆಯನು ೧೫

ಏನು ಕರುಣವಯ್ಯ ಶ್ರೀನಿಕೇತನಿಗೈಯ್ಯಾ ತಾನೆ ಇತ್ತಿಹನಯ್ಯ
ಆನತಿಸಲು ಇಷ್ಟ ಮಾಣಲು ಸಂಕಟ ನೀನು ಕೊಡೆನುತದಟ ೧೬

ಭಜಿಪರ ಭಾಗ್ಯದ ಯಜಿಪರಭೀಷ್ಟದ ತ್ಯಜಿಪರ ಸಂಕಟದ
ಗಜಮುಖ ನಿನ್ನಡಿ ಕುಜದ ನೆಳಲ ನೀಡಿ ನಿಜ ಬಿರುದಗಳ ಪಡಿ ೧೭

ಜಯ ಜಯ ಸುಮುಖನೆ ಜಯ ಏಕದಂತನೆ
ಜಯ ಜಯ ಕಾಪಿಲನೆ
ಜಯ ಗಣಾಧ್ಯಕ್ಷನೆ ಜಯ ಫಾಲ ಚಂದ್ರನೆ ಜಯ
ಜಯ ಗಜಮುಖನೆ ೧೮

ದ್ವಾದಶ ನಾಮವ ಆದರದಿಂದಾವ ಓದುವ ಕೇಳುವವ
ಬಾಧಿಪ ವಿಘ್ನವ ಪಾರ್ದು ತಾಂ ಪೋಗುವ
ಆದಿ ಪೂಜಿತನೊಲಿವ ೨೦

ವಿದ್ಯಾರಂಭದಿ ಮುದ್ದು ವಿವಾದದಿ ಪೊದ್ದಲ್ಲಿ ನಿರ್ಗಮದಿ
ಯುದ್ಧದಿ ನಿನ್ನನು ಬದ್ಧದಿ ನೆನೆವನು ಗೆದ್ದಪನೈ ಅವನು ೨೧

ಏಕವಿಂಶತಿಪದ ಕೋಕನಪುಷ್ಪದ ಶ್ರೀಕರ ಮಾಲೆ ಇದ
ಶ್ರೀಕಾಂತ ವರಭಕ್ತ ನೀ ಕರುಣಿಸೆಂದಿತ್ತ ಸ್ವೀಕರಿಸೈ ಮಹಂತ ೨೨

ಬೆಂಗಳೂರಿನಲಿ ತುಂಗರೂಪದಲ್ಲಿ ಕಂಗೊಳಿಸುತಲಿಲ್ಲಿ
ಮಂಗಳೇಕ್ಷಣದಿಂದ ಡಿಂಗರಿಗರ ವೃಂದ
ಹಿಂಗದೆ ಪೊರೆವೆನೆಂದ ೨೩

ಬಾಲಕೃಷ್ಣಾರ್ಯರ ಬಾಲ ಲಕ್ಷ್ಮೀನಾರಾಯಣನೆಂಬ ಸತ್ತೆಸರ
ತಾಳಿದ ಶರಣನು ಮೇಳೈಸೀನುತಿಯನು ಓಲಗಿಸಿದ ನಿನ್ನನು ೨೪

ಒಂದೊಂದು ನುಡಿಯನು ಚಂದದಿ ನುಡಿವನು
ಪೊಂದುವ ಮೋದವನು
ಇಂದುಧರನ ಸುತನಂದದಿ ಸದ್ಭಕ್ತವೃಂದ ರಕ್ಷಿಪ ಸಂತತ ೨೫

ಅಖುವಾಹನ ನಮೋ ಏಕದಂತನೆ
ನಮೋ ಸಾಕುವ ಮಹಿಮ ನಮೋ
ಭೀಕರ ಬಿಡಿಸೆನ್ನ ನೀ ಕರುಣಿಸು ಮುನ್ನ ಶ್ರೀಕಾಂತ ಭಕ್ತಿಘನ್ನ ೨೬
ಮಂಗಳ ಸದ್ವಿದ್ಯಾಬುದ್ಧಿದ ಜಯ ಜಯ ಮುಂಗಳ ಸಿದ್ಧದನೆ
ಮಂಗಳ ಮುದ್ದು ವಿನಾಯಕ ಜಯ ಜಯ
ಮಂಗಳ ವರ್ಧಿತನೆ ೨೭

## ೨೧೮ (ಅ)

ಮಂಗಳಾರತಿಯನ್ನು ಬೆಳಗಿರೆ – ಮಂಗಳಾಂಗಿಯರೆಲ್ಲರು ಪ

ಅಂಗನಾಮಣಿ ಗೌರಿದೇವಿ–ಶುಭಾಂಗ ಮೃದ್ಭವ ಗಣಪಗೆ ಅ.ಪ

ದಾಸರೀಪ್ಸಿತವನ್ನು ಸಲಿಸುವ ಈಶನಂದನ ಗಣಪಗೇ
ಪಾಶ ಅಂಕುಶ ಧರಿಸಿಹ ವಿಘ್ನೇಶ ವಿಘ್ನ ವಿನಾಶಗೇ ೧

ವಿದ್ಯವೀವಗೆ ಬುದ್ಧಿ ಕೊಡುವಗೆ ಸಿದ್ಧಿದಾಯಕ ಗಣಪಗೇ
ಶುದ್ಧಮನದಲಿ ಶರಣುಹೊದ್ದಲು ಉದ್ಧರಿಪ ಸದ್ದಯನಿಗೇ ೨

ಇಕ್ಷುಚಾಪನ ಲಕ್ಷ್ಯಮಾಡದೆ ದಕ್ಷನಾಗಿಹ ಗಣಪಗೇ
ಕುಕ್ಷಿಯೊಳು ಜಗವಿಟ್ಟು ರಕ್ಷಿಪ ಲಕ್ಷ್ಮೀಕಾಂತನ ಭಜಕಗೇ ೩

## ೨೧೯

ಅಂದು ಶ್ರುತಿರಾಶಿಯನು ತಂದು ಕೊಟ್ಟವರಾರು
ಸಿಂಧು ಮಥನದಿ ಸುಧೆಯನಿತ್ತರಾರು
ನೊಂದು ಮುಳುಗಲು ವಸುಂಧರೆಯ ತಂದವರಾರು
ಕಂದ ಕರೆಯಲು ಬಂದ ಬಂಧುವಾರು
ಇಂದ್ರನೈಶ್ವರ್ಯವನು ತಂದು ಕೊಟ್ಟವರಾರು
ಮಂದ ನೃಪರನು ಕಾಡಿ ಕೊಂದವರಾರು
ಸುಂದರಾಂಗಿಯ ಸೆರೆಯ ಬಂದು ಬಿಡಿಸಿದರಾರು
ಕುಂದುಗಳನೆಣಿಸದೆ ಕಾವದಾರು
ನಂದಿನೇರಿದನಿಂಗೆ ಗೆಲುವಿತ್ತವರಾರು
ಬಂದ ಭಯಗಳನೆಲ್ಲ ಬಿಡಿಸುವವರಾರು
ಮುಂದೆ ಮುಕ್ತಿಯನೀವ ಶಕ್ತ ಪ್ರಭುವಾರು
ತಂದೆ ಶ್ರೀಕಾಂತನಲ್ಲದೆ ಮತ್ತೆ ಯಾರು

## ೨೨೦

ಅಚ್ಚರಿಯೊಳಚ್ಚರಿಯು ಅಚ್ಯುತನ ನಾಮವಿದು
ತುಚ್ಛ ಬುದ್ಧಿಯ ಬಿಟ್ಟು ಎಚ್ಚೆತ್ತು ನೋಡೊ ಪ

ನಿಧಿಯು ತನ್ನೆದುರಿಗಿರೆ ವದರಿ ದುರ್ಯೋಧನನು
ಮದಡನಾದನು ಬರಿದೆ ದಳವ ಕೊಂಡು

ಸದಮಲಾತ್ಮನ ದಿವ್ಯ ಪದವನರ್ಜುನ ಪಿಡಿದು
ಮುದದಿ ಭಾಗ್ಯವ ಪಡೆದನದ್ಭುತವ ನೋಡ ೧

ಹರಿಯ ಯೋಗದ ಸಿರಿಯು ಇರುವ ನಿಜವರಿಯದೆ
ಕುರುಡನಣುಗನು ಜರಿದು ಹಾಳಾದನು
ಉರುತರದ ಭಕ್ತಿಯಿಂದೆರಗಿ ಕರಗಳ ಮುಗಿದು
ನರ ತನ್ನ ಹೆಸರನ್ನು ಸಾರ್ಥಕವಗೈದ ೨

ನೀಚಯುಕ್ತಿಗಳಿಂದ ಗೋಚರಕೆ ಬಹನಲ್ಲ
ವಾಚಾಮಗೋಚರನು ಶ್ರೀಕಾಂತನು
ಕೀಚಕಾರಿ ಪ್ರಿಯನ ಶ್ರೀ ಚರಣ ಭಕ್ತಿ ಭವ–
ಮೋಚನಕೆ ಸೂಚನೆಯು ಆಚರಿಸಿ ನೋಡೋ ೩

## ೨೨೧

ಆರತಿಯನೆತ್ತಿರಿ ಅಚ್ಯುತನಿಗೆ ಅನಂತನಿಗೆ ಗೋವಿಂದನಿಗೆ ಪ

ಕಾಲಾಂತರ್ಗತ ಕಾಲ ನಿಯಾಮಕ
ಕಾಲೋತ್ಪಾದಕ ಕಾಲಾತ್ಮನಿಗೆ ೧

ನೊಂದು ಕೌಂಡಿಣ್ಯನು ಮುಂದೋರದಲಿರೆ
ಬಂದು ಕರವ ಪಿಡಿದಾನಂದವಿತ್ತಗೆ ೨

ಸಂತತ ನಡೆಯುವರಂತರ ಬಿಡಿಸುವ–
ನಂತ ಮಹಿಮ ಜಯವಂತ ಶ್ರೀಕಾಂತಗೆ ೩

## ೨೨೧ (ಅ)

ಆರೈದು ಸಲಹೋ ಎನ್ನ – ಶ್ರೀ ರಾಮಚಂದ್ರ ಪ

ಆರೈದು ಸಲಹೋ ಎನ್ನ ಸಾರಿದೆ ನಿನ್ನ ಚರಣ
ವಾರಿಜಯುಗಳವನ್ನು – ಶ್ರೀ ರಾಮಚಂದ್ರ ಅ.ಪ

ಕಕ್ಕಸಭವದೊಳು ದಿಕ್ಕೆಟ್ಟು ತುಕ್ಕೆ ಬಲು
ದುಃಖಿಸುತಿಹೆನು ಕೇಳು – ಶ್ರೀರಾಮಚಂದ್ರ ೧

ತಂದೆ ತಾಯಿಯು ನೀನೆ ಬಂಧು ಬಳಗ ನೀನೇ
ಎಂದೆಂದು ಗತಿ ನೀನೆ – ಶ್ರೀ ರಾಮಚಂದ್ರ ೨

ಕರುಣಾವಲೋಕನ ಬೀರದೆ ಭವ ಬನ್ನ ಈ
ಪರಿಯರೋಷವೊ ಘನ್ನ – ಶ್ರೀ ರಾಮಚಂದ್ರ ೩

ಘೋರ ತಾಪದ ನೋವ ಪಾರಗಾಣಿಸೋ ದೇವ
ದೂರನೇ ನಾ ನಿನ್ನ – ಶ್ರೀ ರಾಮಚಂದ್ರ ೪

ಯಾಕೆ ಬಾರದೋದಯ ಶ್ರೀಕಾಂತ ಎನ್ನಯ
ವಾಕುಸೋಕದೆ ಕಿವಿಯ – ಶ್ರೀರಾಮಚಂದ್ರ ೫

## ೨೨೨

ಇಂದು ಕಂಡೆನು ಹರಿಯ । ಭವಹಾರಿಯ
ಇಂದು ಕಂಡೆನು ಕಂಬದಿಂದಲಿ ಪ

ಬಂದು ದೈತ್ಯನ ಕೊಂದು ಕಂದನಿ–
ಗಂದು ಒಲಿದಾನಂದ ಸಾಂದ್ರನ
ಇಂದಿರಾ ಮಂದಿರನ ವಂದ್ಯನ ಅ.ಪ.

ಎಂದಿನಂದದಿ ಬರುತ । ಮನದಲಿ ಶ್ರೀ ಮು–
ಕುಂದ ನಾಮವ ನೆನೆಯುತ
ಮುಂದು ಮುಂದಕೆ ನಡೆಯುತ । ಆ–
ನಂದದಿ ಹೋಗುತಲಿರೆ
ಸುಂದರಿ ಶ್ರೀ ತುಲಸಿಗೊಲಿದು
ಬೃಂದೆಯನು ಕರವಿಡಿದು ಪೊಳೆದು
ಬಂದು ಗಂಡಕಿಯಿಂದ ಭಕ್ತರ
ವೃಂದ ಪೊರೆಯಲು ಪಥದಿ ನಿಂದನ ೧

ಏಸು ಜನ್ಮದ ಸುಕೃತ । ಬಂದೊದಗಿತೊ
ಶ್ರೀಶನೆನಗೆ ದೊರೆತ । ಪ್ರಭಾವದೆ
ನಾಶವೈದಿತು ದುರಿತ । ರಾಶಿಯು ಇನ್ನು
ದಾಸರಾಯರ ಕುಲದಿ ಜನಿಸಿದ
ಕೂಸೆನುತ ದೇಸಿಗರ ಸೇವೆಗೆ
ಮೀಸಲಾಗಿಸಲೋಸುಗೆನ್ನ ಮ–
ಹಾಶಯವ ಲೇಸೆನಿಸಿ ಬಂದವ ೨

ವಿಕಳ ತತಿಗೆ ಬಾಧಕ । ಈತನ ನಾಮ
ಪ್ರಕಟಿಸಲಿನ್ನು ಸುಖ । ಪಾಲಿಸುವನು
ಯುಕುತಿಗೆಂದಿಗು ನಿಲುಕ । ಸುಕೃತರಿಂದ
ಭಕುತಿ ಸೇವೆಯನೊಂದೆ ಕೊಳ್ಳುವ
ಭಕುತಿ ಮುಕುತಿಗಳನ್ನು ಕೊಡುವ
ಸಕಲ ಕಾಲದಿ ನಿಂತು ಸಲಹುವ
ಲಕುಮಿಕಾಂತನ ಸರ್ವ ಶಕ್ತನ ೩

## ೨೨೩

ಈ ಮಾಧವ ದೇವಾದಿ ದೇವಾ ಪ

ಪ್ರೇಮದಿಂದ ಕಾವ ಶ್ರೀ ಮಹಾನುಭಾವ ಅ.ಪ.

ಯಾರು ಇಲ್ಲದೆ ಘೋರಾಂಧಕಾರದೆ
ಸೇರಿ ಸಾಗರ ಧೀರನಾಗಿದ್ದವ ೧

ಸೃಷ್ಟಿ ಸ್ಥಿತ್ಯಾದಿ ಅಷ್ಟಕರ್ತನಾದಿ
ಇಷ್ಟದಾತನೀತ ಶಿಷ್ಟ ಕೃಪಾನ್ವಿತ ೨

ಅಚ್ಯುತಾನಂದ ಸ್ವಚ್ಛಮೂರ್ತಿನಾಥ
ನೆಚ್ಚಿದವರ ಬಿಡ ಲಕ್ಷ್ಮೀಕಾಂತ ದೃಢ ೩

## ೨೨೩ (ಅ)

ಏನೆಂದು ಪೇಳಲೋ ರಾಮ ನಿನ್ನಾ
ದೀನವತ್ಸಲತೆಯ ಆಶ್ರಿತ ಪ್ರೇಮ ಪ

ಕಲ್ಲಾಗಿ ಪಥದಲ್ಲಿ ಬಿದ್ದ । ಮುನಿ
ವಲ್ಲಭೆಯನು ಸಲಹಿದ ಸುಪ್ರಸಿದ್ಧ
ಕಲ್ಲೆದೆಯವ ನಾನು ಸಿದ್ಧ । ಎನ್ನ
ಸೊಲ್ಲುಲಾಲಿಸಿ ಪೊರೆಯಯ್ಯ ಅನಿರುದ್ಧ ೧

ಪಶುಜಾತಿ ಸುಗ್ರೀವ ಮುಖರ । ನೀ
ಹಸನಾಗಿ ಪೊರೆದದ್ದು ಕೇಳಿದೆ ವಿವರ
ವಶವಲ್ಲದಿಂದ್ರಿಯನಿಕರವುಳ್ಳ
ಪಶುಪ್ರಾಯ ನಾನಯ್ಯ ರಕ್ಷಿಸೋ ಚತುರ ೨

ಚೆಂಡಾಲನಾದ ಗುಹನ । ಕೈ
ಗೊಂಡು ಕಾಪಾಡಿದೆ ಕುರುಣದಿಂದವನ
ಖಂಡಿತ ಪೇಳುವೆ ಘನ್ನ । ಕರ್ಮ
ಚೆಂಡಾಲ ನಾನು ಶ್ರೀ ಕಾಂತ ಪ್ರಸನ್ನ ೩

## ೨೨೪

ಕರುಣಕೆ ಎಣೆಗಾಣೆ ಶ್ರೀಕಾಂತನ ಪ

ಧರೆಯಿರೇಳರೊಳರಸಿ ನಾ ನೋಡಲು
ಸರಿಯಾರಿಹರಿನ್ನು ಶ್ರೀಕಾಂತಗೆ ಅ.ಪ.

ಕಚ್ಚಿದ ಕಾಳಿಯ ಕೆಚ್ಚನು ಎಣಿಸದೆ
ಮೆಚ್ಚುಕೊಟ್ಟನು ವರವ ಶ್ರೀಕಾಂತನು ೧

ಬೈದ ಚೈದ್ಯನಪರಾಧವ ನೋಡದೆ
ಸೋದರದಲಿ ಇಟ್ಟನು ಶ್ರೀಕಾಂತನು ೨

ಕೃದ್ಧನಾಗಿ ಬಂದು ಒದ್ದ ಭೃಗುಮುನಿಗೆ
ಎದ್ದುಪಚರಿಸಿದನು ಶ್ರೀಕಾಂತನು ೩

## ೨೨೫

ಕೋಪ ಮಾಡುವರೆ – ಕೃಪಾಳು ನೀನು
ಕೋಪ ಮಾಡುವರೆ ಪ

ಕೋಪ ಮಾಡುವರೇನೋ ಸಂಸೃತಿ
ಕೂಪದೊಳು ಬಿದ್ದೊರಳುತಿಹನ

ನೀ ಪರಾಮರಿಸಿನ್ನು ಕೀರ್ತಿ ಕ–
ಲಾಪವನು ಕಾಪಾಡಿಕೊಳ್ಳದೆ ಅ.ಪ.

ನಾಥನು ನೀನು ಎಂದೆಂದಿಗೂ
ದೂತನು ನಾನು ಸಿದ್ಧಾಂತವು । ನೀತವಿದಿನ್ನು
ಕೋತಿ ಕುಣಿವುದು ಕೊರವ ಕುಣಿಸಿದ
ರೀತಿಯಲಿ ಜಗತೀತಳದಿ – ವಿ
ಖ್ಯಾತಿಯಲ್ಲವೆ ಮಾತು ಪುಸಿಯೇ
ನೀ ತಿಳಿದು ಕರುಣಿಸದೆ ಬರಿದೆ ೧

ಅರಿತವ ನೀನು – ಷಡ್ವರ್ಗದಿ
ಬೆರತವ ನಾನು – ಚರಣಂಗಳಿಗೆರಗುವೆನಿನ್ನು
ಅರಿತು ನೆನೆಯೆ ಪ್ರಪನ್ನರೊಮ್ಮೆಗೆ
ಎರವು ಮಾಡದೆ ಪೊರೆವೆನೆಂಬುವ
ಬಿರುದನುಳಿದು ಕರುಣವಿಲ್ಲದೆ
ಮರೆಯ ಹೊಕ್ಕವರೊಡನೆ ಕೆರಳಿ ೨

ಏನಾದರೇನು – ನೀನಲ್ಲದೆ
ಕಾಣೆ ಮತ್ತೇನು – ಕೊಲ್ಲು ಕಾಯಿ ನಾನು ನಿನ್ನವನು
ಪ್ರಾಣ ಸತಿಸುತ ದ್ರವ್ಯ ಮಾನಪ–
ಮಾನ ಅಭಿಮಾನಗಳು ನಿನ್ನವು
ದೀನ ಜನ ಮಂದಾರ ಗುಣಗಳ
ಪೂರ್ಣ ಲಕ್ಷ್ಮೀಕಾಂತ ಪ್ರಭುವೆ ೩

## ೨೨೬

### ಉಗಾಭೋಗ

ಗಂಗೆಯನು ಪಡೆದ ಉತ್ತುಂಗದುಂಗುಟನಿಂಗೆ
ಅಂಗನೆಯು ಗಡಿಗೆ ನೀರನು ಎರೆದಳು
ಹೊಂಬಣ್ಣವಾದ ಪೀತಾಂಬರಗೆ ಸೆರಗಿನಲಿ
ಇಂಬಾಗಿ ಒರೆಸಿ ವಸ್ತ್ರವನಿತ್ತಳು

ಸುರಕುಲಕೆ ತಿಲಕನಹ ನರಹರಿಯ ಪಣೆಯಲ್ಲಿ
ತರುಣಿ ಕಸ್ತುರಿಯ ತಿಲಕವನಿಟ್ಟಳು
ಸ್ಮರ ಜನಕ ಸದ್ಗುಣಾಭರಣ ಶ್ರೀಧರಗೆ ಆ-
ಭರಣಗಳಂಕರಿಸಿ ಹಿಗ್ಗುತಿಹಳು
ತ್ರಿದಶರಿಗೆ ಸುಧೆಯನೆರೆದವನಿಗುಣಬಡಿಸಿ
ಭಕ್ತಿ ಮುಕ್ತಿದಾತಂಗೆ ಬುತ್ತಿಯನಿತ್ತು
ಪರಮ ಸ್ವತಂತ್ರನಹ ಶ್ರೀಕಾಂತನಿಂಗೆ
ತುರುಗಾಹೆ ಬೆಸನಿತ್ತಳಾನಂದಗೋಪಿ

## ೨೨೬ (ಅ)

ಗೋಪಾಲಕುಲ ಬಾಲ ಗೋವಿಂದ ಗುಣಶೀಲ
ನೀ ಪಾಲಿಸೆನ್ನನು ದೇವ ಪ

ಶರನಿಧಿ ಸಂಚಾರ ವರ ಮಂದರೋದ್ಧರ
ಪರಮಾತ್ಮ ಭೂಧರ ದೇವ ೧

ನರಭಕ್ತ ಭಯಹಾರ ಸುರಕಾರ್ಯಕೃತ ಧೀರ
ಧರಣೇಸುರೇಶ್ವರ ದೇವ ೨

ಸಕಲಾರ್ತಿಹರ ಶೂರ ಕುರುತೇಷ್ಟದಾತಾರ
ವಿಕಟಾರ್ತ ಶ್ರೀಕರ ದೇವ ೩

ಕಲಿದೋಷ ಪರಿಹಾರ ಸಲೆ ಧರ್ಮವಿಸ್ತಾರ
ಜಲಧೀಶ ಮಂದಿರ ದೇವ ೪

ಶ್ರೀಕಾಂತ ಶ್ರೀಮಂತ ಶ್ರೀಕೃಷ್ಣ ಜಯವಂತ
ನೀ ಪಾಲಿಸೆನ್ನನು ದೇವ ೫

## ೨೨೭

ಜಯ ಜಯ ರಮಾಕಾಂತ – ಜಯತು ದೈತ್ಯ ಕೃತಾಂತ
ಜಯ ಸರ್ವ ವೇದಾಂತ – ಜಯತು ನಿಶ್ಚಿಂತ ಪ

ಬೇಡ ವೇಷವ ತಾಳಿ– ಓಡಿಸುತೆ ತುರಗವನು
ಪ್ರೌಢೆ ಪದ್ಮಾವತಿಯ – ನೋಡಿ ನಸುನಗುತ
ಜೋಡಾಗು ತನಗೆಂದು – ಗಾಡಿಕಾರರ ಮಾತ
ನಾಡಿ ಕ್ರೋಢಾಲಯಕೆ – ಓಡಿಬಂದವನೆ ೧

ತಾಯೆ ಬಕುಳೆಯ ಕಳುಹಿ ಮಾಯಕದ ಕೊರವಂಜಿ
ಕಾಯದಿಂದಾಕಾಶರಾಯನರಮನೆಗೆ
ಜೋಯೆಂದು ಪೋಗಿ – ಸದುಪಾಯಗಳ ನಡೆಸಿ ತ
ನ್ನಾಯ ಕೈತಂದ ಕಮನೀಯ ಮೂರುತಿಯೆ ೨

ಶುಕಮುನಿಯ ಮುಖದಿಂದ ಸುಖವಾರ್ತೆಯನು ಕೇಳಿ
ಸಕಲ ದೇವೋತ್ತಮರ – ನಿಕರವನು ನೆರಹಿ
ಅಕಳಂಕ ಲಗ್ನದಲಿ ಸುಕಪೋಲೆಗೊಲಿದುರಗ
ಶಿಖರಿಯಲಿ ನೆಲೆಯಾದ ಲಕುಮಿವಲ್ಲಭನೆ ೩

## ೨೨೭ (ಅ)

ಜಯಜಯತು ಶ್ರೀರಾಮ ಜಯಜಯತು ಘನಶ್ಯಾಮ
ಜಯಜಯತು ಮುನಿಪ್ರೇಮ – ರಿಪು ಭೀಮ
ಜಯಜಯತು ಸುರಸ್ತೋಮ – ವಿನಮಿತ ಮಂಗಳ ನಾಮ
ಜಯತು ಸದ್ಗುಣಧಾಮ – ರಘುರಾಮ ೧

ಆನಂದ ಜ್ಞಾನದನೆ – ಆನಂದ ಮಾಸದನೆ
ಆನಂದ ಸಿದ್ಧಿದನೆ – ಅನಘನೇ

ಆನಂದ ಮಂದಿರನೆ – ಆನಂದ ಚಂದಿರನೆ
ಆನಂದ ಸುಂದರನೆ – ಅಘಹಾನೇ ೨

ಸುರಾರಿದರ್ಪಹರ – ಪುರಾರಿ ಮಿತ್ರವರ
ದರಾರಿ ಅಭಯಕರ–ಸುಕುಮಾರ
ಕಾರುಣ್ಯಪಾಂಗವರ–ಲಾವಣ್ಯರೂಪಧರ
ವರೇಣ್ಯನಿಕರ – ಸಿರಿಕಾಂತ ೩

## ೨೨೭ (ಆ)

ಜಯ ಮಂಗಳ ನಾಮ ಶ್ರೀರಾಮ
ಜಯ ಜಯ ಸದ್ಗುಣ ಧಾಮ ನಿಸ್ಸೀಮ ಪ

ಭಾನುವಂಶಪಯೋನಿಧಿ ಚಂದ್ರ
ದೀನರಕ್ಷಣ ಪರ ಹೇ ದಯಾಸಾಂದ್ರ ೧

ದಾನವಹರ ಸುರಕಾರ್ಯ ವಿಚಾರ
ವಾನರತತಿ ಸುಮಾವೃತ ಧೀರ ೨

ಭರತ ಶತ್ರುಹನ ಲಕ್ಷ್ಮಣ ಭ್ರಾತ
ಮರುತನಯನುತ ಶ್ರೀ ಲಕ್ಷ್ಮೀಕಾಂತ ೩

## ೨೨೮

ದಾಸರ ದಾಸರ ದಾಸನೆಂದೆನಿಸುವ
ಲೇಸು ಭಾಗ್ಯವ ಕೊಡೊ ಶಾಶ್ವತವಾಗಿ ಪ

ಆಶಾಪಾಶವ ನಾಶನಗೈಸಿ
ದೇಶಿಗರೆಲ್ಲರ ಕೂಸೆಂದೆನಿಸಿ ಅ.ಪ.

ಕಾಮಕ್ರೋಧದ ಉಪಟಳ ಬಹಳ
ನೇಮ ನಿಷ್ಠೆಯ ಸುಳಿವೆನಗಿಲ್ಲ
ತಾಮಸನಾಗಿ ಬಳಲಿದೆನಯ್ಯ
ಪ್ರೇಮದಿ ಪಿಡಿದು ಸಲಹೊ ದಮ್ಮಯ್ಯ ೧

ವದನದಿ ನಿನ್ನ ನಾಮವ ನುಡಿಸೊ
ಪದದಲಿ ನಿನ್ನ ಯಾತ್ರೆಯ ನಡೆಸೊ
ಹೃದಯದಿ ನಿನ್ನ ರೂಪವ ತೋರಿ
ಒದಗಿ ಪಾಲಿಸೊ ಅನುದಿನ ಶೌರಿ ೨

ಭಕ್ತವತ್ಸಲ ಭಾಗ್ಯಸಂಪನ್ನ
ಭಕ್ತರ ಸಂಗತಿ ಪಾಲಿಸೊ ಘನ್ನ
ಉಕ್ತಿಯ ಲಾಲಿಸೊ ನಾನು ಅನಾಥ
ಮತ್ತೇನು ಬೇಡೆನೊ ಶಕ್ತ ಶ್ರೀಕಾಂತ ೩

## ೨೨೯

ಧ್ಯಾನವ ಕೊಡು ಹರಿಯೆ । ನಿರಂತರ
ಧ್ಯಾನವ ಕೊಡು ಹರಿಯೆ ಪ

ನೀನೆ ಗತಿಯೆಂದಾನುಪೂರ್ವಕ
ಧ್ಯಾನ ಮಾಳ್ಪರ ಜನ್ಮಕರ್ಮಗ
ಳೇನು ನೋಡದೆ ಪೊರೆವೆ ನಿನ್ನ
ಸುನಾಮವೆ ಸುರಧೇನುವೆಂದು ಅ.ಪ.

ನಿನ್ನ ನಾಮವ ನೆನೆದು । ಅಜಾಮಿಳನು
ಧನ್ಯನು ತಾನಾದನು ಈ ಭುವನದಿ
ತನ್ನ ದೇಹಾತುರದೊಳನ್ಯರ
ಬನ್ನ ಬಿಡಿಸುತಲಿದ್ದ ಖಳನು

ನಿನ್ನ ನಾಮಸ್ಮರಣೆ ಮಾತ್ರದಿ
ಘನ್ನ ಮುನಿಪತಿ ಎನ್ನಿಸಿದನು ೧

ದುರುಳ ದುಶ್ಯಾಸನನು । ಸಭೆಯೊಳಗಂದು
ತರಳೆ ದ್ರೌಪದಿದೇವಿಯ ಸೆರಗನ್ನು ಸೆಳೆಯೆ
ಮುರಹರನೆ ಹಾ ಕೃಷ್ಣ ದ್ವಾರಕಾ-
ಪುರನಿಲಯ ಪರಮಾತ್ಮ ಭಕ್ತರ
ಸುರತರುವೆ ಎಲ್ಲಿರುವೆ ಏತಕೆ
ಮರೆವೆ ಎನ್ನುತ ಮೊರೆಯೆ ಪೊರೆದೆಯೊ ೨

ನರಕ ಕೂಪದೊಳು ಬಿದ್ದು । ಏಳುತ್ತ ಮುಳುಗುತ
ಪರಿಪರಿ ಭಾಷೆಯಲಿ ಮುಂದೋರದೆ
ಹೊರಳುತ್ತೊರಳುತ ಮರುಕಗೊಳುತ
ಹರಿಹರಿ ನಾರಾಯಣೆನ್ನಲು
ಸುರಲೋಕವನ್ನಿತ್ತು ಸಲಹಿದೆ
ವರದ ಲಕ್ಷ್ಮೀಕಾಂತ ಶಾಶ್ವತ ೩

## ೨೩೦

ನಾಮಕೆಣೆ ಕಾಣೆ ಮುಕುಂದನ ಪ

ಶ್ರೀ ಮನೋರಮ ಸುರಸ್ತೋಮವಿನುತ ನಾಮ
ಕಾಮಿತಪ್ರದ ನಾಮ ಮುಕುಂದನ ೧

ಕೆಟ್ಟ ಕಿರಾತನು ಮುಟ್ಟಿ ಭಜಿಸಿ ತಾನು ಉ-
ತ್ಕೃಷ್ಟ ಮುನಿಯಾದನು ಮುಕುಂದನ ೨

ಘೋರ ನಾರಕಿಗಳು ನಾರಾಯಣನೆಂದು
ಸೂರೆಗೊಂಡರು ಸ್ವರ್ಗವ ಮುಕುಂದನ ೩

ನಾರಣ ಬಾರೆಂದು ಚೀರಲು ಅಜಾಮಿಳ
ಸೇರಿದನಾಪುವರ್ಗವ ಮುಕುಂದನ ೪

ಲಕ್ಷ್ಮೀಕಾಂತನ ನಾಮೋಚ್ಚಾರದಿ ದ್ರೌಪದಿ
ರಕ್ಷಿತೆಯಾದಳಿಂದು ಮುಕುಂದನ ೫

## ೨೩೧

ನಾರಸಿಂಹನೆ ಎನ್ನ । ದುರಿತೌಘಗಳನು
ದೂರಕ್ಕೈದಿಸಿ ಘನ್ನ । ಕರುಣಾವಲೋಕನ
ಬೀರಿ ಭವ ಭಯವನ್ನ । ಬಿಡಿಸಯ್ಯ ಮುನ್ನ ಪ

ಧೀರ ಸುಜನೋದ್ಧಾರ ದೈತ್ಯ ವಿ
ದೂರ ಘನಗಂಭೀರ ಶೌರ್ಯೋ
ಧಾರ ತ್ರಿಜಗಾಧಾರ ಎನ್ನಯ
ಭಾರ ನಿನ್ನದೊ ಹೇ ರಮಾವರ ಅ.ಪ.

ಏನು ಬಲ್ಲೆನೊ ನಾನು । ಸುಜ್ಞಾನ ಮೂರುತಿ
ಮಾನಸಾಬ್ಜದಿ ನೀನು । ನೆಲೆಯಾಗಿ ನಿಂತು
ಏನು ನುಡಿಸಲು ನಾನು । ಅದರಂತೆ ನುಡಿವೆನು
ಜ್ಞಾನದಾತನೆ ಇನ್ನು । ತಪ್ಪೆನ್ನೊಳೇನು
ಸ್ನಾನ ಜಪತಪ ಮೌನ ಮಂತ್ರ
ಧ್ಯಾನಧಾರಣ ದಾನ ಧರ್ಮಗ–
ಳೇನು ಮಾಡುವುದೆಲ್ಲ ನಿನ್ನಾ–
ಧೀನವಲ್ಲವೆ ಶ್ರೀನಿವಾಸನೆ
ದಾನವಾಂತಕ ದೀನರಕ್ಷಕ
ಧ್ಯಾನಿಪರ ಸುರಧೇನುವೆನ್ನುವ
ಮಾನವುಳ್ಳವರೆಂದು ನಂಬಿದೆ
ಸಾನುರಾಗದಿ ಕಾಯೊ ಬಿಡದೆ ೧

ತಂದೆತಾಯಿಯು ನೀನೆ । ಗೋವಿಂದ ಎನ್ನಯ
ಬಂಧು ಬಳಗವು ನೀನೆ । ಮು-
ಕುಂದ ಗುರುಸಖ ವಂದ್ಯದೈವವು ನೀನೆ
ಹೊಂದಿರು ವಿದ್ಯೆಯು ಚಂದದೈಸಿರಿ
ನೀನೆ । ಆನಂದ ನೀನೆ
ಹಿಂದೆ ಮುಂದೆಡಬಲದಿ ಒಳಹೊರ-
ಗೊಂದು ಕ್ಷಣವಗಲದಲೆ ತ್ರಿದಶರ
ವೃಂದ ಸಹಿತದಿ ಬಂದು ನೆಲಸಿ
ಬಂದ ಬಂದಘಗಳನು ಹರಿಸಿ
ನಂದವೀಯುತಲಿರಲು ಎನಗಿ-
ನ್ನೆಂದಿಗೂ ಭಯವಿಲ್ಲ ತ್ರಿಕರಣ-
ದಿಂದ ಮಾಡಿದ ಕರ್ಮ ನಿನ್ನರು
ಎಂದು ಅರ್ಪಿಸುವೆನು ನಿರಂತರ ೨

ಪ್ರೀಯ ನೀನೆನಗೆಂದು । ಮರೆಹೊಕ್ಕು ಬೇಡುವೆ-
ನಯ್ಯ ಗುಣಗಣಸಿಂಧು । ಮೈಮರೆಸಿ ವಿಷಯದ
ಹುಯ್ಲಿಗಿಕ್ಕದಿರೆಂದು । ಶರಣನ್ನ ಬಿನ್ನಪ
ಜೀಯ ಲಾಲಿಸಿ ಇಂದು । ಕೈಬಿಡದಿರೆಂದು
ತಾಯನಗಲಿದ ತನಯನಂದದಿ
ಬಾಯ ಬಿಡಿಸುವರೇನೊ ಚಿನ್ಮಯ
ನ್ಯಾಯ ಪೇಳುವರ್‍ಯಾರೊ ನೀನೊ
ಸಾಯಗೊಲುತಿರೆ ಮಾಯಗಾರನೆ
ತೋಯಜಾಸನ ಮುಖ್ಯ ಸುಮನಸ
ಧ್ಯೇಯ ಶ್ರುತಿ ಸ್ಮೃತಿ ಗೇಯ ಕವಿಜನ
ಗೇಯ ಚತುರೋಪಾಯ ಭಕ್ತ ನಿ-
ಕಾಯ ಪ್ರಿಯ ಶ್ರೀಕಾಂತ ಜಯ ಜಯ

## ೨೩೨

### ಉಗಾಭೋಗ

ನಿನಗೆ ನಿದ್ರೆಯು ಎಂತು ಬರುವುದೊ ಶ್ರೀಕಾಂತ
ಎನಗೇನು ತೋರದಿದೆ ಘನಮಹಿಮನೆ
ಸಿರಿದೇವಿ ಉರದಲ್ಲಿ ಸರಸವಾಡುತಲಿಹಳು
ನಿರುತ ತಾ ನೆಲಸಿದ್ದು ಎಡಬಿಡದಲೆ
ನಾಭಿ ಪದ್ಮದಿ ಬ್ರಹ್ಮ ನಾಲ್ಕು ವೇದವ ಪಠಿಸಿ
ನಾಲ್ಕು ಮುಖದಿಂದ ನಾದ ತುಂಬುತಿಹನು
ಜಗದ ಜೀವಿಗಳೆಲ್ಲ ಜಿಗಿದಾಡಿ ಒಡಲಿನಲಿ
ಬಗೆ ಬಗೆಯ ಕೂಗುಗಳ ಕೂಗುತಿಹರು
ಭಕ್ತಪಾಲಕನೆಂಬ ಬಿರುದುಳಿವ ಚಿಂತೆ
ಭಕ್ತರ್ಧಂಗಿನ ಋಣವ ತಿದ್ದಿಡುವ ಚಿಂತೆ
ಮತ್ತಾರು ಅರಿಯದೋಲ್ ನಿಜಶಕ್ತಿಯನ್ನು
ಬೈತಿಡುವ ಚಿಂತೆಯೊಳ್ ನಿನಗೆಲ್ಲಿ ನಿದ್ರೆ

## ೨೩೩

ನೀರಧಿಶಯನ ಮುಕುಂದ
ಹರಿನಾರಾಯಣ ಗೋವಿಂದ ಪ

ಪ್ರಚಲಿತ ಲಯ ಜಲ ವಿಹರಣ ಶಾಶ್ವತ
ಅಚಲೋದ್ಧರಣ ಸಮರ್ಥ ಸದಾಶ್ರಿತ
ಕಾಂಚನ ನಯನ ವಿಘಾತ ನರ
ಪಂಚಾನನ ಪ್ರಖ್ಯಾತ ೧

ಮಂದಾಕಿನಿ ಪಿತ ದೇವ ತ್ರಿವಿಕ್ರಮ
ನಂದಿತ ಗೋಕುಲ ವೃಂದ ಪರಾಕ್ರಮ

ಸಿಂಧುನಿಬಂಧನ ರಾಮಾನಂದದ
ಸುಂದರ ಶ್ಯಾಮ ೨

ಲೋಕ ವಿಮೋಹಕ ಬುದ್ಧ ಸುವೇಶ
ಶ್ರೀಕರ ಕಲ್ಕಿ ಪಾಹಿ ನಿರ್ದೋಷ
ಕಾಕೋದರ ಗಿರಿವಾಸ ಜಯ
ಶ್ರೀಕಾಂತ ಶ್ರೀ ಶ್ರೀನಿವಾಸ ೩

## ೨೩೪

ಪಂಡರಿನಾಥ ಪಾವನ ಸುಚರಿತ ಪ

ಪಾಂಡವಪ್ರಿಯದೂತ ಶರಣರ ಕಾದುಕೊಂಡಿಹ ಖ್ಯಾತ ದಾತ ಅ.ಪ.

ಮಾತಾಪಿತನು ಭ್ರಾತನು ಹಿತನು
ನಾಥನು ಜ್ಞಾತನು ಸಂತಾರಕನು
ಮತಿಯೂ ನೀನೆ ಗತಿಯೂ ನೀನೆ
ಕಾತರ ವ್ಯಾತರದು ಬೀತುದು ದೇವ ೧

ತನುಮನಧನಗಳ ನಿನಗರ್ಪಿಸಿದೆ
ಎನಿತಾದರು ಇಡು ಅನುಮಾನಿಸಿದೆ
ಜನರ ನಿಂದನೆ ಮೇಣಾನಂದನೆ
ಮಾನ ಅವಮಾನ ನಿನ್ನದು ದೇವ ೨

ಚಿಂತೆಯ ಮರೆದೆ ಭ್ರಾಂತಿಯ ತೊರೆದೆ
ಸಂತರ ಚರಣವನಾಂತೆ ದೃಢದೆ
ಸ್ವಾಂತವು ಮೋದವಾಂತುದು ಶ್ರೀದ
ಸಂತತ ಶ್ರೀಕಾಂತ ನಿಶ್ಚಿತ ದೇವ ೩

## ೨೩೪ (ಅ)

ಪರತರ ಕರುಣಾಕರ ವಿಧಿಮುಖ
ಸುರವರ ನುತಚರಣಯುಗ ಪಾಹಿ ಪ

ಭವಭಯಸಾಗರ ತರಣಿಯೆಂದೆನಿಸಿದೆ
ತವಪದ ಧ್ಯಾನವ ಸದಾ ಕೊಟ್ಟೆನ್ನನು ೧

ತರಳನ ಬಾಧಿಪ ದುರಳನ ಸಭೆಯಲಿ
ನರಮೃಗ ರೂಪವ ತಾಳಿ ನೀ ಬಂದೆಯೋ ೨

ಸಕಲ ಚರಾಚರದೊಳಗೆ ನೀನಿರುವುದು
ಪ್ರಕಟಿಸಿ ತೋರಿದೆ ಶ್ರೀಕಾಂತ ಶಾಶ್ವತ ೩

## ೨೩೫

ಪರಮ ಕೃಪಾನಿಧೆ ಗೋಪಾಲದೇವ ಪ

ಪರಿಪಾಲಿಸೋ ಎನ್ನ ಶ್ರೀಲೋಲ ಹರಿ ಅ.ಪ.

ಪತಿತಪಾವನಾಶ್ರಿತ ಜನ ಪಾಲನ
ಗತಿ ನೀನಲ್ಲದೆ ಕಾಣೆ ನಾ ೧

ಮಾನಾಭಿಮಾನ ನಿನ್ನಾಧೀನ
ದೀನ ಜನಾವನ ನಿನ್ನವ ನಾ ೨

ಅಜಭವಾರ್ಚಿತ ಆನಂದಾಚ್ಯುತ
ನಿಜಪಥ ತೋರಿಸೊ ಶ್ರೀಕಾಂತ ೩

## ೨೩೫ (ಅ)

ಪರತರ ಪಾವನ ಶ್ರೀರಾಮ ಜಯ ಪ

ಶರಣ ಜನಾವನ ಶ್ರೀರಾಮ ಜಯ ಅ.ಪ.

ಖರತರ ನಿಶಾಚರ ದಹನ ಪರಾವೃತ
ಸರಸಿಜಭವನುತ ಶ್ರೀರಾಮಜಯ ೧

ಸೀತಾಲಕ್ಷ್ಮಣ ಭರತ ಶತ್ರುಹನ
ವಾತಜ ಸೇವಿತ ಶ್ರೀರಾಮ ಜಯ ೨

ಸ್ವಾಂತ ಧ್ವಾಂತ ನಿಕೃಂತ ಲಕ್ಷ್ಮೀ-
ಕಾಂತ ನಮೋ ನಮೋ ಶ್ರೀರಾಮ ಜಯ ೩

## ೨೩೬

ಪರಿಪಾಲಿಸೈ ವರ ವೆಂಕಟೇಶ
ಚರಣಾಬ್ಜಯುಗ ಸ್ಮರಣೆಯನಿತ್ತು ಪ

ದುರಿತಾಧಿದೂರ ಪರತತ್ವಸಾರ
ಕಾರುಣ್ಯಪಾರ ವರನಿರ್ವಿಕಾರ ಅ.ಪ.

ಪರಮಾತ್ಮನೆ ಪೊರೆ ಎನ್ನುತ ಕರಿರಾಜ
ಮೊರೆಯಿಡುತಿರಲು ನೀ
ಗರುಡನ ಏರಿ ತ್ವರೆಯಿಂದ ಬಂದೆ
ಪರಮ ದಯಾಕರ ಶ್ರೀನಿವಾಸ ೧

ಪಾಪಿಷ್ಠನು ಅಜಾಮಿಳನೆಂದು
ಕೋಪದಿ ಯಮ ಭಟರೆಳೆಯುತಿರೆ
ತಾಪಕೆ ತನ್ನ ಪುತ್ರನ ಕೂಗುತಲಿರೆ
ಕೃಪೆಯಿಂದ ನಿಜಪುರಕೆ ಒಯ್ದೆ ೨

ಕನಕಾಚಲನಿಧಿ ಲಕ್ಷ್ಮೀಕಾಂತ
ಪ್ರಣತಾರ್ಥಿಹರ ಆನಂದಕರ
ವನಜಾಸನಾದಿ ಅಮಿಷಪಾಲ
ಸನಕಾದಿ ಯೋಗಿ ಮನ ಕುಮುದಲೋಲ ೩

## ೨೩೬ (ಅ)

ಪಾಲಯ ಶರಣಾಭರಣ ಹರಿ
ಪಾಲಯ ಶರಣಾಭರಣ ಪ

ನರಹರಿ ಶೌರಿ ದುರಿತ ವಿದಾರಿ
ಘೋರಧ್ವಾಂತ ಹರಿ ವೀರ ನರಸಿಂಹ
ತೇನಮೋ ಪರಾತ್ಪರ ಕೃಪಾಕೂಪಾರ ೧

ತಾತನ ಖತಿಗೆ ಭೀತಿಯ ಪಡದೆ
ನಾಥ ಬಾರೆನಲು ಆಮರಸ್ಥಂಭದಲೀ
ತಕ್ಷಣದೊಳು ಮೈದೋರ್ದೆ ೨

ತುಡುಕೀ ಖಳನಾ ಪಿಡಿದೂ ಅವನಾ
ಬಡಿದೂ ನೆಲಕೊರಿಸೇ ನೋಡಿ ಪಾಡೆ
ಭಕ್ತನಾ ಕಾಪಾಡಿದೆ ನಮೋ ಶ್ರೀಕಾಂತ ೩

## ೨೩೭

ಬಂದು ನಿಲ್ಲೊ ಕಣ್ಣ ಮುಂದೆ
ಮಂದಹಾಸ ಮುಖಾ ಹರಿ ಪ

ತಂದೆ ನೀನೆ ತಾಯಿ ನೀನೆ
ನಂದದಾಯಕನೆ ಹರಿ ಅ.ಪ.

ಬಾರೊ ಶೌರಿ ಬಾ ಮುರಾರಿ
ಬಾರೊ ಭಯಹಾರಿ ಉದಾರಿ ೧

ದುರಿತ ಹರಣ ಪರಮ ಕರುಣ
ಶರಣ ಉದ್ಧರಣ ಹರಿ ೨

ಲಕುಮಿಕಾಂತ ಸಕಲ ಶಕ್ತ
ಅಕುಟಿಲಾತ್ಮ ಹಿತ ಹರಿ ೩

## ೨೩೮

ಬಾ ಬಾ ಬಾ ಬಾ ಭಕ್ತಾಧಾರ ಬಾ ಬಾರೊ ಶ್ರೀಧರ ಪ

ಬಾ ಬಾ ಬಾರೆಂದು ಬೇಡಲು ಪ್ರಹ್ಲಾದ
ಕೋರಿದ ಕಂಬದಿ ತೋರಿ ಬಂದೆ ಹರಿ ಅ.ಪ.

ಎಲ್ಲಿಹ ನಿನ್ನ ಹರಿಯ ತೋರೊ ಕೊಲ್ಲುವೆನೆನಲಾ
ಖುಲ್ಲ ದೈತ್ಯನ ಉದರವ ಸೀಳಿ ಕರುಳನು ಚೆಲ್ಲಿ
ಎಲ್ಲೆಲ್ಲಿ ನೋಡಲು ನೀನಿಲ್ಲದಿಲ್ಲವೆಂಬ
ಸೊಲ್ಲು ನಿಜಕೆ ತಂದ ಬಲ್ಲಿದ ಹರಿಯೆ ೧

ಸರ್ವಾಧಾರನೆ ಸರ್ವೋತ್ತಮನೆ ಸರ್ವಕಾರಣನೆ
ಸರ್ವೇಶ ಬಂಧು ನೀ ಸಲಹೆಂದು ಕರಿಮೊರೆಯಿಡಲಂದು
ಸರ್ವತ್ರಿದಶರು ಬೆದರುತ ನೋಡಲು
ಸರ್ವಮೂಲ ನೀನೊರ್ವನೆ ಬಂದ್ಯೆ ೨

ಪಾಪಿ ದುಶ್ಶ್ಯಾಸನ ಸಭೆಯೊಳಗಂದು ನಿರಪರಾಧಿನಿ
ದ್ರೌಪದಿಯನ್ನು ಹಿಡಿದೆಳತಂದು ಹಿಂಸಿಸುತಿರಲಂದು
ಹೇ ಪರಮಾತ್ಮನೆ ನೀ ಪಾಲಿಸು ಎನೆ
ಆಪತ್ತಿಗೊದಗಿದ ಭೂಪ ಶ್ರೀಕಾಂತನೆ ೩

## ೨೩೯

ಬಾರೊ ಬಾರೊ ಬಾರೊ ಶ್ರೀಹರಿ ಭಕ್ತರಾಧಾರಿ ಪ

ನಿಗಮವನ್ನು ಅಜಗಿತ್ತೆ
ನಗವ ಬೆನ್ನಲಿ ಪೊತ್ತೆ
ನೆಗಹಿ ಧರಣಿಯನು ಇತ್ತೆ
ಮಗುವ ಪೊರೆದೆ ಸುಗುಣ ಹರಿಯೆ ೧

ಪದದಿ ಗಂಗೆಯನ್ನು ಪಡೆದೆ
ಬುಧರಿಗೊಲಿದು ಕೊಡಲಿ ಪಿಡಿದೆ
ಸುದತಿ ನೆವದಿ ಖಳರ ಬಡಿದೆ
ಒದಗಿ ಅಕ್ಷಯವಿತ್ತೆ ಹರಿಯೆ ೨

ದುರಳ ತ್ರಿಪುರರನ್ನು ಗೆಲಿದೆ
ಭರದಿ ಯವನ ಬಲವ ಮುರಿದೆ
ಗರುಡಾಚಲದಿ ನಿಂತು ಭಕ್ತರ
ಪೊರೆವ ಲಕ್ಷ್ಮೀಕಾಂತ ಹರಿಯೆ ೩

## ೨೩೯ (ಅ)

ಬಾರೋ ವರಶೂರ ಕುಮಾರ ಸುಂದರಾಕಾರ ಪ

ಪರಾತ್ಪರ ಕೃಪಾಕರ ಸುರೇಶ್ವರ ಹಿತಕರ ಅ

ವೇದವ ತಂದಿತ್ತನೆ ಭೂಧರವೆತ್ತಿದನೆ
ಮೇದಿನೀ ಸಾಧಕನೆ ಅದ್ಭುತ ವಿಕ್ರಮನೆ ೧

ವಾಸವ ವಂದಿತನೆ ಭೂಸುರ ವರದನೆ
ಪಾಶೀನುತಮಹಿಮನೆ ಕೇಶವನೆ ದೇಶಿಕನೆ ೨

ವ್ಯಾಕುಲ ಕಳೆವನೆ ಕಾಕೋದರಶಯನನೆ
ಸಾಕುವ ಶ್ರೀಕಾಂತನೆ ಏಕಾ ಮೇವಾ ದ್ವಿತೀಯನೆ ೩

## ೨೪೦

ಮರೆವರೇನೊ ರಾಮ ನಿನ್ನ ಚರಣ ಸೇವಕನನ್ನು
ಪರರಿಗೊಪ್ಪಿಸಿ ಹೀಗೆ ಪ

ಪರಮ ದಯಾನಿಧಿ ಅಲ್ಲವೆ ಮುನ್ನ
ಶರಣರ ಪಾಲಿಸಲಿಲ್ಲವೆ ಇದು
ಸರಿಯೇನೊ ಜನ ನಗರೇನೊ ಇನ್ನು
ಧರಣಿಯೊಳ್ ನಾನೇನು ಭಾರವೆ ದೂರವೆ ಅ.ಪ.

ಗತಿಹೀನರಿಗೆ ನೀ ಗತಿಯೆಂದು । ನೀನೆ
ಪತಿತರ ಪತಿಕರಿಸುವನೆಂದು
ಕೇಳಿ ಬಂದೆನ್ನೈ ಭವದಿ ನೊಂದೆನ್ನೈ ಮುಂದೆ
ಗತಿದೋರೆಂದು ಸಾರಿದೆ ಚೀರಿದೆ ದೂರಿದೆ ೧

ದೋಷರಾಶಿಗಳೆಲ್ಲ ಅಳಿಸಯ್ಯ
ವಿಷಯ ವಾಸನೆ ವಿಷವೆಂದು ತಿಳಿಸಯ್ಯ । ನಿನ್ನ
ದಾಸಾನುದಾಸ ದಾಸನು ಎನಿಸಿ । ಪರಿ–
ಪೋಷಿಸಬೇಕಯ್ಯ ದಮ್ಮಯ್ಯ ಎಮ್ಮಯ್ಯ ೨

ಏನು ಸಾಧನವನ್ನು ನಾ ಕಾಣೆ । ನಿನ್ನಾ–
ಧೀನದವನು ನಾ ನಿನ್ನಾಣೆ
ದೀನ ಬಂಧುವೆ ದಯಾಸಿಂಧುವೆ
ನಿನ್ನ ಪರಮಾನಂದ ಮೂರ್ತಿಯ ತೋರೋ ಶ್ರೀಕಾಂತನೆ ೩

## ೨೪೧

ಮನ್ನಿಸೆನ್ನ ವೆಂಕಟರನ್ನ ಅನ್ಯಥಾ ಗತಿಗಾಣೆ ನಾ ಪ

ಹಲವು ಜನುಮದಿ ಬಂದೆ ಬಲು ಪರಿಯಲಿ ನೊಂದೆ
ತೊಳಲಿ ಬಳಲಿ ನಿಂದೆ ಸಲಹೊ ತಂದೆ ೧

ವಾಸವ ವಂದಿತ ಕೇಶವ ಅಚ್ಯುತ
ದಾಸರ ಮನ ಹಿತ ಬಾ ಶಾಶ್ವತ ೨

ಲಕುಮಿಕಾಂತನೆ ಎನ್ನ ಉಕುತಿ ಲಾಲಿಸಿ ಘನ್ನ
ಭಕುತಿ ಪಾಲಿಸೊ ಮುನ್ನ ಮುಕುತೀಶನೆ ೩

## ೨೪೧ (ಅ)

ಮಾಡುವುದೋ ಕೃಪೆ ದಾಸನೊಳು ರಾಮ
ಮಾಡುವುದೋ ಕೃಪೆ ದಾಸನೊಳು ಪ

ನೋಡ ನೋಡುತ ಕೈಯ್ಯ ಬಿಡುವರೆ
ಬೇಡ ಬೇಡಿಕೊಂಬೆನು

ರೂಢಿಯೊಳು ನಿನ್ನಂಥ ಕರುಣಿಯ
ನೋಡಲಿಲ್ಲವೋ ಎಲ್ಲಿಯು ಅ

ಬಂದೆನೋ ನಾನಾ ಜನ್ಮದಲೀ । ರಾಮ
ನೊಂದೆನೋ ನಾ ಬಹು ಭವಣೆಯಲೀ
ದ್ವಂದ್ವ ದುಃಖದಿ ಕಂದಿ ಕುಂದುತ ಮುಂದುಗಾಣದೆ ಕೆಟ್ಟೆನೋ
ಕಂದನೆನ್ನುತ ಬಂದು ಪೊರೆ ಪರಮಾತ್ಮ ನಂಬಿದೆ ನಿನ್ನನು ೧

ದಾನ ಧರ್ಮಗಳ ನಾನರಿಯೆ । ರಾಮ
ಮೌನ ಮಂತ್ರಗಳ ನಾನರಿಯೆ
ಧ್ಯಾನ ಧಾರಣ ಜ್ಞಾನಸಾಧನವೇನೊಂದನು ಅರಿಯೆ
ಹಾನಿಯಿದ ನಾನೇನನೊರೆಯಲಿ ಮಾನನಿಧಿ ನಿನ್ನವನು ನಾ ೨

ಕಾಮಿನಿ ಕಾಂಚನ ಭೂಮಿಗಳ । ರಾಮ
ಕಾಮಕೆ ಸಿಕ್ಕಿದೆನೋ ಬಹಳ
ನೇಮ ನಿಷ್ಠೆಗಳೇನೂ ಇಲ್ಲದೇ ತಾಪದಿ ನಾ ಕೆಟ್ಟೆನೋ
ನಾಮಸುಧೆಯ ಪಾನ ಕರುಣಿಸು ಪ್ರೇಮದಲಿ ಶ್ರೀಕಾಂತನೇ ೩

## ೨೪೨

ಮುರಹರ ನಗಧರ ಪಾಹಿಮಾಂ ಕೃಷ್ಣ ಪ

ಪರಮ ದಯಾಕರ ಪಾಹಿಮಾಂ ಕೃಷ್ಣ ಅ.ಪ.

ಶರಣಾಗತ ಜನ ಪರಿಪಾಲಕ ನಿನ್ನ
ಚರಣ ಸುಸೇವೆಯ ನೀಡೋ ಕೃಷ್ಣ ೧

ಭಕ್ತವತ್ಸಲ ಭವನಾಶನ ಸರ್ವ
ಶಕ್ತ ನೀನಲ್ಲದಿನ್ಯಾರೋ ಕೃಷ್ಣ ೨

ಲೋಕನಾಥ ಜಗದೇಕ ಪರಾತ್ಪರ
ರಾಕೇಂದು ವದನ ಶ್ರೀಕಾಂತದೇವ ೩

## ೨೪೨ (ಅ)

ಯಾಕೆ ಬಾರದೋ ದಯವು ಶ್ರೀಹರೀ ಪ

ಲೋಕನಾಥ ನಿನಗೆ ಅಹಿತನೆ ನಾನು
ನೂಕದಿರೆನ್ನ ಭವದೀ – ಶ್ರೀ ಹರೀ ೧

ಆರು ನಿನ್ನ ಹೊರತೂ ಪೊರೆವರೋ ಶೌರೀ
ಭೂರಿ ಕರುಣಾಶರಧೀ – ಶ್ರೀ ಹರೀ ೨

ಚಿಂತಿತಾರ್ಥವನು ಕೊಡುವ ಶ್ರೀಕಾಂತ
ಅಂತು ಕೃಪೆಯಿಂ ಪೊರೆಯೋ – ಶ್ರೀ ಹರೀ ೩

## ೨೪೨ (ಆ)

ಯಾದವಕುಲ ದೀಪ ಶ್ರೀಪ
ಯಾದವ ಕುಲದೀಪ ಪ

ವಿಧಿಜನಕ ಮಾಧವ ಪಾಹಿ ಅ

ಶರಣ ರಕ್ಷಕ ಬಿರುದನು ಕೇಳಿ
ಶರಣು ಹೊಕ್ಕೆನೋ ದೇವ ೧

ಭುವನಪಾವನ ತವಪದ ಧ್ಯಾನ
ತವಕದಿ ಪಾಲಿಸೋ ದೇವ ೨

ಲಕುಮೀಕಾಂತನೆ ಸಕಲಕೆ ನೀನೆ
ಮುಕುತಿದಾತನೆ ದೇವ ೩

## ೨೪೩

ರಕ್ಷಿಸು ಕಮಲಾಕ್ಷ ಶ್ರೀ ವಕ್ಷ ಪ

ರಕ್ಷಾ ಶಿಕ್ಷಾಶ್ರಿತಜನ ಸಂರಕ್ಷ
ಅಕ್ಷಯ ಸುರಪಕ್ಷ ಅಧ್ಯಕ್ಷ ಅ.ಪ.

ಪ್ರಾಚೀನ ಕರ್ಮಾಬ್ಧಿ ವೀಚಿಯೊಳಗೆ ಸಿಕ್ಕಿ
ಪೇಚಾಡುತಲಿರೆ ತೋರದು ಯೋಚನೆ
ಶ್ರೀ ಚರಣಕೆ ಶಿರಬಾಗುವೆ ಶ್ರೀಕರ
ಸೂಚಿಸಿ ಘನ ಭಕ್ತಿ ವಿರಕ್ತಿ ೧

ಆರ್ತ ಬಾಂಧವನೆಂದು ಕೀರ್ತಿ ಪೊತ್ತವನೆಂದು
ಅರ್ತಿಯಿಂದಲಿ ಬಂದೆ ಸುತ್ತುತೆ ತಂದೆ
ಕೀರ್ತಿಯ ಉಳುಹಿಕೊ ಕೀರ್ತಿಯ ತಂದುಕೊ
ಭಕ್ತವತ್ಸಲ ಸ್ವಾಮಿ ಸುಪ್ರೇಮಿ ೨

ಜನನಿ ಜನಕರು ಅನುಜಾ ತನುಜರು
ಅನುವಾಗಿದ್ದರೆ ಎಲ್ಲ ನಮ್ಮವರೆ
ಅನುವು ತಪ್ಪಿದರಾರು ಕಣ್ಣಲಿ ನೋಡರು
ಅನಿಮಿತ್ತ ದಯವಂತ ಶ್ರೀಕಾಂತ ೩

## ೨೪೪

ರಕ್ಷಿಸೆನ್ನ ಪಕ್ಷಿವಾಹನ ಅಕ್ಷಯ ಗುಣಪೂರ್ಣ ಲಕ್ಷ್ಮೀರಮಣ ಪ

ಕುಕ್ಷಿಯೊಳಗೆ ಜಗವಿಟ್ಟು ರಕ್ಷಿಪ ಸ್ವಾಮಿ
ಈಕ್ಷಿಸಿ ಕರುಣ ಕಟಾಕ್ಷದಿ ಸತತ ಅ.ಪ.

ಏಸೇಸು ಕಲ್ಪದಲ್ಲೂ ಈಶ ನೀನಿಹುದಯ್ಯ
ದಾಸರು ಜೀವರ್ಕಳು ಕೃಪಾಳು
ಕ್ಲೇಶ ಸುಖಂಗಳಿಗೆ ನೀನೆ ಸ್ವತಂತ್ರನೆಂದು
ಸೂಸಿ ಪೇಳುತ್ತಲಿಹರು ಸಜ್ಜನರು
ವಾಸುದೇವನೆ ಸರ್ವಾಸುನಿಲಯನೆ
ಏಸೇಸು ಬಂದರು ದಾಸರ ಬಿಡದಿರು
ನೀ ಸಲಹದೆ ಉದಾಸೀನ ಮಾಡಲು
ಆಸರೆ ಯಾರಿನ್ನು ಶಾಶ್ವತ ವಿಭುವೆ ೧

ನಿನ್ನಧೀನನವನು ನಿನ್ನ ದಾಸರ ಸೂನು
ಎನ್ನುವ ಸಥೆಯಿಂದ ಮುಕುಂದ
ನಿನ್ನನೆ ಬೇಡುವೆ ನಿನ್ನನೆ ಕಾಡುವೆ
ಅನ್ಯಥಾ ಗತಿಗಾಣೆ ನಿನ್ನಾಣೆ
ನಿನ್ನ ದಾಸರ ಪದವನ್ನು ಪಿಡಿದು ನಾ
ನಿನ್ನನು ಸ್ತುತಿಸಿದೆನೆನ್ನುತ ಕೃಪೆಗೈದು
ಬಿನ್ನಪ ಲಾಲಿಸಿ ಬನ್ನವ ಕಳೆದು
ಘನ್ನ ಭಕುತಿಯಿತ್ತು ಧನ್ಯನ ಮಾಡೊ ೨

ಶರಣರ ಮಹದೇವ ಶರಣರ ಬಿಡದೆ ಕಾವ
ಶರಣರ ಉದ್ಧಾರ ಗಂಭೀರ
ಶರಣ ರಕ್ಷಾಮಣಿ ಶರಣ ತ್ರಿದಶ ತರು
ಶರಣ ಸುರಧೇನು ಎನಿಸಿನ್ನು

ನಿರುತದಿ ಪೊರೆಯುವ ಬಿರುದಗಳರಿತು
ಶರಣೆಂದು ನಿನ್ನಯ ಚರಣ ಕಮಲವನು
ಮರೆಹೊಕ್ಕೆನು ಕಾಯೊ ಪರಮ ದಯಾಕರ
ಕರಿರಾಜವರದ ಶ್ರೀಕಾಂತ ನಿಶ್ಚಿಂತ ೩

## ೨೪೫

ರಾಧಾಕೃಷ್ಣ ದಯದಿ ನೋಡೆನ್ನ ಪ

ಯದುಕುಲ ಚಂದ್ರ ಬಹುಗುಣ ಸಾಂದ್ರ ಅ.ಪ.

ಗೋಪಿ ಕುಮಾರ ಗೋಪಾಲಧೀರ
ತಾಪ ವಿದೂರ ಕೃಪಾಸಾರ ೧

ಬೃಂದಾವನಾನಂದ ಗೋವಿಂದ ಶೂರ
ಕಂದರ್ಪ ಕೋಟಿ ಸೌಂದರ್ಯಸಾರ ೨

ಏಕಾಂತ ಭಕ್ತ ಪ್ರಿಯ ಲಕ್ಷ್ಮೀಕಾಂತ
ವೈಕುಂಠನಾಥಾಶ್ರಿತ ಪಾರಿಜಾತ ೩

## ೨೪೫ (ಅ)

ರಾಮ ಸದ್ಗುಣ ಧಾಮ – ನಿಸ್ಸೀಮ
ಸುಮನೋರಮ ಪ

ಕಾಮಾರಿಸ್ತುತ ಮಂಗಳನಾಮ ಅ

ಸರಸಾಕಾರ ದುರಿತ ವಿದೂರ
ಕರುಣಾಕರ ಸುಂದರ ಗಂಭೀರ ೧

ದೀನೋದ್ಧಾರ ವಿಪಿನವಿಹಾರ
ದಾನವಹರ ಸುರಕಾವ್ಯ ವಿಚಾರ ೨

ಸೀತಾನಾಥ ವಾನರಯೂಥ
ವಾತಾತ್ಮಜ ನುತ ಶ್ರೀ ಲಕ್ಷ್ಮೀಕಾಂತ ೩

## ೨೪೬

ಸಡಿಲ ಬಿಡದೆ ಕೈಯ ಪಿಡಿದು ಉದ್ಧರಿಸಯ್ಯ
ಬಡವನು ನಾನೈಯ್ಯ – ಕೊಡು ನಿನ್ನ ಸೇವೆಯ ಪ

ಒಡಲಿಗೋಸುಗ ಪರರಡಿಗಳ ಪಿಡಿಯುತೆ
ಕಡು ನೊಂದೆನೊ ಭವ ಕಡಲಿನೊಳಗೆ ಅ.ಪ.

ಪಡೆದು ವರಗಳನು ಕಡು ಖೂಳ ರಾವಣ
ನಡುಗಿಸಿ ಸುರನರ ಭುಜಗರೊಡೆಯರನ್ನು
ಹಿಡಿದು ಮುನೀಶರ ಹೊಡೆದು ಬಡಿದು ಹಿಂಸೆ –
ಪಡಿಸುತ್ತ ಯುವತೇರ ದುಡುಕು ಮಾಡುತ್ತಲಿರೆ
ಗಡಣೆಗಾರದೆ ಪಾಲ ಕಡಲ ತಡಿಗೆ ಬಂದು
ದೃಢ ಭಕ್ತಿಯಲಿ ನಿಂದು ಜಡಜ ಭವಾದ್ಯರು
ಪೊಡಮಟ್ಟು ಬೇಡಲು ಕೊಡುತೆ ಅಭಯವನು
ಮಡದಿಯನೊಡಗೂಡಿ ಪೊಡವಿಗಿಳಿದು ಬಂದೆ ೧

ದಶರಥ ನೃಪ ಸತಿ ಕೌಸಲ್ಯದೇವಿಯ
ಬಸುರೊಳು ಸಂಜನಿಸಿ ದಶದಿಶದೊಳು ಯಶ
ಪಸರಿಸಿ ಅಸುರೆಯ ಅಸುವನು ಹಾರಿಸಿ
ಕುಶಿಕ ಸುತನ ಯಜ್ಞ ಹಸನಾಗಿ ಪಾಲಿಸಿ
ನಸುನಗುತಲಿ ಪದಸರಸಿಜ ಸೋಕಿಸಿ

ಅಶಮವಾಗಿದ್ದ ಮುನಿಸತಿಯನುದ್ಧರಿಸಿ
ಪಶುಪತಿ ಧನುಭಂಗವೆಸಗಿ ಸೀತೆಯ ಕರ
ಬಿಸಜವ ನೊಶಗೈದ ಅಸಮ ಸಮರ್ಥ ೨

ಚಂದದಿಂ ಶಾರ್ಙ್ಗವನೊಂದಿ ಅಯೋಧ್ಯೆಗೆ
ಬಂದು ಪತ್ನಿಯಗೂಡಿ ನಂದದಿಂದಿರುತಿರ್ದು
ಬಂದ ಕಾರ್ಯಕೆ ನೆವ ತಂದು ವನಕೆ ಬಂದು
ನಿಂದಿರೆ ಜಾನಕಿ ಲಕ್ಷ್ಮಣರೊಡಗೊಂಡು
ನೊಂದು ನೃಪನು ದಿನವನ್ನು ಹೊಂದಲು ಕರೆ–
ತಂದು ಭರತನಿಗೆ ಅಂದು ರಾಜ್ಯವನೀಯೆ
ಬಂದೊಲ್ಲದೆ ಬೇಗ ಬಂದು ವಂದಿಸೆ ಪದ
ದ್ವಂದ್ವದ ಪಾದುಕವಂದದಿಂದೊಲಿದಿತ್ತೆ ೩

ಚಿತ್ರಕೂಟಾದ್ರಿಯಿಂದತ್ತ ನಡೆದು ನೆಲ
ಕೊತ್ತಿ ವಿರಾಧನ್ನ ವತ್ಸ ಲಕ್ಷ್ಮಣ ಸೀತಾ
ಯುಕ್ತನು ನೀನಾಗಿ ಪೊರೆಯಲು
ಇತ್ತು ಅಭಯವನ್ನು ಉತ್ತಮ ದಂಡಕದಿ
ಸ್ತುತ್ಯ ಕುಂಭಜ ಮುನಿಯಿತ್ತ ಧನುವನಾಂತು
ಕುತ್ಸಿತ ದನುಜೆಯ ಶಿಕ್ಷಿಸಿ ಖರ ಬಲ
ಕತ್ತರಿಸುತೆ ಬೆನ್ಹತ್ತಿ ಮಾರೀಚನ್ನ
ತುತ್ತು ಮೂರಾಗಿಸಿದತ್ಯಂತ ಶಕ್ತ ೪

ಮೈಥಿಲಿಯಾಡಿದ ಮಾತಿಗೆ ಸೌಮಿತ್ರಿ
ತಾ ತೆರಳಲು ಕಂಡು ಪಾತಕಿ ದಶಮುಖ
ಸಾತ್ವೀಕ ವೇಷದಿ ಸೀತೆಯ ನೊಯ್ದೆನೆಂದು
ಆರ್ತ ಸ್ವರದಿ ಪೇಳಿ ಮೃತಿಯೊಂದೆ ಖಗಪತಿ
ಆತಗೆ ಸದ್ಗತಿಯಿತ್ತು ನಡೆದು ಖಳ

ಪೋತಕ ಬಂಧನ ತೋಳ್ಗಳ ಖಂಡಿಸಿ
ಪ್ರೀತಿಲಿ ಶಬರಿಗೆ ಮುಕ್ತಿಯ ಪಾಲಿಸಿ
ವಾತಸುತನ ಮನ ಪ್ರಾರ್ಥನೆ ಸಲಿಸಿದೆ ೫

ಚರಣದಿಂದೊಗೆದು ದುಂದುಭಿಯ ಶರೀರವನ್ನು
ತರುಗಳೇಳನು ಒಂದೇ ಸರಳಿನಿಂದುರುಳಿಸಿ
ತರಣಿಸುತನ ಭಯ ಹರಿಸಿ ವಾಲಿಯ ಗರ್ವ
ಮುರಿಸಿ ವಾನರ ರಾಜ್ಯ ದೊರೆತನ ಸಖಗಿತ್ತೆ
ಅರಸಿಯನರಸಲು ಸರ್ವದೆಸೆಗೆ ಆ
ತರುಚರ ತತಿಗಳ ಕೆರಳಿಸಿ ಹರುಷದಿ
ಪರನು ಭಕುತನನ್ನು ಕರೆದು ಕುರುಹುಗಳ
ನೊರೆದು ಮುದ್ರಿಕೆಯಿತ್ತೆ ಕರುಣವಾರಿಧಿಯೆ ೬

ತಿಂಗಳು ಮೀರಿತೆಂದು ಅಂಗದ ಪ್ರಮುಖರು
ಕಂಗೆಟ್ಟು ಕುಳಿತಿರೆ ಭಂಗನ ಕಳೆದು ತ –
ರಂಗಿಣಿ ಪತಿಯನ್ನು ಲಂಘಿಸಿ ಹನುಮನು
ಕಂಗೊಳಿಸುವ ಲಂಕಾ ಪ್ರಾಂಗಣದಲಿ ನಿಂದು
ಭಂಗಿಸಿ ಲಂಕಿಣಿಯನು ಸೀತಾಂಗನೆ –
ಗುಂಗುರವಿತ್ತುತ್ತಮಾಂಗದ ಮಣಿಯಾಂತು
ಕಂಗೆಡಿಸ್ಯಸುರರ ಜಂಗುಳಿಯನು ಭಕ್ತ
ಪುಂಗವ ಬರೆ ನಿನ್ನಂಗ ಸಂಗವನಿತ್ತೆ ೭

ಹರಿವರರನು ಕೂಡಿ ಶರಧಿಗೆ ಪಯಣಮಾಡಿ
ಶರಣ ವಿಭೀಷಣನಿಗೆ ಸ್ಥಿರ ಪಟ್ಟವನು ನೀಡಿ
ಭರದಿ ಸೇತುವೆಗಟ್ಟಿ ಅರಿಯ ಪಟ್ಟಣ ಮುಟ್ಟಿ
ಧುರಕೆ ದೂತನ್ನ ಅಟ್ಟಿ ಪರಬಲವನು ಕುಟ್ಟಿ

ಪುರಕೆ ಉರಿಯನಿಕ್ಕಿ ಶರವರ್ಷಂಗಳ
ಕರೆದು ಕರಿ ರಥಾ ತುರಗ ಪದಾತಿಗ-
ಳುರುಳಿಸಿ ದಶಶಿರನುರವನು ಇರಿದು
ಪರಮ ಸಾಧ್ವಿಯ ಕರಸರಸಿಜ ಪಿಡಿದೆ ೮

ಭಕ್ತ ವಿಭೀಷಣಗೆ ದೈತ್ಯಾಧಿಪತ್ಯವಿತ್ತು
ಕೃತ್ತಿವಾಸನ್ನ ಸೇತು ಹತ್ತಿರ ಸ್ಥಾಪಿಸಿ
ಪತ್ನಿ ಸಹೋದರ ಮಿತ್ರ ಭೃತ್ಯರ ಕೂಡಿ
ಉತ್ತಮ ಪುಷ್ಪಕದಿ ಚಿತ್ರಕೂಟಕೆ ಬಂದೆ
ಭಕ್ತನ ಕಳುಹಿ ಸದ್ವೃತ್ತವ ಭರತಗೆ
ಬಿತ್ತರಿಸಿ ಮಹದುತ್ಸವದಿ ಪುರ
ಮತ್ತೆ ಪ್ರವೇಶಿಸಿ ರತ್ನ ಸಿಂಹಾಸನ
ಹತ್ತಿ ಶ್ರೀಕಾಂತನೆ ನಿತ್ಯದಿ ಸಲಹುವೆ ೯

## ೨೪೬ (ಅ)

ಸರಿಯಾರೋ ಜಗದೊಳಗೆ – ಶ್ರೀ ನರಹರಿಗೇ ಪ

ಸುರ ನರೋರಗರೊಳು ಅರಸೀ ನೋಡಲು ಕಾಣೆ ಅ

ಹರಿಯೇ ಮೈದೋರೆಂದು – ಕರೆಯಲಾಕ್ಷಣ ಬಂದು
ತರಳನ್ನ ಸಲಹಿದ ಸರ್ವಾಂತರ್ಯಾಮಿಗೇ ೧

ಕರಿರಾಜ ಕರೆಯಲು ಸುರರೆಲ್ಲಮಿಡುಕಲು
ಗರುಡನ್ನೇರಿ ಬಂದ ಸರ್ವಕಾರ್ಯನಿಗೇ ೨

ರಕ್ಷಕ ಶಿಕ್ಷಕ ಮೋಕ್ಷದಾಯಕ
ಅಕ್ಷಯಾತ್ಮಕನಾದ ಲಕ್ಷ್ಮೀಕಾಂತನಿಗೇ ೩

## ೨೪೬ (ಆ)

ಶ್ರೀ ನಾಥ ಯದುನಾಥ ಖ್ಯಾತಾ
ಶ್ರೀನಾಥ ಯದುನಾಥ ಪ

ದೀನೋದ್ಧಾರಿ ದಾನವ ವೈರಿ
ಮಾನವನಿತ್ತು ಪೊರಿ ಉದಾರೀ ೧

ಜ್ಞಾನಾಜ್ಞಾನಾ ನಿನ್ನಾಧೀನಾ
ಏನೊಂದರಿಯೆ ಹರಿ ಮುರಾರೀ ೨

ಪಂಢರಿನಾಥಾ ಪಾಂಡವ ದೂತ
ತೊಂಡ ವತ್ಸಲ ದಾತಾ ಶ್ರೀಕಾಂತಾ ೩

## ೨೪೭

ಶ್ರೀಶಾ ಹೃಷಿಕೇಶ ಕೇಶವ ವಸುಧಾಧೀಶ ಪ

ಶ್ರೀಶಾ ಹೃಷಿಕೇಶ ಸರಸೀರುಹ ಭವ ಸನ್ನುತ
ಶೇಷಾಚಲ ಸನ್ನಿವಾಸ ಶಾಶ್ವತಾ ಪರಿಪಾಹಿ ಹರೇ ಅ.ಪ.

ದುರಿತ ವಿಭಂಜನ ವಾಮನ ವರ ಸಂಕರ್ಷಣ ಧರಣೀ–
ಧರ ಶ್ರೀಧರ ದೋಷದೂರ ಪರತರ ಪರಮೇಶ
ಪುರುಷೋತ್ತಮ ಅಮಿತ ಸಮ ನರನಾರಾಯಣ ಸುರಗಣ
ಪರಿಪಾಲ ಗಾನಲೋಲ ವರದ ಸುಖಾಸ್ಪದ ವಿಜಯದ ೧

ನರಹರಿ ಮಾಧವ ಮುರಹರ ಶರಣಾಗತ ಜನರಕ್ಷಕ
ವರದಾಯಕ ಭವ ಮೋಚಕ ನಿರುಪಮ ಗುಣಭರಿತ

ಅರುಣಾಂಭೋರುಹಲೋಚನ ಸುರಗಂಗೋದಿತ ಚರಣ
ಕರಿರಾಜವರದಾಚ್ಯುತ ಸ್ವರತಾ ಸ್ವತಂತ್ರ ಸುಚರಿತ ೨

ಜಯ ಜಯ ವೇದೋದ್ಧಾರಕ ಜಯ ಮಂದರ ಗಿರಿಧಾರಕ
ಜಯ ಕಾಂಚನನಯನಾಂತಕ ಜಯ ಮನುಜ ಮೃಗೇಂದ್ರ
ಜಯ ವೈರೋಚನಿ ದರ್ಪಹರ ಜಯ ಭೂಮಿ ಭುಜದಲ್ಲಣ
ಜಯರಾಮ ಕೃಷ್ಣ ನಿಪುಣ ಕಲ್ಕಿ ಹಾ ಶ್ರೀಕಾಂತ ಜಯಜಯ ೩

## ೨೪೮

ಶ್ರೀರಾಮ ಎನ್ನಿರೊ ಶ್ರೀರಾಮ ಎನ್ನಿರೊ ಪ

ದುರಿತ ಪರ್ವತಕೆ ವರವಜ್ರವೆನಿಪುದು ಜಗವರಿಯೆ ಅ.ಪ.

ಶರಣರ ನಿತ್ಯ ಪೊರೆಯುವ ಸತ್ಯ
ತಾರಕ ನಾಮಕೆ ಮತ್ತೊಂದು
ಸರಿಯೆ ಸಾರ ಸಹಸ್ರನಾಮಕೆ
ಶ್ರೀರಘುನಾಥನ ನಾಮವೆಂತೆಂದು
ಸಾರಿ ಮಹೇಶನು ಸುರನರ ವಂದ್ಯನು
ಗಿರಿಜೆಗೆ ಪ್ರೇಮದಿ ಪೇಳಿದನು
ಮರುತಾತ್ಮಜನು ನಿರುತದಿ ಭಜಿಪನು
ಪರಿಪರಿ ಪಾಡಿ ಸುಖಗೂಡಿ ೧

ಪತಿತ ಪಾವನ್ನ ಸತತ ಈ ನಾಮ
ಗತಿಯಿಲ್ಲದವರಿಗೆ ಗತಿ ಈವ ನಾಮ
ಹತವೆ ಮಾಡುತಲಿದ್ದ ಕಿತವನಿಗೊಲಿದು
ಕ್ಷಿತಿಯೊಳು ಮುನಿಪತಿ ಎನ್ನಿಸಿತು
ಪಥದಿ ಪಾಷಾಣವ ಪೆಣ್ಣನು ಮಾಡಿದ
ಅತುಳ ಮಹಿಮನ ಹಿತನಾಮ ೨

ಕುಲ ಶೀಲಗಳನ್ನು ಎಂದೂ ಎಣಿಸನೊ
ಸುಲಭರೊಳಗೆ ಬಲು ಸುಲಭನು ಇವನು
ಕಲುಷದಿ ದೂರನು ಶಬರಿಯ ಫಲವನು
ಮೆಲ್ಲುತೆ ಮುಕ್ತಿಯನಿತ್ತಿಹನು
ಲಲನೆಯ ಕದ್ದೊಯ್ದ ಖಳನ ತಮ್ಮನಿಗೆ
ನೆಲವಿತ್ತ ದಯವಂತ ಶ್ರೀಕಾಂತ ೩

## ೨೪೮ (ಅ)

ಹರಿ ವಿಠಲ – ವಿಠಲ ಜಯ ವಿಠಲಾ
ಹರಿ ವಿಠಲ – ಜಯ ವಿಠಲ ಪ

ಜಯವಿಠಲಾ ನಮೋ ವಿಠಲಾ ಅ

ಹೇ ಮುರಾರೀ ಶ್ರೀ ಹರೀ ಬಾರೈ ಕೃಪಾಶರನಿಧಿ ಶೌರೀ
ಶರಣಾಭರಣನೆಂದೆ ಬಿರುದನ್ನು ಕೇಳಿ ಬಂದೆ
ಅರಿಯೆ ಇನ್ನೊಂದ ತಂದೆ ನೀನಾಗಿ
ಪೊರೆಯೆಂದೆ ಇನ್ನು ಮುಂದೇ ೧

ಇಂದಿರಾ ಮಂದಿರಾ ಹೇ ಸುಂದರಾನಂದ ಕುವರ ವರಾ
ಇಂದೀವರಾಕ್ಷ ನಿನ್ನಾ ಸಂದರುಶನವೆನ–
ಗೆಂದಿಗಾಹುದೋ ಮನವಾ
ನಂದ ಹೊಂದುವುದು ಅಂದೇ ೨

ಸರ್ವೇಶಾ ಶಾಶ್ವತ ಸರ್ವೋತ್ತಮ ಪರಮೋದಾರವರ
ಸರ್ವಕಾರಣ ಕರ್ತಾ ಸರ್ವಸ್ವತಂತ್ರ ಶಕ್ತ
ಸರ್ವತ್ರದಲಿ ವ್ಯಾಪ್ತ
ಸರ್ವಾಂತರ್ಯಾಮಿ ಗುಪ್ತ ಶಿರಿಕಾಂತ ೩

## ೨೪೯

ಆರತಿಯನು ಎತ್ತಿರಮ್ಮ ವರ ಮಹಾಲಕ್ಷುಮಿಗೆ
ಚಾರುಮತಿಗೆ ವರವನಿತ್ತಪಾರ ಕರುಣಾಂಬುಧಿಗೆ ಪ

ಶ್ರಾವಣ ಶುಕ್ರವಾರದಲಿ ಸಾವಧಾನ ಮನದಿ ನಿತ್ಯ
ಸೇವಿಸುವರಿಗೊಲಿದು ಭಾಗ್ಯವೀವ ಮಹಾಲಕ್ಷುಮಿಗೆ ೧

ಹೆತ್ತತಾಯಿ ತನ್ನ ಶಿಶುವನರ್ಥಿಯಿಂದ ಸಲಹುವಂತೆ
ಭೃತ್ಯವರ್ಗವನ್ನು ಪೊರೆದು ನಿತ್ಯಲೋಕ ಮಾತೆಗೀಗ ೨

ಚಿಂತಿತಾರ್ಥನೀವ ಲಕ್ಷ್ಮೀಕಾಂತನುರ ಸ್ಥಳದಿ ನಿಂತು
ದಂತಿವರದನನಂತ ಗುಣಗಳನಂತಗಾಣದಿರುವಳಿಗೆ ೩

## ೨೫೦

ಕಮಲಾಕ್ಷಿ ತಾಯೆ ಕಾಮಿತ ದಾಯೆ
ಕೋಮಲಕಾಯೆ ನಮಿಪೆ ನಾಂ ಪೊರೆಯೆ ಪ

ಕಮಲ ಸುಗಂಧಿನಿ ಕಮಲ ಸುಪಾಣಿ
ಭಾನುಮತಿ ವಿಮಲೆ ಕಮಲೆ ಶೀಲೆ ೧

ಕರುಣ ಕಟಾಕ್ಷದಿ ನಿರುಕಿಸೆ ನೀನು
ನೀರೇರುಹ ಭವನೆ ಅಹನೆ ಕಾಣೆ ೨

ಭ್ರಕುಟಿ ವಿಲಾಸದಿ ಸಕಲರ ಕಾಯ್ವ
ಶ್ರೀಕಾಂತನ ರಮಣಿ ಸುಮಣಿ ತ್ರಾಣಿ ೩

## ೨೫೧

ಮಂಗಳಾರತಿಯನೆತ್ತಿರೆ ನಿತ್ಯ ಸು–
ಮಂಗಳೆಗತಿಶಯದಿ ಪ

ಮಂಗಳಾರತಿ ಎತ್ತಿ ತುಂಗಮಹಿಮ ಶ್ರೀ
ರಂಗನ ರಾಣಿಗೆ ಅಂಗನೆ ತುಳಸಿಗೆ ಅ.ಪ.

ಕಡಲೊಳು ಸುಧೆ ಹಿಡಿದು । ಬಂದನು
ಕಡು ಕರುಣಿಯು ಒಲಿದು
ಕುಡಿಗಣ್ಣಿನ ಜಲ ಸಡಿಲಲು ಕಲಶದಿ
ಒಡನೆ ಜನಿಸಿದಂತ ಮಡದಿ ಶ್ರೀ ತುಲಸಿಗೆ ೧

ಸುರರು ಪೂಮಳೆಗರೆಯೆ । ಹರುಷದಿ
ಹರಿಯು ಕರವ ಪಿಡಿಯೆ
ವರವನು ಪಡೆದಳು ಶರಣರ ಪೊರೆಯಲು
ಧರೆಯೊಳು ಬಂದಿಹ ಕರುಣಿ ಶ್ರೀ ತುಳಸಿಗೆ ೨

ಭಕುತಿಯಿಂದಲಿ ನಿತ್ಯ । ಸೇವಿಪ
ಸಕಲ ಜನಕೆ ಸತ್ಯ
ಭಕುತಿ ಮುಕುತಿಯಿತ್ತು ಸುಕೃತರ ಮಾಡುವ
ಲಕುಮಿಕಾಂತನ ಪ್ರೇಮಸಕುತೆ ಶ್ರೀ ತುಳಸಿಗೆ ೩

## ೨೫೨

ಯಾಕೆ ನಡುಗುವೆ ತಾಯಿ ಭೂಕಾಂತೆಯೆ ಪ

ಲೋಕನಾಥನ ರಾಣಿ ಪರಮ ಕಲ್ಯಾಣಿ ಅ.ಪ.

ಬುಧರು ಸನ್ಮಾರ್ಗವನು ಒದರಿ ಬಿಟ್ಟರೆ ತಾಯಿ
ಅದಟರಾದವರು ಗರ್ವದಿ ಮೆರೆವರೆ
ಮದದ ಸಂಪದವು ವೆಗ್ಗಳಿಸಿತೆ ವಣಿಜರಿಗೆ
ಕದನಕೆ ಕಾಲ್ಕೆರೆಯುತಿಹರೆ ಮಿಕ್ಕವರೆಲ್ಲ ೧

ಕುಲಶೀಲಗಳನೆಲ್ಲ ಕೆಡಿಸಿ ನೆಲಗೆಡಿಸಿದರೆ
ಕಳುವು ಹಾದರ ನುಸುಳು ಬಲವಾಯಿತೆ
ಲಲನೆಯರ ವ್ರತನೇಮಕಳಿವು ಬಂದಿತೆ ತಾಯಿ
ಹೊಲಬು ತಪ್ಪಿದೆ ಭಕ್ತಿ ಜಲಜಾಕ್ಷ ಪಥದಿ ೨

ಆವ ಕಾರಣದಿಂದುದಯಿಸಿತು ಈ ಚಿಂತೆ
ಆವನಿಂದಾಯ್ತಮ್ಮ ಈ ಉಬ್ಬಸ
ದೇವಿ ನೀ ದುಃಖಿಸುವ ಬಗೆ ನೋಡಿ ಮನ್ಮನವು
ಬೇವುದಿಗೊಳುತಿಹುದು ಶ್ರೀ ಕಾಂತನಾಣೆ ೩

## ೨೫೩

ವಾರಿಧಿ ಸಂಭೂತೆ ಚಾರು ಗುಣಾನ್ವಿತೆ ಪ

ನಾರಾಯಣಿಗೆ ಪಾಲಿಸೆ ಮಾತೆ ಅ.ಪ.

ಸತ್ಯ ಸುಖಾಸ್ಪದೆ ಭೃತ್ಯರ ಬಿಡದೆ
ನಿತ್ಯದಿ ಪೊರೆವುದೆ ಅತಿಶಯ ಬಿರುದೆ ೧

ನಿನ್ನ ಕೃಪಾಶ್ರಯ ಪಡೆಯೆ ಮಹಾಶಯ
ನಿನ್ನ ನಿರಾಶ್ರಯ ತಾಪತ್ರಿತಯ ೨

ಲಕ್ಷುಮಿ ಕಾಂತನ ವಕ್ಷ ನಿವಾಸಿನಿ
ಈಕ್ಷಿಸಿ ಕರುಣದಿ ರಕ್ಷಿಸು ಜನನಿ ೩

## ೨೩೪

ಭಾರತಿ ರಮಣ ಪಾಲಿಸು ಕರುಣ
ಶ್ರೀರಾಮನ ಪದ ನಿಜ ಶರಣ ಪ

ಕೌರವಧಾರಣ ಭವ ಸಂಹಾರಣ
ಪರಾಶರ ಮತ ವಿಸ್ತರಣ ಅ.ಪ.

ತ್ರೇತೆಯೊಳಂಜನೆ ಉದರದಿ ಜನಿಸಿ
ಸೀತಾನಾಥನ ಪಾದಕೆ ನಮಿಸಿ
ದೌತ್ಯವ ವಹಿಸಿ ಕೀರ್ತಿಯ ಗಳಿಸಿ
ಭಕ್ತಾಗ್ರಣಿಯೆನಿಸಿದ ಗುರುವೆ ೧

ದ್ವಾಪರದಲಿ ನೃಪ ಕುಲದಲಿ ಬಂದು
ಪಾಪಿ ಮಾರ್ಗದ ಪ್ರಮುಖರ ಕೊಂದು
ದ್ರೌಪದಿ ಬೇಡಿದ ಸುಮವನು ತಂದು
ಶ್ರೀ ಪತಿಗರ್ಥಿಯ ಸಲಿಸಿದ ಗುರುವೆ ೨

ಕಲಿಯೊಳು ಕುಜನರ ಮತಗಳ ಜರಿದು
ಸುಲಲಿತ ಭಕ್ತಿಯ ಮತವನು ಒರೆದು
ನೆಲೆಸಲು ಲಕ್ಷ್ಮೀಕಾಂತನ ಮಹಿಮೆಯ
ತುಳುವ ವಿಪ್ರನಲಿ ಉದಿಸಿದೆ ಗುರುವೆ ೩

## ೨೫೫

ಮೂರುತಿಯ ತೋರೋ ಮಾರುತಿ
ಧಾರುಣಿಯೊಳ್ ನೀನೇ ಗತಿ ಪ

ಅಂಜನಾ ಸುಕುಮಾರ ಕಂಜಾಕ್ಷ ಕಿಂಕರ
ಸಂಜೀವ ಗಿರಿಧರ ಅಂಜಿಕೆಯ ಕಳೆವ ಧೀರ ೧

ಎರೆಡು ದಳದವರ ಕರೆದು ಕೌರವನುರ
ಇರಿದು ಕರುಳಸರ ವರಸತಿಗಿತ್ತ ಧೀರ ೨

ಕಾಕು ಮಾಯ್ಗಳ ಮತ ನೂಕಿ ಬಿಸಾಡುತ
ಶ್ರೀಕಾಂತ ಸನ್ಮತ ಕೈಗೊಂಡು ನಿಲಿಸಿದಂಥ ೩

## ೨೫೬

ಹನುಮಂತ ದೇವನ ನೋಡಿ
ಘನ ವಿಜ್ಞಾನ ಧನವನ್ನು ಬೇಡಿ ಪ

ಅನುಮಾನ ಸಲ್ಲ ಸುರಧೇನುವೆನಿಸುವನು
ತನ್ನ ನೆನೆವರಿಗೆ ಅ.ಪ.

ಅಂಜನದೇವಿಯೊಳ್ ಪುಟ್ಟಿ । ಪ್ರ–
ಭಂಜನ ಸುತ ಜಗಜಟ್ಟಿ । ಶ್ರೀ
ಕಂಜನಾಭನನು ಕಂಡು
ಭಜಿಸುತಲಿ ತಾನು ರಂಜಿಪನು ೧

ಪಾಥೋದಿಯನು ನೆರೆದಾಟಿ । ರಘು –
ನಾಥನ ಮಡದಿಗೆ ಭೇಟಿ । ಇತ್ತು

ಖ್ಯಾತ ಲಂಕೆಯನು ವೀತಿ–
ಹೋತ್ರನಿಗೆ ಕೊಟ್ಟ ಬಲುದಿಟ್ಟ ೨

ಸಂಜೀವನಾದ್ರಿಯ ತಂದು । ಕಪಿ
ಪುಂಜವನೆಬ್ಬಿಸಿ ನಿಂದು । ತುಸ
ಅಂಜಕಿಲ್ಲದಲೆ ಅಸುರರನು
ಭಂಜಿಸಿ ನಿಂತ ಜಯವಂತ ೩

ಶ್ರೀರಾಮಚಂದ್ರನು ಒಲಿದು । ಮಹ
ಪಾರಮೇಷ್ಠ್ಯವನೀಯೆ ನಲಿದು । ಮುಕ್ತಾ
ಹಾರ ಪಡೆದ ಗಂಭೀರ
ಶೂರ ರಣಧೀರ ಉದಾರ ೪

ಎಂತೆಂತು ಸೇವಿಪ ಜಂತು । ಗಳಿ
ಗಂತಂತೆ ಫಲವೀವನಿಂತು । ಶ್ರೀ –
ಕಾಂತ ನಾಮವನು
ಆಂತು ಭಜಿಪರಲಿ ಪ್ರೇಮ ಬಹುನೇಮ ೫

## ೨೫೭

ಆರತಿ ಬೆಳಗಿರೆ ಶಾರದೆಗೆ । ಗುಣ
ವಾರಿಧಿ ಕರುಣಾ ನೀರಧಿಗೆ ಪ

ವಾಣಿಗೆ ಬ್ರಹ್ಮನ ರಾಣಿಗೆ ನತ ಗೀ–
ರ್ವಾಣಿಗೆ ಪುಸ್ತಕ ವೀಣಾ ಪಾಣಿಗೆ
ಜಾಣೆಗೆ ತ್ರಿಭುವನ ತ್ರಾಣೆಗೆ ಜಪಸರ ಧಾ–
ರಿಣಿಗೆ ಶುಭ ರೂಪಿಣಿಗೆ ೧

ಶಾರದ ಚಂದ್ರನ ಕಿರಣನ ಪೋಲುವ
ಚಾರು ಶುಕ್ಲಾಂಬರದಿಂದಲಿ ಪೊಳೆವ
ಹಾರ ಮಕುಟ ಪದ ನೂಪುರ ಕಂಕಣ
ಧಾರಿಣಿಗೆ ಅಘ ಹಾರಿಣಿಗೆ ೨

ಸಕಲಾಗಮಗಳನಾಂತಿಹ ಗಣಿಗೆ
ನಿಖಿಲ ಕಲೆಗಳನು ಕಾದಿಹ ಫಣಿಗೆ
ಭಕುತರ ಪಾಲಿನ ಚಿಂತಾಮಣಿಗೆ
ಶ್ರೀಕಾಂತನಾತ್ಮಜನರಗಿಣಿಗೆ ೩

## ೨೫೮

ಓ ದೇವ ನೀನೆಂಥ ಕರುಣಾಳೊ
ಮಾದೇವ ನೀನೆಂಥ ಕರುಣಾಳೊ ಪ

ಕಾಲನ ಕಾಲಲೊದ್ದು ಬಾಲನಿಗಾಯುಷ್ಯ
ಪಾಲಿಸಿದೆ ನೀನೆಂಥ ಕರುಣಾಳೊ ೧

ಸುರೇಂದ್ರ ಪ್ರಮುಖರ ಪೊರೆಯಲು ಗರಳವ
ಕೊರಳೊಳು ಧರಿಸಿದೆ ಕರುಣಾಳು ೨

ಘೋರ ಭವಾಂಬುಧಿ ತಾರಣೋಪಾಯವ
ಬೀರಿದೆ ಜಗಕೆಲ್ಲ ಕರುಣಾಳು ೩

ಕ್ಷೀರವ ಬೇಡಲು ಕ್ಷೀರೋದಧಿಯನಿತ್ತೆ
ಪೋರನಿಗೆ ಇನ್ನೆಂಥ ಕರುಣಾಳು ೪

ಶ್ರೀಕಾಂತ ಹಿತ ಸಖ ಶ್ರೀಕಂಠ ನಿನ್ನಂಥ
ನಾ ಕಾಣೆ ಧರೆಯೊಳು ಕರುಣಿಗಳ ೫

# ೨೫೯

ಕಾಪಾಡು ಎನ್ನನು ಕೃಪಣ ವತ್ಸಲ ನಿನ್ನ
ಶ್ರೀಪಾದಾರ್ಚನೆಯನಿತ್ತು ಪ

ಅಪಾರ ಜನುಮದ ಪಾಪೌಘ ಬೆನ್ನಟ್ಟಿ
ತಾಪಗೊಳಿಸುತ್ತಿದೆ ಈ ಪರಿಭವದೊಳು ಅ.ಪ.

ಪತಿತ ನಾನಾದರೂ ಪತಿತ ಪಾವನ ನೀನು
ಪಶುಪತಿ ಪಾಪಹರ
ಗತಿಹೀನರಿಗೆ ನೀನೆ ಗತಿದರ್ಶಕನೆಂದು
ತುತಿಸುತ್ತಿಹುದು ವೇದತತಿ ಸಮ್ಮತವಾಗಿ ೧

ಭವಭವದಲಿ ಬಂದು ಬವಣೆಗಳಲಿ ಬೆಂದು
ಬಳಲಿದೆ ಭಕ್ತ ಬಂಧು
ಭವಹರ ನೀನೆಂಬುದನು ಭವಿಗಳಿಂ ನಿತ್ಯ
ಶ್ರವಣದಿ ಕೇಳಿ ನಿನ್ನವರವನೆನಿಸಿದೆ ೨

ಗೌರಿ ಮನೋಹರ ಗೌರಾಂಗ ಭಕ್ತರು
ದ್ಧಾರಿಯೆ ಶೂಲಧರ
ಸಾರಿದೆ ನಿನ್ನಂಘ್ರಿವಾರಿಜಯುಗಳವ
ಕಾರುಣ್ಯದಲಿ ನೋಡು ಅಭಯವ ನೀಡು ೩

ಮುಪ್ಪುರಹರ ಮುಕ್ಕಣ್ಣ ಗಂಗಾಧರ
ಮೃತ್ಯು ಮೃತ್ಯುವೆ ಶಂಕರಾ
ಸರ್ಪಭೂಷಣ ಅಪಮೃತ್ಯು ನಿವಾರಣ
ಕಪ್ಪುಗೊರಳ ಕೃತ್ತಿವಾಸ ಸುರೇಶ ೪

ಅಜ ಸಂತನಧ್ವರ ಭಜನೆಯ ಕೆಡಿಸಿದ
ವಿಜಯ ವಿಗ್ರಹ ಶರೀರ
ಸುಜನರ ಹೃದಯಾಂಬುಜದಲ್ಲಿ ಮಿನುಗುವ
ರಜದೂರ ಶ್ರೀಕಾಂತ ನಿಜಭಕ್ತ ಗುರುವರ ೫

## ೨೬೦

ರಕ್ಷಿಸು ಪರಮೇಶ್ವರ ದೇವ ಸಂ–
ರಕ್ಷಿಸು ಪರಮೇಶ್ವರ ದೇವ ಪ

ಗಂಗಾಧರ ಜಟಾಜೂಟ ಮನೋಹರ
ರಂಜಿತ ಕೇಶಾಲಂಕೃತ ಶಶಿಧರ
ಭಸ್ಮೋದ್ಧೂಳಿತ ಭವ್ಯ ಶರೀರ
ಆಬ್ಜ ಪ್ರಭಾಕರ ಅನಲ ತ್ರಿನೇತ್ರ
ಸದ್ಯೋಜಾತನೆ ಪರಮ ಪವಿತ್ರ ೧

ಮಂಡಿತ ಹಾಸೋನ್ಮುಖ ಮುಖ ಮಂಡಲ
ಕುಂಡಲಿ ಭೂಷಿತ ಕರ್ಣಕುಂಡಲ
ವಿಷಧರ ಕಂಧರ ಕಂಧರ ಮಾಲ
ಭಕ್ತಾ ಭಯಕರ ಕರಧೃತ ಶೂಲ
ವಾಮದೇವ ದೇವೋತ್ತಮ ಲೋಲ ೨

ಘೋರ ಕಪಾಲ ಖಟ್ವಾಂಗ ಡಮರುಗ
ಅಕ್ಷಮಾಲ ಪಾಶಾಂಕುಶ ಸಾರಗ
ಖಡ್ಗ ಧನುಶ್ಶರ ಖೇಟಕ ಭುಜಗ
ಮುದ್ಗರ ಮುಖ ಸಾಯಕ ಧೃತಕರ ಜಗ
ದೇಕವೀರ ಅಘೋರನೆ ಸುಭಗ ೩

ಗಜ ಶಾರ್ದೂಲಾ ಜಿನಧರ ಸದ್ಗುಣ
ಅಣಿಮಾದ್ಯಷ್ಟೈಶ್ವರ್ಯ ನಿಷೇವಣ
ಅಂಕಾರೋಹಿತ ಅಗಜಾ ವೀಕ್ಷಣ
ಸನಾಕಾದ್ಯರ್ಚಿತ ಪಾವನ ಚರಣ
ತತ್ಪುರಷನೆ ನಮೋ ಕರುಣಾಭರಣ ೪

ರುದ್ರಾದಿತ್ಯ ಮರುದ್ಗಣ ಸೇವಿತ
ನಂದೀಶಾದಿ ಪ್ರಮಥಗಣ ವಂದಿತ
ನಾರದ ಮುಖ ಸಂಗೀತ ಸುಪ್ರೀತ
ಶ್ರೀಕಾಂತಪ್ರಿಯ ನಿಗಮ ಪರಾರ್ಥ
ವಿಜ್ಞಾತ ನಮೋ ಈಶಾನನೆ ದಾತ ೫

## ೨೬೧

ಶಂಕರ ಲೋಕ ಶಂಕರ ಭವ ಭಯಂಕರ ಪ

ಶಂಕರ ತ್ವತ್ಪದ ಪಂಕಜದಲಿ ಮನ
ಶಂಕೆಯಿಲ್ಲದೆ ಕೊಟ್ಟು ಕಿಂಕರನನು ಪೊರೆ ೧

ಮೃತ್ಯುಪಾಶಕೆ ಸಿಕ್ಕಿ ತತ್ತರಿಸುತಲಿದ್ದ
ಭಕ್ತನ ಸಲಹಿದ ಮೃತ್ಯುಂಜಯ ಸಲಹೆನ್ನ ೨

ವಿಷವು ಆವರಿಸಲು ತ್ರಿದಶರು ಬೇಡಲು
ನಸುನಗುಗಲಿ ವಿಷ ಧರಿಸಿದ ಸದಾಶಿವ ೩

ಶಿವಶಿವಾವಲ್ಲಭ ಭವಾಭವ ಪ್ರಭವನೆ
ಭುವನ ಪವಿತ್ರನೆ ಭವಹರ ಸಲಹೆನ್ನ ೪

ಅಂಬಿಕನಾಥನೆ ನಂಬಿದೆ ನಿನ್ನನೆ
ಶಂಭುವೆ ಭಕ್ತನ ಬೆಂಬಿಡದೆಲೆ ಪೊರೆ ೫

ಅಷ್ಟ ವಿಭೂತದ ಅಷ್ಟಮೂರ್ತಿಯೆ ಪದ
ಮುಟ್ಟಿ ಭಜಿಪ ಮನ ಕೊಟ್ಟು ರಕ್ಷಿಸು ೬

ದಿಗಂಬರ ದಯಾಕರ ಭಗೀರಥ ಹಿತಕರ
ಅಘಹರ ಮೃಗಧರ ಹಗರಣಗೊಳಿಸಿದೆ ೭

ವಿಘ್ನಪ ಜನಕನೆ ಅಜ್ಞತೆ ಬಿಡಿಸಯ್ಯ
ಸುಜ್ಞನೆ ಭವಾಂಬುಧಿ ಮಗ್ನನನುದ್ಧರಿಸಯ್ ೮

ಲಕುಮಿಕಾಂತನ ಪ್ರಿಯಸಖನೆ ಶ್ರೀಕಂಠನೆ
ಭಕುತಿ ಭಾಗ್ಯವನೀಯೊ ಶಕುತ ಬಿಡದೆ ಕಾಯೊ ೯

## ೨೬೧ (ಅ)

ಶಂಭೋ ಅಂಬಾಮನೋಹರ ದೇವ ಮಹದೇವ ಪ

ಘನ ಗಂಭೀರ ನಂಬಿದೆ ಕಾಯೊ ವರವೀಯೋ ಅ

ಸುರನರ ಭುಜಂಗ ಸಂಸೇವ್ಯ ಸುಭಾವ್ಯ
ಸರ್ವಕಾರ್ಯ ಸತತ ಸಹಾಯ
ಧೀರ ಅಘೋರ ರಿಪು ಸಂಹಾರ
ಉದಾರ ದಾತಾರ ದುರಿತವಿದೂರ ೧

ವರದೇಶ ದಿನೇಶ ಪ್ರಕಾರ
ಸರ್ವೇಶ ಕೈಲಾಸ ವರ ಗಿರಿವಾಸ
ಈಶ ಮಹೇಶ ವಿಶ್ವೇಶ ಉಮೇಶ
ದುರ್ವಾಸ ಪರಮ ವಿಲಾಸ ೨

ಶರಣರ ಆಧಾರ ಪರಮಾರ್ಥ ವಿಚಾರ
ಉರಗೇಂದ್ರ ಭೂಷಿತಹಾರ
ಮಾರಸಂಹಾರ ಭವದೂರ ಉದ್ಧಾರ
ಶ್ರೀಕಾಂತ ಪ್ರಿಯ ಮಂದಾರ ೩

## ೨೬೨

ಶಶಿಕಲಾ ಭೂಷಣನೆ ಶಂಕರನೆ ಪ

ಗಂಗಾಧರನೆ ಗೌರೀವರನೆ
ಅಂಗಜಮದಹರನೇ ಶಂಕರನೇ ೧

ಮೃತ್ಯುಂಜಯನೆ ಮುಪ್ಪುರ ಹರನೆ
ಭಕ್ತರ ಪೊರೆಯುವನೆ ಶಂಕರನೆ ೨

ಶ್ರೀಕಾಂತ ಹಿತಸಖ ಏಕಾಂತ ಹೃದಯ
ನೀ ಕರುಣಿಸೊ ಸದಯಾ ಶಂಕರನೆ ೩

## ೨೬೩

ಆರತಿಯನೆತ್ತಿರೆ ನಾರೇರೆಲ್ಲರು ಪ

ಕಾರುಣ್ಯ ಪಾಂಗಳಿಗೆ ಗೌರಿದೇವಿಗೆ ಅ.ಪ.

ದೇವರಾಜ ಸೇವ್ಯಮಾನ ಪಾವನಾಂಘ್ರಿಗೆ
ಜೀವಕೋಟಿಗನ್ನವಿತ್ತು ಕಾವ ದೇವಿಗೆ ೧

ಸರ್ವ ಸೌಭಾಗ್ಯವೀವ ಶರ್ವಜಾಯೆಗೆ
ಪರ್ವತೇಶ ತನಯಳಿಗೆ ಗರ್ವರಹಿತೆಗೆ ೨

ರಕ್ಕೌಘ ಧ್ವಂಸಿನಿಗೆ ದಕ್ಷ ಕನ್ಯೆಗೆ
ಲಕ್ಷ್ಮೀಕಾಂತನ ಭಗಿನಿ ಲಕ್ಷಣಾಂಗಿಗೆ ೩

## ೨೬೪

ಇಂದ್ರಾಕ್ಷಿ ಸಲಹೆ ಬಂದು । ಸಂರಕ್ಷಿಸಿ
ಇಂದ್ರಾಕ್ಷಿ ಸಲಹೆ ಬಂದು ಪ

ಚಂದ್ರಶೇಖರನಂಕ ಸಂಸ್ಥಿತೆ
ಚಂದ್ರ ಬಿಂಬಾನನೆ ದಯಾನ್ವಿತೆ
ಇಂದ್ರ ಮುಖ ಸುರಗಣ ಸಮರ್ಚಿತೆ
ತಂದ್ರ ಪರಿಹೃತೆ ಭಕ್ತತತಿ ಹಿತೆ ಅ.ಪ.

ಅರಿಯದ ತರಳನಮ್ಮ । ನಿನ್ನಂಘ್ರಿ ಸೇವಿಪ
ಮೆರೆವ ಭಾಗ್ಯವ ನೀಡಮ್ಮ । ಮರೆಯದಿರಮ್ಮಾ
ಶರಣ ಜನರನು ಪೊರೆವೆನೆನ್ನುತ
ಕರದಿ ಪಿಡಿದಿಹೆ ಬಿಡದೆ ಉನ್ನತ
ದರವಿಯನು ಸಿದ್ಧಾನ್ನ ಪಾತ್ರೆಯ
ಕರುಣಿ ತ್ರಿಜಗಜ್ಜನನಿ ಸುಗುಣಿಯೆ ೧

ನಿತ್ಯಾನಂದಿನಿ ಮೋಹಿನಿ । ಸುಗತಿ ಪ್ರದಾಯಿನಿ
ಭೃತ್ಯಾನುಗ್ರಹ ಕಾರಿಣಿ । ಬುಧ್ಯಾಭಿಮಾನಿ
ನಿತ್ಯಮಂಗಳೆ ಭೃತ್ಯವತ್ಸಲೆ
ಸತ್ಯರೂಪಿಣಿ ಮೃತ್ಯುನಾಶಿನಿ
ನಿತ್ಯತತ್ವದ ಭಜಿಪ ಸಂಪದ–
ವಿತ್ತು ಪಾಲಿಸೆ ಶ್ರೀ ಕಾತ್ಯಾಯಿನಿ ೨

ಭೀಮಾ ಭೈರವನಾದಿನಿ । ಕುಮಾರ ಜನನಿ
ಕಾಮನಿಗ್ರಹನ ರಾಣಿ । ವರವರ್ಣಿನಿ
ಬ್ರಾಹ್ಮಿ ವೈಷ್ಣವಿ ಬ್ರಹ್ಮಚಾರಿಣಿ
ಚಾಮುಂಡೇಶ್ವರಿ ಕೋಲರೂಪಿಣಿ
ಭ್ರಮರಿ ಶಾಕಾಂಬರಿ ನೃಸಿಂಹಿಣಿ
ಅಮಿತರೂಪಿಣಿ ಅಹಿತ ಮಾರಿಣಿ ೩

ಸರ್ವಮಂಗಳ ಮಾಂಗಲ್ಯೆ । ಸರ್ವಾರ್ಥದೆ
ಶಿವೆ ಶರ್ವನರ್ಧಾಂಗಿಯೆ । ಪರ್ವತನ ತನಯೆ
ಶರ್ವಬ್ರಹ್ಮರ ವರದಿ ಕೊಬ್ಬಿ ಸು–
ಪರ್ವರನು ಕಂಗೆಡಿಸೆ ದನುಜರು
ಸರ್ವಶಕ್ತಳೆ ಮುರಿದು ಖಳರನು
ಉರ್ವಿಭಾರವ ನಿಳುಹಿ ಪೊರೆದೌ ೪

ಅಜಿತೆ ಭದ್ರದೆ ಆನಂದೆ । ನಿನ್ನನು ಬಿಡದೆ
ಭಜಿಪರ ಪೊರೆವಳೆಂದೆ । ನಾನಿಂದು ಬಂದೆ
ಕುಜನಮರ್ಧಿನಿ ಕುಟಿಲ ಹಾರಿಣಿ
ಗಜಗಮನೆ ಗಂಭೀರೆ ಗುಣಮಣಿ
ವೃಜಿನ ಪರಿಹರೆ ವಿಘ್ನಸಂಹರೆ
ನಿಜ ಪದಾಂಬುಜ ಭಜಕನೆನಿಸಿ ೫

ಶಿವದೂತಿ ಪರಮೇಶ್ವರಿ । ರುದ್ರಾಣಿ ಚಂಡಿಕೆ
ಶಿವೆ ಭವೆ ಜ್ಞಾನೇಶ್ವರಿ । ಸೌಂದರ್ಯಲಹರಿ
ಭುವನ ಮೋಹಿನಿ ದೈತ್ಯನಾಶಿನಿ
ನವಿಪ ತಾಪ ಜ್ವರ ನಿವಾರಿಣಿ
ಕವಿಭಿರೀಡಿತೆ ದೇವ ಪೂಜಿತೆ
ವಿವಿಧ ಫಲಗಳ ಒಲಿದು ಕೊಡುವಳೆ ೬

ಶೃತಿ ಸ್ಮೃತಿ ಶ್ರದ್ಧೆ ಮೇಧಾ । ವಿದ್ಯಾಸರಸ್ವತಿ
ಧೃತಿ ಶಾಂತಿ ಕಾಂತಿ ವಾದಾ । ಎನಿಸುತ್ತ ಮೆರೆವ
ವಿತತ ಮಹಿಮಳೆ ವಿಶ್ವತೋಮುಖೆ
ಅತುಳ ಭುಜಬಲೆ ಭದ್ರಕಾಳಿಯೆ
ಪತಿತ ಪಾವನಿ ಸತ್ವಶಾಲಿನಿ
ಸತಿ ಶಿವಪ್ರಿಯೆ ನೀಡಿ ಸುಮತಿಯ ೭

ಅರಿದರಾಂಕುಶ ಮುಸಲ । ಮುದ್ಗರಚಾಪ
ಸರಸಿಜ ಖಡ್ಗಹಲ । ಮಾರ್ಗಣ ಪಾಶ
ಪರಶು ಘಂಟಾ ಶಕ್ತಿ ಪಾತ್ರೆಯು
ವರಗದಾಭಯ ಕರದೊಳೊಪ್ಪುತ
ದುರುಳರನು ಸಂಹರಿಸಿ ಸಂತತ
ಸುರನರೋರಗರನ್ನು ಪೊರೆಯುವ ೮

ಮಾರಿ ಮಸಣಿ ಹೆಮ್ಮಾರಿ । ಕರೆಕರೆದುಗೊಳಿಸುವ
ಕ್ರೂರ ಶಾಕಿನಿ ಡಾಕಿನಿ । ಪೂತಣಿಯೆ ಮುಖರು
ಘೋರ ರೂಪದಿ ಬಂದು ಪೋರರ
ಗಾರುಗೊಳಿಸುತ್ತಿರಲು ತವಪದ
ಸಾರಿ ನೆನೆದರೆ ತೋರಿ ಹಿಮ್ಮಡಿ
ದೂರ ಸರಿವರು ಮುಗಿದು ಕರಗಳ ೯

ತಾಪತ್ರಿತಯ ತಪ್ತರ । ಆಹ್ಲಾದಪಡಿಸಲು
ಗೋಪತಿ ಮುಖವ ತೋರ । ಕೃಪಾಂಬುನಿಧಿಯೆ
ತಾಪಸಾರಾಧಿತ ಪದಾಂಬುಜೆ
ಶ್ರೀಪತಿಯ ಸೊದರಿಯೆ ನೀ ನಿಜ-
ರೂಪುದೋರಲು ಪಾಪತಾಪ ಪ್ರ-
ಳಾಪ ಮಾಡದೆ ರಾಪುಗೈವುದೆ ೧೦

ದುರ್ಗಮ ಸಂಕಟದಿ । ಬಿದ್ದಿಹೆನಮ್ಮಾ
ನಿರ್ಗಮ ಕಾಣೆನಮ್ಮಾ । ಉದ್ಧರಿಸಮ್ಮಾ
ದುರ್ಗದಿಂತಾರಿಸುವೆ ಭಕ್ತರ
ದುರ್ಗೆ ನಾಮಾಂಕಿತದಿ ಎಂಬರು
ಗರ್ಗವಂದಿತೆ ಮುಗಿವೆ ಕರವ ಸು–
ಮಾರ್ಗ ತೋರಿಸೆ ದುರ್ಗೆ ಜನನಿಯೆ ೧೧

ಸುರಾಸುರ ಸಂಗ್ರಾಮದಿ । ಮುರವೈರಿ ದಯದಿ
ಸುರರು ಗೆಲ್ಲರು ಮುದದಿ । ಗರ್ವಿಸಲು ಭರದಿ
ಹರಿಯ ರೂಪಾಂತರದಿ ತೃಣವನು
ಧರೆಯೊಳಿರಿಸುತ ಬಲ ಪರೀಕ್ಷಿಸಿ
ಸುರರು ಜಯಿಸದೆ ಮರುಳರಾಗಲು
ಬರದೆ ಪರತತ್ವವನು ಕರುಣದಿ ೧೨

ಕಿಂಕರ ಶಂಕರಿಯೆ । ಶತ್ರು ಭಯಂಕರೆ
ಓಂಕಾರೆ ಹೂಂಕಾರೆಯೇ । ಸ್ಮಿತ ಅಟ್ಟಹಾಸೆ
ಪಂಕಜಾಂಬಕಿ ರಕ್ತನಯನ ಕ
ಳಂಕಮುಖಿ ಅತ್ಯುಗ್ರವದನೆ ನಿ
ಶ್ಯಂಕ ಬಿಂಕದಿ ಬಂದೆ ಕಾಲದಿ
ಮಂಕುಹರೆ ಸಂಕಟದೆಯೆನಿಸುವೆ ೧೩

ರಕ್ತಬೀಜಾಸುರನ । ರಕ್ತವನು ಹೀರಿದ
ಶಕ್ತಳೆಂದೆನುತ ನಿನ್ನ । ನಂಬಿದೆನು ಎನ್ನ
ಉಕ್ತಿಲಾಲಿಸಿ ಒತ್ತಿ ವಿಘ್ನವ
ಇತ್ತು ಜ್ಞಾನ ವಿರಾಗ ಭಕ್ತಿಯ
ಮುಕ್ತಪಾವನ ಮಾಡಿ ಸಂತತ
ಮುಕ್ತಿಕಾಂತನ ಸ್ಮರಣೆ ಪಾಲಿಸಿ ೧೪

ಮಹಿಷನ ಸಂಹರಿಸಿ । ಮಹಿಯನ್ನು ಪಾಲಿಸಿ
ಮಹಿಸೂರೆ ನೆಲೆಯೆನಿಸಿ । ಪತಿಸಹಿತವಸಿಸಿ
ಮಹಿಪತಿಗಳಾದಿಯಲಿ ಸರ್ವರಿಂ
ಅಹರಹರ್ ಸೇವೆಯನು ಕೊಳುತ
ಮಹಿಮೆ ತೋರುತಿರುವೆ ಪ್ರತಿದಿನ
ಅಹಹ ಬಣ್ಣಿಸಲೊರೆವೆ ನರರಿಗೆ ೧೫

ಚಂಡ ಮುಂಡರ ಮರ್ದಿಸಿ । ಚಾಮುಂಡಿಯೆನಿಸಿ
ಖಂಡೆಯವನು ಝಳಪಿಸಿ । ಪುಂಡರನು ವಧಿಸಿ
ಖಂಡ ಪರುಶುವಿನಂತೆ ಅದಟರ
ರುಂಡಮಾಲೆಯ ಕೊಂಡು ಭೂತಗ-
ಳ್ಹಿಂಡು ಡಿಂಡಿಮ ಡಂಡೆಣಿಸಲು
ತಾಂಡವಾಡಿದ ಚಂಡಕಾಳಿಯೆ ೧೬

ಶುಂಭ ನಿಶುಂಭರನು । ಕುಂಭಿಣಿಗೆ ಕೆಡಹೆ
ಅಂಬರದಲಿ ಸುರರು । ಕುಂದುಭಿಯ ಹೊಡೆಯೆ
ಡೊಂಬ ಕೋಳಾಸುರನ ಸೂಕರ
ಡಿಂಬ ತಾಳುತ ಸೀಳಿ ದೈತ್ಯ ಕ-
ದಂಬವೆಲ್ಲಕೆ ಕಂಭ ಸಂಭವ
ನಿಂಬು ರೂಪವ ನಂಬಿ ತೋರಿದೆ ೧೭

ಸಕಲ ಶಕ್ತ್ಯಾತ್ಮಕಳೆ । ಭುವಿಯಲಿ ಈ ಪರಿ
ಪ್ರಕಟಳಾಗುತ ಖಳರ । ಕಟಕವನು ತರಿದು
ಭಕುತವರ್ಗಕೆ ಬಂದ ಸಂಕಟ
ನಿಕರ ಪರ್ವತ ವಜ್ರವೆನಿಸುತ
ಮುಕುರದಂದದಿ ಪೊಳೆದು ಪೊರೆಯುವೆ
ವಿಕಟನಾಮದಿ ನಿಕಟದಿರುತ ೧೮

ಜ್ಞಾನೇಚ್ಛಾ ಕ್ರಿಯ ರೂಪಳೆ । ನಿನ್ನನು ನುತಿಸಿ
ಆನತಿಸಿದವರಿಗೆ । ಪ್ರಸನ್ನಳಾಗಿ
ಮಾನ ಸತಿಸುತ ಧ್ಯಾನ ಧನಮನೆ
ಜ್ಞಾನ ಭಕ್ತಿ ವಿರಕ್ತಿ ಮುಂತವ
ದೇನು ಬೇಡಲು ಕೊಡುವೆ
ನಿನ್ನ ಸಮಾನರಾರನು ಕಾಣೆ ಜಗದೊಳು ೧೯

ಅಂಗನಾಮಣಿಯರಿಗೆ । ಮಾಂಗಲ್ಯವೃದ್ಧಿಗೆ
ಮಂಗಳಗೌರಿಯೆಂದು । ಪ್ರಸಿದ್ಧಿಗೊಂಡು
ರಂಗುಮಾಣಿಕದ್ಧಸೆಯ ಪೀಠದಿ
ಮಂಗಳದ್ರವ್ಯಗಳಿಂದೊಪ್ಪುತ
ಭೃಂಗಿ ಒಡೆಯನ ಎಡದ ತೊಡೆಯಲಿ
ಮಂಗಳೇಕ್ಷಣದಿಂದ ಕುಳಿತಿಹೆ ೨೦

ವೈದ್ಯ ಜ್ಯೋತಿಷ ಪುರಾಣ । ವೇದಾಂತ ಮುಂತಹ–
ಗಾಧ ಗ್ರಂಥಗಳನು । ನಿಜಪತಿಯ ಮುಖದಿ
ಸಾಧಿಸಿದೆ ಸಜ್ಜನರಿಗೋಸುಗ
ಬೋಧಿಸಿದೆ ಗುಹ ಗಣಪ ಮುಖರಿಗೆ
ಆದಿದೇವನ ಒಲಿಮೆ ಪಡೆಯಲು
ಹಾದಿ ತೋರಿದೆ ಹೇ ದಯಾನಿಧೆ ೨೧

ಅಷ್ಟಬಾಹುಗಳಿಂದಲಿ । ಅಷ್ಟಾಯುಧಂಗಳ
ದಿಟ್ಟತೆಯಿಂ ಧರಿಸಿ । ಅಷ್ಟಾತ್ಮನಂವೆರಸಿ
ಶಿಷ್ಟ ನಾಲ್ಮಡಿ ಕೃಷ್ಣ ಭೂಪನ
ಇಷ್ಟದೇವತೆಯಾಗಿ ನೆಟ್ಟನೆ
ಬೆಟ್ಟದಲಿ ರಂಜಿಸುವೆ ಭಕ್ತರಿಷ್ಟ ಹರಿಸುತ
ಕೊಟ್ಟಭೀಷ್ಟವ ೨೨

ಸಂತರ ನುಡಿಗಳು । ನಾನಾಂತು ನಿನ್ನಯ
ಚಿಂತಿತಾರ್ಥದ ಪದವ । ಸ್ವಾಂತದಲಿ ತಂದು
ಇಂತು ತುತಿಸಿದೆನರಿಯೆನನ್ಯಯಥ
ಪಂಥವನು ಎನ್ನಂತರಂಗವ
ನಂತು ತಿಳಿದಿಹೆ ಜನನಿ ಕೊಡು ಶ್ರೀ-
ಕಾಂತ ಭಕ್ತಿಯ ಮುಂತೆ ಕರುಣದಿ ೨೩

ಬಾಲಕೃಷ್ಣಾಭಿದರ । ಬಾಲಕನು ಲಕ್ಷ್ಮೀ-
ನಾರಾಯಣೆಂಬ್ಹೆಸರ । ತಾಳಿರ್ಪನಿದನು ಶ್ರೀ-
ಲಲಿತೆ ತ್ವದ್ದಯದಿ ರಚಿಸಿದ
ನೀ ಲಲಿತ ಸ್ತುತಿಯನು ಮುದದಲಿ
ಹೇಳಿ ಕೇಳ್ವರು ಸುಖದಿ ಬಾಳುತ
ಲೋಲರಾಗಿಹರೆನುತ ಬೇಡುವ ೨೪

ಮಂಗಳ ಮಹಾಲಕ್ಷ್ಮಿಗೆ । ಜಯ ಜಯ
ಮಂಗಳ ಸರಸ್ವತಿಗೆ । ಮಂಗಳವು ಶಿವೆಗೆ
ಮಂಗಳವೆನ್ನುತ್ತ ಪಾಡುತ
ಮಂಗಳಾರತಿ ಎತ್ತಿ ಮೋದದಿ
ಮಂಗಳಾಂಗಿಯರೆಲ್ಲ ಕರುಣಾ-
ಪಾಂಗ ವೀಕ್ಷಿಸುತಿಹರು ತಾಯೆ ೨೫

## ೨೬೫

ಬೇಡುತಿರ್ದೆನು ಕರುಣದಿ ನೋಡು
ವರವನು ನೀಡು ಪ

ಅನ್ನಪೂರ್ಣೆ ಸುಗುಣಪೂರ್ಣೆ
ನಿನ್ನನು ಹೊರತು ಅನ್ಯರ ಕಾಣೆ ೧

ಶರ್ವಜಾಯೆ ಶುಭ್ರಕಾಯೆ
ಸರ್ವಮಂಗಳೆ ಗುಹ ಗಣಪರ ತಾಯೆ ೨

ಮಾರ ಜನನಿ ಪ್ರಿಯನ ಭಗಿನಿ
ಸಾರಿದ ಶರಣರ ಪೊರೆವ ಭವಾನಿ ೩

## ೨೬೬

ಹಿಮಾಚಲೇಂದ್ರನ ಕುಮಾರಿ ಶಂಕರಿ
ಉಮಾಂಬೆ ಬಾರಮ್ಮ ಪ

ಕುಮಾರ ಶಕ್ರಾದಿ ಸಮಸ್ತ ಸುರಗಣ
ಸಮರ್ಚಿತಾಂಘ್ರಿಯೆ ನಮೋನಮೋ ಎಂಬೆ ಅ.ಪ.

ಬುದ್ಧ್ಯಾಭಿಮಾನಿಯೆ ಸದ್ಯೋಜಾತನ ರಾಣಿ
ಹೃದ್ವ್ಯೋಮದಲಿ ಪೊಳೆದು
ವಿದ್ಯಾ ಬುದ್ಧಿಯನಿತ್ತು ಶುದ್ಧಾತ್ಮನನು ಮಾಡಿ
ಸದ್ಭಕ್ತಿ ಪಂಥದ ಸಿದ್ಧಾಂತ ತಿಳಿಸಮ್ಮ ೧

ಘೋರ ಭವಾಬ್ಧಿಯ ತಾರಿಪ ಸುಲಭದ
ದಾರಿಯ ತೋರೆನುತ
ಮುರಾರಿಯನು ಬೇಡಿ ಶ್ರೀ ರಾಮ ನಾಮದ
ಸಾರಾಮೃತದ ರುಚಿ ಬೀರಿದೆ ಜಗದೊಳು ೨

ಲಕ್ಷಾಘ ಧ್ವಂಸಿನಿ ದಾಕ್ಷಾಯಿಣೀ ಗಣಾ
ಧಕ್ಷನ ವರ ಜನನಿ
ಲಕ್ಷ್ಮೀಕಾಂತನ ಅಪರೋಕ್ಷದಿ ಕಾಂಬುವ
ಸೂಕ್ಷ್ಮವನೊರೆದೆನ್ನ ರಕ್ಷಿಸು ಅಮ್ಮಯ್ಯ ೩

## ೨೬೭

ವಂದಿಸಿ ಬೇಡುವೆ ನವಗ್ರಹರ
ಕುಂದುಗಳೆಣಿಸದೆ ಬಂದು ರಕ್ಷಿಸಲೆಂದು ಪ

ಭಾಸುರ ಸೂರ್ಯನು ಭಾಸಿಸಲಿ ತತ್ವವನು
ಶ್ರೀ ಸಹೋದರ ಚಂದ್ರ ತೋಷವನು
ಸೂಸಿ ಕೊಡಲಿ ಮಂಗಳವನು ಮಂಗಳ
ಲೇಸಾದ ಪಾಂಡಿತ್ಯ ಪಂಡಿತನೀಯಲಿ ೧

ಹಿಂಗದ ಗೌರವ ತುಂಗ ಶ್ರೀಗುರು ಕೊಡಲಿ
ಕಂಗೊಳಿಸುವ ಕವಿತೆ ಕವಿ ಕೊಡಲಿ
ಭಂಗವಿಲ್ಲದ ಸುಖಸಂಪತ್ತು ಶನಿ ಕೊಡಲಿ
ಕಂಗೆಡಿಸುವ ರುಜೆ ರಾಹು ತಪ್ಪಿಸಲಿ ೨

ಹಿಡಿದ ಕೆಲಸದಲ್ಲಿ ಹಿಡಿಸಲಿ ಜಯಧ್ವಜವ
ಬಿಡದಲೆ ಧ್ವಜಿಯು ಸಡಗರದಿ
ಕಡು ನವಗ್ರಹಗಳು ಪಿಡಿಗ್ರಹವಾಗಲಿ
ಕೊಡಲಿ ನವನವ ಸಿರಿ ದೃಢದಿ ದಿನದಿನದಿ ೩

ಕರುಣಿ ಶನೈಶ್ಚರ ತರಣಿ ಕುಮಾರ
ವರಗುಣ ಮಣಿ ಹಾರ ದಾರಿದ್ರ್ಯದೂರ
ಹರಿಸು ಅರಿಷ್ಟವ ಸುರಿಸು ಮನೇಷ್ಟವ
ಎರಗುವೆ ಸಂಕಟಗೊಳಿಸದಿರುತ್ಕಟ ೪

ಸಿರಿ ವಾದಿರಾಜರು ಒರೆದ ಗ್ರಹಸ್ತೋತ್ರವ
ನಿರುತದಿ ಪಠಿಸಲು ಗ್ರಹ ಪೀಡೆಯು

ಸರಿದು ತಾಂ ಪೋಪುದು ಅರಿಯ ನಿಗ್ರಹವಹುದು
ತುರುಗಗ್ರೀವನ ದಯದಿ ಸರ್ವ ಸಂಪದಬಹುದು ೫

ಗೀರ್ವಾಣ ಭಾಷೆಯಲಿರುವ ಈ ಸ್ತುತಿಯನ್ನು
ಚಾರು ಕನ್ನಡ ಗೀತ ರೂಪದಿಂದ
ಸಾರಿದ ಲಕ್ಷ್ಮೀನಾರಾಯಣ ಶರ್ಮನು
ಕೋರುವ ಕೃಪೆಯನ್ನು ಸಾಧು ಸಜ್ಜನರನ್ನು ೬

ನಮೋ ರವಿ ಸೋಮನೆ ನಮೋ ಕುಜಸೌಮ್ಯನೆ
ನಮೋ ಗುರು ಭಾರ್ಗವ ನಮೋ ಶನೈಶ್ಚರನೇ
ನಮೋ ರಾಹು ಕೇತುವೇ ನಮೋ ಮೃತ್ಯುದೈವವೇ
ನಮೋ ಭೂತಗಣನಾಥ ನಮೋ ಲಕ್ಷ್ಮೀಕಾಂತ ೭

## ೨೬೮

ಗುರುರಾಘವೇಂದ್ರರ ಚರಣವ ಸ್ಮರಿಸಿರೊ ಪ

ಗುರುರಾಘವೇಂದ್ರರ ಚರಣವ ಸ್ಮರಿಸಲು
ದುರಿತ ರಾಶಿಗಳೆಲ್ಲ ಕರಗಿ ಪೋಗುವುವು ಅ.ಪ.

ಮಧ್ವ ಮತಾಬ್ಧಿಯೊಳುದ್ಭವಿಸಿದಂಥ
ಶುದ್ಧ ಪೂರ್ಣಿಮ ಚಂದ್ರ ಸದ್ಗುಣ ಸಾಂದ್ರ ೧

ಸುಧೀಂದ್ರ ಯತಿಕರ ಪದುಮ ಸಮುದ್ಭವ
ಸದೆಯ ಸದಾರ್ಚಿತ ಪದ ನುತ ಖ್ಯಾತ ೨

ಬಂದಂಥ ಭಕುತರ ವೃಂದವ ಪೊರೆಯಲು
ಕುಂದದೆ ವರಮಂತ್ರ ಮಂದಿರದೆಸೆವ ೩

ನರಹರಿ ಮುರವೈರಿ ರಘುವರ ವ್ಯಾಸರ
ನಿರುತದಿ ಭಜಿಸುವ ವರಗಳ ಕೊಡುವ ೪

ಸಕಲಾತರ್ಯಾಮಿಯು ಲಕುಮಿಕಾಂತನೆಂದು
ಪ್ರಕಟಿಸಿ ಮೆರೆದರ್ಭಕನಂಶಜರೆಂದು ೫

## ೨೬೮ (ಅ)

ಗುರುರಾಯರ ನಂಬಿದೇ – ಶ್ರೀ ರಾಘವೇಂದ್ರ ಪ

ವರಮಂತ್ರಾಲಯದಲ್ಲಿ ಇರುತ ಸೇವೆಯಗೊಂಬ ಅ

ಗ್ರಾಸ ಬೇಡಿದ ಮುನಿಯಾಶೆಯ ತಣಿಸಿದ
ದಾಶರಥಿಯ ಭಕ್ತ ದೇಶಿಕವರ್ಯರ ೧

ಸಂತಾನಸೌಭಾಗ್ಯ ಚಿಂತಿತಾರ್ಥವನೀವ
ಕಂತುಪಿತನ ಪಾದ ಸ್ವಾಂತದಿ ಭಜಿಸುವ ೨

ಅಜ್ಞಾನ ತಿಮಿರಕ್ಕೆ ಸುಜ್ಞಾನಪರಿಪೂರ್ಣ
ಪ್ರಜ್ಞರ ಗುರುವ್ಯಾಸರಾಜ್ಞಾಧಾರಕರಾದ ೩

## ೨೬೯

ಗುರು ಪುರಂದರರಾಯ ದುರಿತ ತಿಮಿರಕೆ ಸೂರ್ಯ
ಶರಣ ಜನ ಭಾಗ್ಯೋದಯ ಪ

ನರಹರಿಯ ದಾಸಾರ್ಯ ಮರುತಮತ ಪರಿಚರ್ಯ
ಶಿರಬಾಗಿ ಮುಗಿವೆ ಕೈಯ್ಯ ಅ.ಪ.

ಘೋರತರ ಸಂಸಾರ ಸಾರತರವೆಂದರಿದು
ಪಾರಮಾರ್ಥಿಕವ ತೊರೆದು
ಕ್ರೂರ ಕರ್ಮದಿ ನಿಂದು ಭೂರಿ ನರಕದಿ ಬೆಂದು
ಗಾರಾಗಿ ಪೋಪರಂದು
ನಾರದರೆ ನೀವ್ ಬಂದು ನಾರಾಯಣಾ ಎಂದು
ಚೀರಿದಾ ಧ್ವನಿಗೆ ಅಂದು
ಘೋರ ಪಾತಕವೆಲ್ಲ ದೂರಾಗಿ ಸ್ವರ್ಗವನು
ಸೇರಿ ಸುಖಿಸಿದರು ಎಂದು ೧

ಸರಸಿಜಾಕ್ಷನ ಸ್ತುತಿಸಿ ವರ ಪಡೆದು ಧರಣಿಯೊಳು
ಮೆರೆವ ಕನ್ನಡ ದೇಶದಿ
ಸಿರಿಯಿಂದಲೊಪ್ಪುತಿಹ ಪುರಂದರಗಡದೊಳಗೆ
ಇರುವ ಭೂಸುರ ವಂಶದಿ
ಹಿರಿಯ ಸಾವ್ಕಾರ ವರದಪ್ಪನಾ ಸತಿಯ
ವರಗರ್ಭದಲಿ ಜನಿಸಿದಿ
ನರರಂತೆ ಚರಿಸುತ್ತ ಲೌಕಿಕೆ ಮರುಳಾಗಿ
ಸರ್ವಭಾಗ್ಯವ ಗಳಿಸಿದಿ ೨

ಚಿನಿವಾರ ವ್ಯಾಪಾರದನುವರಿತು ನವಕೋಟಿ
ಧನಕಧಿಪನೆಂದೆನಿಸುತ
ಧನಕನಕ ವಸ್ತು ವಾಹನನಿಚಯ ಸಂಗ್ರಹದಿ
ತನುಮನಂಗಳ ಶ್ರಮಿಸುತ
ಕನಸಿಲಾದರು ದಾನಧರ್ಮಗಳ ನೆನೆಯದೆಲೆ
ದಿನಮಾನಗಳ ಕಳೆಯುತ
ಇನಿತು ಮಾಯೆಗೆ ಸಿಲುಕಿ ತನ್ನ ಮರೆದಿರಲಾಗ
ಘನ ಮಹಿಮ ಬಂದ ನಗುತ ೩

ಅಂದು ತಾನೊಲಿದಿತ್ತ ಚೆಂದದಾ ವರಗಳನು
ಇಂದು ಸಲಿಸುವೆನು ಎಂದು
ಬಂದು ಬ್ರಾಹ್ಮಣ ರೂಪದಿಂದ ನಿಮ್ಮನು ಹರಿಸಿ
ಕಂದನಿಗೆ ಮುಂಜಿಯೆಂದು
ಇಂದಿರಾಪತಿ ತಾನು ಮಂದ ಭಾಗ್ಯನ ತೆರದಿ
ಪೊಂದಿ ಯಾಚಿಸಲು ನಿಂದು
ಒಂದು ದುಡ್ಡನ್ನು ಲೋಭದಿಂ ದೆಸೆಯಲದನುಳಿದು
ಮುಂದರಿಯದ ಕರುಣ ಸಿಂಧು ೪

ಅತ್ತಣಿಂ ಶ್ರೀನಿಧಿಯು ಮತ್ತೆ ಮನೆಯೊಳು ನಿಮ್ಮ
ಪತ್ನಿಯನು ಯಾಚಿಸಿದನು
ಉತ್ತಮ ಪತಿವ್ರತೆಯೆ ಪುತ್ರನುಪನಯವೆಂದು
ಇತ್ತ ಬಂದಿಹೆನೆಂದನು
ಚಿತ್ತದೊಲ್ಲಭನ ಸಮ್ಮತಿಯಿಲ್ಲದೆಲೆ ನಾ
ನಿತ್ತು ಕಳುಹೆನು ಏನನೂ
ಅತ್ತ ಗಮಿಸಿರಿ ಎನಲು ಹೆತ್ತತಾಯ್ ನಿನಗಿತ್ತ
ನತ್ತನ್ನು ಕೊಡು ಎಂದನು ೫

ನಾಗಾರಿವಾಹನನ ನುಡಿಯು ಮನಸಿಗೆ ಹಿಡಿಯೆ
ಮೂಗುತಿಯ ತೆಗೆದಿತ್ತಳು
ಭಾಗ್ಯವಂತಳೆ ನಿನಗೆ ಲೇಸಾಗಲೆಂದ್ಹರಿಸಿ
ಸಾಗಿ ಬಂದನು ಇತ್ತಲು
ಹೋಗು ಹೋಗೆಲೊ ಮತ್ತೆ ನೀನೇಕೆ ಬಂದೆನಲು
ಮೂಗುತಿಯ ಕ್ರಯಕೆ ಕೊಡಲು
ಈಗ ಬಂದಿಹೆನೆಂದು ನಿಮಗದನು ತೋರಲು
ಹೇಗೆ ಬಂದಿತು ಎನ್ನಲು ೬

ಮನಕೆ ಸಂಶಯ ಮೂಡಿ ಚಿಂತಿಸುತಿರೆ ನೋಡಿ
ವನಜನಾಭನು ಪೇಳ್ದನು
ನನಗೀಗ ಧನಬೇಡ ನಿನ್ನಲ್ಲಿಯೇ ಇರಲಿ
ಅನುವರಿತು ಬಹೆನೆಂದನು

ಸನುಮತಿಸಿ ವಿಪ್ರನನು ಸಂತೈಸಿ ಪೊರಮಡಿಸಿ
ನಿನಗೆ ನಾಮವನಿಡುವೆನು
ಎನುತ ಹರುಷದಿ ನಗುತ ಮನೆಗೆ ಬರುತಲೆ ಕಂಡೆ
ವನಿತೆಯಾ ಬರಿ ಮೂಗನು ೭

ಮುತ್ತಿನಾ ಮೂಗುತಿಯು ಎತ್ತ ಹೋಯಿತು ಎನಲು
ಮುತ್ತೈದೆ ಮನದಿ ನೊಂದು
ಮತ್ತೆ ಮುರಿಯಿತು ಎಂದು ತತ್ತರಿಸುತಿರೆ ಕಂಡು
ಇತ್ತ ತಾರೆನಲು ನಿಂದು
ಎತ್ತ ಪೋದನೊ ವಿಪ್ರ ಮತ್ತೇನು ಮಾಡುವರೊ
ಕತ್ತಲೆಯು ಮುತ್ತಿ ತಿಂದು
ಭಕ್ತವತ್ಸಲ ನಿಂಗೆ ತೆತ್ತರೀತನುವನ್ನು
ಕುತ್ತು ಪಾರಾಹುದೆಂದು ೮

ತರುವೆನೀಗಲೆ ಎಂದು ತೆರಳಿ ವಿಷವನೆ ಅರೆದು
ಕರದಿ ಬಟ್ಟಲನು ಹಿಡಿದು
ಹರಣದಾಸೆಯ ತೊರೆದು ಸಿರಿವರನ ಪದನೆನೆದು
ಕುಡಿಯುವನಿತರೊಳು ತಿಳಿದು
ಕರುಣದಿಂ ಮೂಗುತಿಯ ಗರಳದಲು ಕೆಡಹಲಾ
ತರುಣಿ ಮಣಿ ಹರುಷದಳೆದು
ಪರಮ ಸಂಭ್ರಮದಿಂದ ಕೊಡಲದನು ನೀವ್ ಕೊಂಡು
ಭರದಿ ಅಂಗಡಿಗೆ ಬಂದು ೯

ಬೀಗ ಮುದ್ರೆಯ ತೆಗೆದು ನೋಡೆ ಭೂಸುರನಿತ್ತ
ಮೂಗುತಿಯು ಕಾಣದಿರಲು
ಹೇಗೆ ಹೋಯಿತು ಎಂದು ಮನದೊಳಚ್ಚರಿಗೊಂಡು
ಬೇಗನೆ ಮನೆಗೆ ಬರಲು
ಕೂಗಿ ಪತ್ನಿಯ ಕರೆದು ಮೂಗುತಿಯು ಬಂದ ಬಗೆ
ಹೇಗೆಂದು ತಿಳಿಸದಿರಲು
ನೀಗುವೆನು ತನುವನೆಂದು ಬೆದರಿಸಲು ಸಾಧ್ವಿಯಾ
ಬಾಗಿ ವಂದಿಸಿ ನುಡಿದಳು ೧೦

ವೃದ್ಧ ಬ್ರಾಹ್ಮಣನಾಗಿ ಹೆದ್ದೈವನೇ ಬಂದು
ಪೊದ್ದಿಯಾಚಿಸಲು ಜರಿದೆ
ಲುಬ್ಧನಾಗತಿಶಯದಿ ಬದ್ಧನಾದೆನು ದ್ರವ್ಯ
ವೃದ್ಧಿಗೋಸುಗವೆ ಬರಿದೆ
ಇದ್ದುದಕೆ ಫಲವೇನು ಸದ್ಧರ್ಮದಲಿ ಕೊಡದೆ
ಉದ್ಧಾರವಿಲ್ಲೆಂದು ತಿಳಿದೆ
ಶುದ್ಧ ಭಾವದಿ ಹರಿಯ ಪದ್ಮಪಾದವ ನೆನೆದು
ಹೆದ್ದಾರಿ ಹಿಡಿದು ನಡೆದೆ ೧೧

ಶಿಷ್ಟ ಬ್ರಾಹ್ಮಣರು ನೆಂಟರಿಷ್ಟ ಮಿತ್ರರಿಗೆ ವಿ-
ಶಿಷ್ಟವನು ದಾನಗೈದು
ನಿಷ್ಠೆಯಿಂ ಮಡದಿ ಮಕ್ಕಳನ್ನೊಡಗೊಂಡು
ವಿಠ್ಠಲನ ಪುರಕೆ ನಡೆದು
ಕಷ್ಟ ನಿಷ್ಠುರ ಸಹಿಸಿ ಕೃಷ್ಣನಂಘ್ರಿಯ ಭಜಿಸಿ
ಇಷ್ಟಾರ್ಥ ಸಿದ್ಧಿಗೈದು
ನೆಟ್ಟನೇ ಹಂಪೆ ಪಟ್ಟಣದಿ ವ್ಯಾಸಮುನಿ
ಶ್ರೇಷ್ಠರಿಂದುಪದೇಶ ಪಡೆದು ೧೨

ಮಧ್ವಮತ ಸಿದ್ಧಾಂತ ಪದ್ಧತಿಯನುದ್ಧರಿಸಿ
ಗದ್ಯಪದ್ಯಗಳಿಂದಲಿ
ಮಧ್ವಪತಿ ಪದಪದ್ಮ ಹೃದ್ಯದೊಳು ನೆನೆನೆನೆದು
ಮುದ್ದಾಗಿ ವರ್ಣಿಸುತಲಿ
ಮದ್ದಳೆಯ ತಾಳ ವೀಣೆಗಳ ಗತಿಹಿಡಿದು
ಶುದ್ಧರಾಗಗಳಿಂದಲಿ
ಉದ್ಧವನ ಸಖನೊಲಿದು ತದ್ಧಿಮಿತ ಧಿಮಿಕೆಂದು
ಪೊದ್ದಿ ಕುಣಿಯುವ ತೆರದಲಿ ೧೩

ಈರೆರೆಡು ಲಕ್ಷಗಳ ಮೇಲೆ ಎಪ್ಪತ್ತೈದು ಸಾ-
ವಿರ ಗ್ರಂಥ ರಚಿಸಿ
ಈರೆರೆಡು ದಿಕ್ಕಿನಲಿ ಚರಿಸಿ ತೀರ್ಥಕ್ಷೇತ್ರ

ಸಾರ ಮಹಿಮೆಗಳ ತುತಿಸಿ
ಶೌರಿದಿನದಲಿ ಮಾಳ್ಪ ವ್ರತನೇಮ ಉಪವಾಸ
ಪಾರಣೆಯ ವಿಧಿಯ ತಿಳಿಸಿ
ತಾರತಮ್ಯವು ಪಂಚ ಭೇದಗಳು ಸ್ಥಿರವೆಂದು
ಸಾರಿ ಡಂಗುರವ ಹೊಯಿಸಿ ೧೪

ತರುಣಿ ಮಕ್ಕಳು ಶಿಷ್ಯ ಪರಿವಾರಗಳ ಸಹಿತ
ಧರೆಯನೆಲ್ಲವ ತಿರುಗುತ
ಕರದಿ ಕಿನ್ನರಿ ಧರಿಸಿ ಸ್ವರವೆತ್ತಿ ಪಾಡುತಿರೆ
ಕೊರಳುಬ್ಬಿ ಶಿರ ಬಿಗಿಯುತ
ಎರಡು ಕಂಗಳು ಧಾರೆ ಸುರಿಯೆ ಬಾಷ್ಪೋದಕವ
ಹರಿ ಮಹಿಮೆ ಕೊಂಡಾಡುತ
ತಿರಿ ತಂದ ಧನದಿಂದ ವಿಪ್ರರಿಗೆ ಮೃಷ್ಟಾನ್ನ
ಹರುಷದಿಂದಲಿ ಉಣಿಸುತ ೧೫

ಗುಪ್ತವಾಗಿರೆ ಕಂಡು ವ್ಯಕ್ತ ಮಾಡುವೆನೆಂದು
ಶಕ್ತನಹ ದೇವ ಬಂದ
ಘೃತದ ಬಿಂದಿಗೆ ತಂದ ತಿಥಿಯ ಓಗರ ಉಂಡ
ಸುತನಾಗಿ ನೀರ ತಂದ
ಯತಿಯ ಪಂಕ್ತಿಗೆ ಭಾಗಿರಥಿಯನ್ನು ತರಿಸಿದ
ಕ್ಷಿತಿಪತಿಗೆ ದೃಢ ತೋರಿದ
ಸತಿಯೆಂದ ಮಾತಿಗೆ ಅತುಳ ಭಾಗ್ಯವನಿತ್ತು
ಪಥದಲ್ಲಿ ತಲೆಗಾಯಿದ ೧೬

ಗಂಗೆ ಗೌತಮಿ ತುಂಗಭದ್ರಾದಿ ದೇವ ತ–
ರಂಗಿಣಿಯರೆಲ್ಲ ಬಂದು
ಅಂಗಳವ ಸಾರಿಸುತ ರಂಗವಾಲೆಯನಿಕ್ಕಿ
ಶೃಂಗಾರ ಗೈವರೆಂದು
ಕಂಗಳಿಗೆ ತೋರಿದನು ಡಿಂಗರಿಗ ಗುರುರಾಯ
ತಂಗಿಯನು ಕರೆದು ತಂದು

ಮಂಗಳಾಂಗನ ಭಕ್ತಪುಂಗವನು ನೀನೆಂದು
ಇಂಗಿತವ ಸಾರ್ದ ಬಂದು ೧೭

ಪುರಂದರುಪನಿಷತೆಂದು ಗುರು ವ್ಯಾಸ ಮುನಿಯಿಂದ
ಮೆರವ ಬಿರುದನ್ನು ಧರಿಸಿ
ಕರೆ ಕರೆದು ಶಿಷ್ಯರಿಗೆ ಒರೆದು ತತ್ವಾರ್ಥವನು
ದುರಿತ ದೂರರ ಮಾಡಿದಿ
ಹರಿದಾಸ ದಾಸ್ಯದಾಸಿರಿಯ ಸೊಬಗನು ಮೆರೆಸಿ
ಧರೆಗೆ ಹರುಷವ ನೀಡಿದಿ
ವರದ ಗುರು ಮಧ್ವಪತಿ ಅಭಿನವ ಪುರಂದರರ
ತರುಣ ಸಂಘವ ನಿಲಿಸಿದಿ ೧೮

ನಿನ್ನಮಹಿಮೆಗಳನ್ನು ಬಣ್ಣಿಸಲು ಎನ್ನಳವೆ
ಘನ್ನ ಕಾರುಣ್ಯ ನಿಧಿಯೆ
ನಿನ್ನ ದಾಸರ ಸೂನುವೆನ್ನುತ್ತೆ ಕೃಪೆಗೈದು
ಎನ್ನೊಳಗೆ ಇದ್ದು ನುಡಿಯೆ
ಧನ್ಯನಾದೆನು ನಾನು ನಿನ್ನವರ ನುಡಿಗ್ರಹಿಸಿ
ಅನ್ಯಥಾವೊಂದನರಿಯೆ
ಬಿನ್ನಪವನವ ಧರಿಸಿ ಸಂಪನ್ನ ಮತಿಯಿತ್ತು
ನಿನ್ನವರೊಳಿಟ್ಟು ಪೊರೆಯೆ ೧೯

'ಶ್ರೀ' ಎನಲು ಶ್ರೀಮಂತ 'ಪು' ಎನಲು ಪುಣ್ಯಾತ್ಮ
'ರಂ' ಎನಲು ರಂಜಿಸುವನು
'ದ' ಎನಲು ದಯವಂತ 'ರ' ಎನಲು ರಕ್ಷಕನು
'ಗು' ಎನಲು ಗುಣವಂತನು
'ರ' ಎನಲು ರಜದೂರ 'ವೇ' ಎನಲು ವೇದವಿದ
'ನ' ಎನಲು ನಯವಂತನು
'ಮಃ' ಎನಲು ಮಹಜ್ಞಾನಿಯಾಗುವನು
'ಓಂ' ಎನಲು ಶ್ರೀಯರಸ ತಾನೊಲಿವನೊ ೨೦

ರಕ್ತಾಕ್ಷಿ ಸಂವತ್ಸರದಿ ಪುಷ್ಯಬಹುಳಮವಾಸ್ಯೆ
ಮಾರ್ತಾಂಡ ಸುತನ ದಿನದಿ
ಸ್ತುತ್ಯ ಅರುಣೋದಯದಿ ನಿತ್ಯಕರ್ಮವಗೈದು
ಸ್ವಸ್ಥದಲಿ ಕುಳಿತು ಮುದದಿ
ಭಕ್ತ್ಯಾತಿಶಯದಿಂದ ಮಾರುತಿಯ ಬಿಗಿಯೊತ್ತಿ
ಚಿತ್ತಜನಪಿತನ ಪದದಿ
ಚಿತ್ತವನು ಸೇರಿಸುತ ಹಂಪೆಯಲಿ ನಿತ್ಯಾತ್ಮ
ಲಕ್ಷ್ಮೀಕಾಂತನ ಸೇರಿದಿ ೨೧

## ೨೭೦

ವ್ಯಾಸರಾಜ ಪರಿವ್ರಾಜ ಮಹಾರಾಜ ।
ನಮೋ ನಮೋ ಗುರುರಾಜ ಪ

ಭಾಸುರ ಪಂಪಾ ತುಂಗಾ ತೀರವಾಸ । ಪಾಲಿಸೊ ತವದಾಸ ಅ.ಪ.

ರತಿಪತಿ ಜನಕನ ವರ ಶಯ್ಯಾಂಶದಲಿ । ವಾಯ್ವಾವೇಶದಲಿ
ಕೃತಯುಗದೊಳು ದಿತಿ ತನಯನ ಪತ್ನಿಯಲಿ ।
ಜನಿಸುತ ಮೋದದಲಿ
ವಿತತನು ವಿಷ್ಣುವು ವಿಶ್ವದೊಳೆನುತಲಿ । ಅತಿಶಯ ಭಕ್ತಿಯಲಿ
ಪಿತಗೆ ತೋರ್ದ ಪ್ರಹ್ಲಾದನೆ ಹಿತದಲ್ಲಿ । ಅವತರಿಸಿದೆ ಇಲ್ಲಿ ೧

ಗುರುವರ ಬ್ರಹ್ಮಣ್ಯ ಮುನಿಕರ ಸಂಜಾತ ।
ಧರೆಯೊಳಗೆ ಪ್ರಖ್ಯಾತ
ಪರಮಾತ್ಮನ ಪದಶರಣ ವ್ಯಾಸಯೋಗಿ । ಯೆನಿಸುತಲಿ ವಿರಾಗಿ
ತರತಮ ಪಂಚಕ ಪ್ರಭೇದವ ಸ್ಥಾಪಿಸಲು ।
ದುರುಳರ ಖಂಡ್ರಿಸಲು
ಪರಿಪರಿ ಶಾಸ್ತ್ರವ ಶ್ರೀ ಪಾದರಾಯರಲಿ । ಓದಿದ್ಯೊ ಭಕ್ತಿಯಲಿ ೨

ವಾದಿರಾಜ ವಿಜಯೀಂದ್ರ ಮುನೀಂದ್ರರಿಗೆ ।
ಪುರಂದರ ಕನಕರಿಗೆ
ಆದರದಿಂದಲಿ ಬೋಧಿಸಿ ತತ್ವವನು । ಮಾಡಿ ಪುನೀತರನು
ವೇದಶಾಸ್ತ್ರ ತರ್ಕಾದಿ ಗ್ರಂಥಗಳಲಿ । ಕೋವಿದರರಸುತಲಿ
ನೀ ದಯದಿಂದಲಿ ಸೇರಿಸಿ ಪರಿಷತ್ತು । ಭಾವಿಸಿ ವಿದ್ವತ್ತು ೩

ಅರ್ಥಿಕಲ್ಪಿತ ವರ ಕಲ್ಪವೃಕ್ಷವಾಗಿ । ನಿತ್ಯದಿ ಮಹಯೋಗಿ
ಪ್ರತ್ಯರ್ಥಿ ಮದಕರಿ ಪಂಚವಕ್ತ್ರನಾಗಿ । ಪ್ರತ್ಯಕ್ಷದಿ ತಾಗಿ
ತುತ್ತು ಮೂರಾಗಿಸಿ ಅವರ ಗ್ರಂಥಗಳನು ।
ಹೊರ ಚೆಲ್ಲುತೆ ನೀನು
ಸ್ತುತ್ಯ ಕೃಷ್ಣ ಭೂಮೀಂದ್ರನ ಕುಹುಯೋಗ । ಪರಿಹರಿಸಿದೆ ಬೇಗ ೪

ವ್ಯಾಸಾಂಬುಧಿಯನು ಕಟ್ಟಿ ಖ್ಯಾತನಾಗಿ । ದಾಸರ ಚನ್ನಾಗಿ
ಪೋಷಿಸುತಲಿ ಶ್ರೀ ಶೇಷಗಿರಿಗೆ ಬಂದು । ಶ್ರೀಶನಲ್ಲಿ ನಿಂದು
ಸಾಸಿರ ನಾಮದಿ ಪೂಜಿಸುತಲಿ ಹರುಷ ।
ಪಡುತ ಹನ್ನೆರಡು ವರುಷ
ದೇಶ ದೇಶದಲಿ ಆಶುಗಿಯನು ನಿಲಿಸಿ । ಶಿಷ್ಯರಿಗನುಗ್ರಹಿಸಿ ೫

ಕಾಶಿ ಗಧಾಧರ ವಾಜಪೇಯಿ ಲಿಂಗ । ಮಿಶ್ರರು ನರಸಿಂಗ
ವಾಸುದೇವ ಪುರಿ ಈಶ್ವರ ಪಂಡಿತರ । ವಾದದಿ ಬಿಗಿವರ
ಜೈಸಿ ತಂದ ಜಯ ಪತ್ರಗಳನು ಮುದದಿ । ಶ್ರೀನಿಧಿಗರ್ಪಿಸಿದಿ
ಶ್ರೀಸತ್ಯಾ ರುಕ್ಮಿಣಿ ವೇಣುಗೋಪಾಲರನು । ಸ್ತುತಿಸಿ ಪಡೆದೆ ನೀನು ೬

ಮಾಯವಾದಿಗಳ ಬಾಯಿಗಳನು ಮುಚ್ಚಿ ।
ನ್ಯಾಯಾಮೃತ ಬಿಚ್ಚಿ
ಧ್ಯೇಯನು ಸದ್ಗುಣ ಪೂರ್ಣ ಹರಿಯೆಂದೆ ।
ಚಂದ್ರಿಕೆಯನು ತಂದೆ
ಆಯದಿ ಬುಧಮನ ತಾಂಡವಾಡುವಂತೆ । ತರ್ಕತಾಂಡವವಿತ್ತೆ
ಕಾಯಜಪಿತ ಶ್ರೀಕಾಂತನ ಸೇವಿಸುತ । ಸುಖಿಸುವೆ ನೀ ಸತತ ೭

## ೨೭೧

ಶ್ರೀ ಪಾದರಾಜರ ಶ್ರೀ ಪಾದಾರ್ಚನೆ ಮಾಳ್ಪ-
ರೀ ಪೃಥುವಿಯೊಳು ಧನ್ಯರು ಪ

ಗೋಪಿನಾಥ ಪದಾಬ್ಜ ಮಧುಪ ದ-
ಯಾ ಪಯೋನಿಧಿ ಸುಜನರಂತಃ-
ಸ್ತಾಪಹಾರಕ ಗೋಪ ಸಕಲ ಕ-
ಲಾಪವಿದ ತಾಪತ್ರಯಾಪಹ ಅ.ಪ.

ಊರೆಲ್ಲಿ ತೋರೆಷ್ಟು ದೂರದಲ್ಲಿಹುದೆಂದು
ಹೀರ ವರ್ಣರು ಬಂದು ಕೇಳಲು
ತೋರಿ ತುರುಗಳ ಗತಿಯ ಸೂರ್ಯನ
ತೋರಿ ತಮ್ಮಯ ಪೋರ ವಯಸನು
ಸೂರಿಗಳೇ ನೀವರಿಯರೆನ್ನುತ
ಚಾರು ಉತ್ತರವಿತ್ತ ಧೀರರ ೧

ಭೂದೇವನನು ಕೊಂದು ಬಾಧೆಗಾರದೆ ನೃಪ
ತಾ ದೈನ್ಯದಲಿ ನಿಂದು ಬೇಡಲು
ಮಾಧವನ ಶ್ರೀ ಪಾದ ಪದ್ಮಾ-
ರಾಧನೆಯ ತೀರ್ಥವನು ಪ್ರೋಕ್ಷಿಸಿ
ಆದರದಲೀಕ್ಷಿಸುತ ಭೂಪನ
ಕಾದ ಕಾಂಚನದಂತೆ ಮಾಡಿದ ೨

ಶಂಕಿಸಿ ದ್ವಿಜವೃಂದ ಆತಂಕಗೊಳ್ಳುತಲಿರೆ
ಮಂಕುಗಳಾ ಡೊಂಕು ತಿದ್ದಲು
ಬಿಂಕದಲಿ ತರಿಸಿ ಗೇರೆಣ್ಣೆ
ಪಂಕದೊಳಗದ್ದಿರುವ ವಸ್ತ್ರಕೆ
ಶಂಖೋದದಿಂ ಕಲುಷ ಹಾರಿಸಿ
ಕಿಂಕರ ಮನಶಂಕೆ ಬಿಡಿಸಿದ ೩

ಹರಿಗರ್ಪಿಸಿದ ನಾನಾ ಪರಿಯ ಶಾಖವ ಭುಂಜಿಸೆ
ನರರು ತಾವರಿಯದೆ ಜರಿಯುತ್ತಿರೆ
ಹರುಷದಿಂದಲಿ ಹಸಿಯ ವಸ್ತುಗ-
ಳಿರವ ತೋರಿಸಿ ಮರುಳ ನೀಗಿಸಿ
ಶರಣು ಶರಣೆನಲವರ ಪಾಲಿಸಿ
ಮೆರೆದ ಬಹು ಗಂಭೀರ ಗುರುವರ ೪

ಘೋರಾರಣ್ಯದಿ ದಿವ್ಯ ಕಾಸಾರ ನಿರ್ಮಿಸಿ
ನಾರಸಿಂಹನ ನೆಲಸಿ
ಊರು ಮಂದಿಯು ನೋಡುತಿರಲಾ-
ವಾರಿ ಮಧ್ಯದಿ ಬಂದ ಗಂಗೆಗೆ
ಸೀರೆ ಕುಪ್ಪಸ ಬಾಗಿನಂಗಳ
ಧಾರೆಯೆರೆದಪಾರ ಮಹಿಮರ ೫

ವ್ಯಾಸರಾಜರ ಫಣಿ ಬಂಧ ನಿವಾರಿಸಿ
ಭಾಷಿಸಿ ಫಣಿಪನ್ನ ತೋಷಿಸಿ
ಕಾಶಿ ಗಯಾ ಶ್ರೀ ಮುಷ್ಣದ್ವಾರಕ
ಶೇಷಗಿರಿ ಮೊದಲಾದ ಪುಣ್ಯ ಪ್ರ-
ದೇಶಗಳ ಸಂಚರಿಸಿ ಭಕ್ತರ
ದೋಷರಾಶಿಯ ನಾಶಗೈಸಿದ ೬

ಕಸ್ತೂರಿತಿಲಕ ಶ್ರೀಗಂಧ ಲೇಪನದಿಂದ
ನಿತ್ಯ ಮಹೋತ್ಸವಗೊಳುತ
ಮುತ್ತಿನಂಗಿಯ ಮೇಲ್ಕುಲಾವಿಯು
ರತ್ನ ಕೆತ್ತಿದ ಕರ್ಣಕುಂಡಲ
ಬಿತ್ತರದಿ ಧರಿಸುತ್ತ ರಥವನು
ಹತ್ತಿ ಬರುತಿಹ ಸ್ತುತ್ಯ ಬಿರುದಿನ ೭

ಆರ ಬೃಂದಾವನ ಸೇವೆಯ ಮಾಡಲು
ಕ್ರೂರ ಭೂತಗಳೆಲ್ಲ ದೂರವು
ಆರ ಬೃಂದಾವನದ ಮೃತ್ತಿಕೆ
ನೀರು ಕುಡಿಯಲು ಘೋರಕ್ಷಯ ಅಪ-
ಸ್ಮಾರ ಗುಲ್ಮಾದಿಗಳ ಉಪಟಳ
ಹಾರಿ ಪೋಪುದು ಆ ಮುನೀಶ್ವರ ೮

ಪರವಾದಿಗಳ ಬೆನ್ನುಮುರಿವ ವಜ್ರದ ಡಾಣೆ
ಶರಣ ರಕ್ಷಾ ಮಣಿಯೆ
ದುರಿತ ತಿಮಿರಕೆ ಮೆರೆವ ದಿನಮಣಿ
ಎನಿಸಿ ಪೂರ್ವ ಕವಾಟ ನಾಮಕ
ಪುರದ ನರಕೇಸರಿ ಕ್ಷೇತ್ರದಿ
ಸ್ಥಿರದಿ ಶ್ರೀ ಕಾಂತನನು ಭಜಿಸುವ ೯

## ೨೭೧ (ಅ)

ಜಯತೀರ್ಥರಾಯಾ ಗುರುವರ್ಯಾ
ಮುಗಿವೆನು ಕೈಯ್ಯಾ ಪ

ತೋಯಜಾಕ್ಷನಂಘ್ರಿ ಪ್ರೀಯ – ಜೀಯ
ಮಳಬೇಡ ನಿಲಯ ಅ

ಮೋದ ತೀರ್ಥಗ್ರಂಥ ಕ್ಷೀರ ವಾರಿಧಿಯನ್ನು ಮಥಿಸಿ ಧೀರ
ಸಾಧುಗಳಿಗೆ ಸುಧೆಯನೆರದೆ – ವಾದಿಗಳೆದಯ ಮುರಿದೇ ೧

ಅದ್ವೈತಾರಣ್ಯದಹನ – ಮಧ್ವ ಪಂಥಸುಜನಸದನ
ಪೊದ್ದಿದೆನೋ ನಿನ್ನ ಚರಣ – ಉದ್ಧರಿಸೋ ದೀನೋದ್ಧರಣ ೨

ಅಕ್ಷಯಮಾಲಾ ದಂಡ ಧಾರೀ – ಭಿಕ್ಷುಶ್ರೇಷ್ಠನಧಿಕಾರಿ
ಅಕ್ಷೋಭ್ಯ ಮುನಿಪ ತನಯ – ಲಕ್ಷ್ಮೀಕಾಂತ ಭಜಕ ಸದಯ ೩

## ೨೭೨

### ಉಗಾಭೋಗ

ಅಟ್ಟಮೇಲೆ ಒಲೆಯು ಉರಿವಂತೆ ಎನಗಿನ್ನು
ಕೆಟ್ಟ ಮೇಲೆ ಬುದ್ಧಿ ಬಂದಿತೀಗ
ಉದ್ದು ಕನ್ನಡಿ ಮೇಲೆ ಉರುಳುವ್ವೋಲ್ ಷಡ್ವರ್ಗ
ಕೆದ್ದು ಬಿದ್ದೆನು ಬರಿಯ ಗರ್ವದಿಂದ
ಮರುಳಹಂಕಾರದಲಿ ಮಾಯಕ್ಕೆ ಸಿಲುಕಿನ್ನು
ಮರೆತುಬಿಟ್ಟೆನು ನಿನ್ನ ಮಹಿಮೆಯನ್ನು
ಜ್ಞಾನ ಸುಖ ಪರಿಪೂರ್ಣ ಏನು ಮಾಡಲು ಇನ್ನು
ಶ್ರೀನಿವಾಸನೆ ನಿನ್ನ ದಾಸ ನಾನು
ಸಾರಿದರ ಬಿಡನೆಂಬ ಬಿರುದನುಳುಹೊ
ಆರಿಗಾರಿಲ್ಲ ನೀನಿಲ್ಲದಿನ್ನು
ನೀರಿನೊಳಗದ್ದು ಕ್ಷೀರದೊಳಗದ್ದು
ಭಾರ ನಿನ್ನದು ಕಾಣೊ ಧೀರ ಶ್ರೀಕಾಂತ

## ೨೭೩

### ಉಗಾಭೋಗ

ಎನ್ನಿಳೆಯೊಳು ನಿಂದು ಎನ್ನ ಬೆಳೆಯ ತಿಂದು
ಎನ್ನ ಕಳೆಯಿಂದ ಬಲಗೊಂಡ ಬಳಿಕ
ಎನ್ನ ಗುಣಗಳ ಮನ್ನಿಸಿ ಪೊಗಳದೆ
ತನ್ನದು ತನ್ನದು ಎಂದು ತನ್ನಲ್ಲಾರೋಪಿಸೆ

ಎನ್ನ ಭಕ್ತರದನೆಂದು ಸೈರಿಪರು
ಅನ್ಯಥಾಜ್ಞಾನಿಗಳಿಗೆ ನರಕವಾಸ-
ವನ್ನು ಮಿಥ್ಯಾಜ್ಞಾನಿಗೆ ಅಂಧತಮವ-
ನಿನ್ನು ಪೊಂದಿಸುವೆನೆಂಬ ಶ್ರೀಕಾಂತನು

## ១೭೪

ಮಧ್ವಮತವ ಪೊಂದಿ ಭಜಿಸಿರೊ । ಉದ್ಧಾರವಾಗಲು
ಮಧ್ವಮತವ ಪೊಂದಿ ಭಜಿಸಿರೊ ಪ

ಮಧ್ವಮತವ ಪೊಂದಿ ಭಜಿಸಿ
ಶುದ್ಧ ಜ್ಞಾನ ಭಕುತಿಗಳಿಸಿ
ಗೆದ್ದು ಈ ಭವಾಬ್ಧಿಯನ್ನು
ಪದ್ಮನಾಭನ ಪಾದವ ತೋರೆ ಅ.ಪ.

ನಾನೆ ವಾಸುದೇವನೆಂದು
ಹೀನ ಪೌಂಡ್ರಕನು ತಾನು
ಏನು ಗತಿಯ ಕಂಡನೆಂದು
ಜ್ಞಾನದಿಂದ ತಿಳಿದು ಮುನ್ನ ೧

ಹರಿಯೆ ಸರ್ವೋತ್ತಮನು । ವಿಶ್ವ
ವಿರುವುದಯ್ಯ ಸತ್ಯವಾಗಿ
ತಾರತಮ್ಯ ಪಂಚಭೇದ
ಸ್ಥಿರವೆಂದು ಸಾರಿಪೇಳ್ವ ೨

ಭಕುತಿಯಿಂದ ಸೇವಿಪ ಜನಕೆ
ಮುಕುತಿಯಲ್ಲಿ ನೈಜ ಸುಖವ
ಲಕುಮಿಕಾಂತನು ಪಾಲಿಪನೆಂದು
ಯುಕುತವಾಗಿ ಪ್ರಕಟಿಸಿದಂತ ೩

## ೨೭೫

ಯಾತಕೆ ಚಿಂತಿಪೆ ಬಿಡು ನೀ । ಪರ
ಮಾತುಮ ಪೊರೆವನು ಶರಣರ ಬಿಡದೆ
ಸಂಶಯ ಬಿಡದೆ
ನಂಬು ನೀ ದೃಢದೆ ಪ

ಧರ್ಮವು ಹೊಸಗಿ ಅಧರ್ಮವು ಮುಸುಗಿರೆ
ಧರ್ಮಸ್ಥಾಪಕ ತಾನು ಒಮ್ಮೆಲೆ ಬಹನೆ
ದೀಕ್ಷೆಯಿಂದಿಹನೆ
ಕೀರ್ತಿಯತಹನೆ ೧

ದುಷ್ಟರ ಶಿಕ್ಷಿಸೆ ಶಿಷ್ಟರ ರಕ್ಷಿಸೆ
ಸೃಷ್ಟಿಗೆ ಬಹೆನೆಂದು ಕೊಟ್ಟಿಹನಭಯ
ಎಂದಿಗು ಮರೆಯ
ನಮ್ಮನು ತೊರೆಯ ೨

ಅನ್ಯ ಚಿಂತೆಯ ಬಿಟ್ಟು ತನ್ನಲೆ ಮನವಿಟ್ಟು
ಸನ್ನುತಿಪರ ಭಾರ ತನ್ನದೆಂದಾತ
ಘನ್ನ ಶ್ರೀಕಾಂತ
ಮುಕ್ತಿಪ್ರಧಾತ ೩

## ೨೭೫ (ಅ)

ಯಾಕೆ ಮೂಕನಾದೆ ಕಾಕು ಮನುಜಾ ಹೀಗೆ ಪ

ಯಾರಿಗೆ ಯಾರಿಲ್ಲ ಸಾರುವೆ ಕೇಳೆಲಾ
ಸ್ಥಿರವಲ್ಲ ಭಾಗ್ಯ ಯೌವ್ವನವೊ ೧

ಮಡದಿ ಮಕ್ಕಳಿಗೆಂದೇ ಒಡವೆ ವಸ್ತ್ರವ ತಂದೆ
ಒಡನೆ ಬರುವರೇ ಮಡಿದರೆ ನೀ ೨

ಅಸ್ಥಿರ ಸಂಸಾರ ನಿತ್ಯ ನರಕಕೆ ದ್ವಾರ
ಮುಕ್ತಿಯ ಪಡೆಯೆ ಶ್ರೀಕಾಂತನ ನೆನೆಯೋ ೩

## ೨೭೬

ವಿಧಿ ನಿಷೇಧವು ನಿನ್ನ ಸ್ಮರಣೆ ವಿಸ್ಮರಣೆಯ-
ಲ್ಲದಲರಿಯರೇನೊಂದು ಹರಿಭಕ್ತರು ಪ

ಮಿಂದದ್ದೆ ಗಂಗಾದಿ ತೀರ್ಥಗಳು ಸಾಧುಗಳು
ಬಂದದ್ದೆ ಪುಣ್ಯ ಕಾಲವುಗಳು ಅವರು
ನಿಂದದ್ದೆ ಗಯ ವಾರಣಾಸಿ ಕುರುಕ್ಷೇತ್ರಗಳು
ಬಂದು ಪೋಗಲು ಅದುವೆ ರಾಜಬೀದಿ ೧

ಕಂಡು ಕಂಡದ್ದೆಲ್ಲ ಕಮಲನಾಭನ ಮೂರ್ತಿ
ಮಂಡಿಸಿದ ಶಯನ ದಂಡಪ್ರಣಾಮ
ತಂಡತಂಡದ ಕ್ರಿಯೆಗಳೆಲ್ಲ ಹರಿ ಪೂಜೆಗಳು
ಮಂಡೆ ಬಾಗಿಸಿ ಸಮಿಪ ಶರಣ ಜನಕೆ ೨

ನಡೆವ ನಡೆಯೆಲ್ಲ ಲಕ್ಷ ಪ್ರದಕ್ಷಿಣೆ ಮತ್ತೆ
ನುಡಿವ ನುಡಿಯೆಲ್ಲ ಗಾಯಿತ್ರಿ ಮಂತ್ರ
ಒಡೆಯ ಶ್ರೀಕಾಂತನ್ನ ಅಡಿಗಡಿಗೆ ಸ್ಮರಿಸುತಿಹ
ದೃಢ ಪ್ರಜ್ಞರೇಂಗ್ಯೆಯ್ಯಲದುವೆ ಮರ್ಯಾದೆ ೩

# ೨೭೭

## ಮಾಧವ ಗೀತೆ

ಶರಣು ಹರಿಗೆ ಶರಣು ಸಿರಿಗೆ ಶರಣು ಬ್ರಹ್ಮವಾಣಿಯರಿಗೆ
ಶರುಣು ಭವಗೆ ಶರಣು ಶಿವೆಗೆ ಶರಣು ಬೆನಕಗೆ
ಶರಣು ತತ್ವಮಾನಿಗಳಿಗೆ ಶರಣು ಮುನಿ ಸಮೂಹಗಳಿಗೆ
ಶರಣು ಶರಣ ಮಂಡಲಕ್ಕೆ ಶರಣು ಮಾಧವ ೧

ಪರಮಭಕ್ತರಾಗಿ ಮೆರೆದ ಗುರು ಪುರಂದರಾದಿ ಸಾಧು
ವರರ ವಚನ ಮಣಿಗಳನ್ನು ಮನದೊಳಾರಿಸಿ
ಸರವ ಮಾಡಿ ಶರಣ ಜನರ ಕರುಣದೆಳೆಯೊಳಿದನು ಬಿಗಿಸಿ
ಕೊರಳಿಗರ್ಪಿಸುವೆನು ಭಕ್ತಿ ಭರದಿ ಮಾಧವ ೨

ಶ್ರೀಯೆ ಸತಿಯು ನಿನಗೆ ಬ್ರಹ್ಮರಾಯ ಹಿರಿಯ ಮಗನು ವೈನ-
ತೇಯ ರಥವು ಖಾದ್ರವೇಯೆ ಶಯ್ಯೆ ಛತ್ರವು
ತೋಯಜಾಸನಾಂಡ ಗೃಹವು ಮಾಯೆ
ಮನೆಯ ದಾಸಿ ಸುರನಿ
ಕಾಯ ಸೇವೆಗೈವ ಜನರು ಜೀಯ ಮಾಧವ ೩

ಪರ್ವತೇಶನಣುಗಿ ತಂಗಿ ಶರ್ವದೇವ ನರ್ಮ ಸಖಳು
ಸರ್ವದುರಿತವಳಿವ ಗಂಗೆ ನಿನ್ನ ಪುತ್ರಿಯು
ಸರ್ವಕರ್ತ ಸರ್ವಶಕ್ತ ಸರ್ವಕಾಲ ದೇಶ ವ್ಯಾಪ್ತ
ಸರ್ವಸಾರ ಭೋಕ್ತ ತೃಪ್ತಗುಪ್ತ ಮಾಧವ ೪

ನೀನೆ ತಾಯಿ ನೀನೆ ತಂದೆ ನೀನೆ ಬಂಧು ನೀನೆ ಬಳಗ
ನೀನೆ ಸಖಳು ನೀನೆ ಗುರುವು ನೀನೆ ದ್ರವ್ಯವು
ನೀನೆ ಧೃತಿಯು ನೀನೆ ಸ್ಮೃತಿಯು ನೀನೆ ಮತಿಯು
ನೀನೆ ಗತಿಯು ನೀನೆ ವಿದ್ಯೆ ನೀನೆ ಸಿದ್ಧಿದಾನಿ ಮಾಧವ ೫

ನಿನ್ನ ನಾಮ ಪುಣ್ಯನಾಮ ನಿನ್ನ ರೂಪ ಮಾನ್ಯರೂಪ
ನಿನ್ನ ಚರಿತೆ ಘನ್ನ ಚರಿತೆ ನಿನ್ನ ಪೋಲುವ
ಅನ್ಯ ದೈವರನ್ನು ಕಾಣೆ ಘನ್ನ ಭಕ್ತವರ್ಯರಾಣೆ
ಪನ್ನಗಾದ್ರಿವಾಸ ಶ್ರೀನಿವಾಸ ಮಾಧವ ೬

ದೀನ ನಾನು ದಾನಿ ನೀನು ಹೀನ ನಾನು ಮಾನಿ ನೀನು
ಭಾನುಕೋಟಿ ತೇಜನೇ ಅನಾದಿ ಪುರುಷನೆ
ಏನ ಬಲ್ಲೆನೈಯ ನಾನು ಜ್ಞಾನಪೂರ್ಣನೈಯ ನೀನು
ನಾನು ನಿನ್ನಧೀನನೈಯ ಸ್ವಾಮಿ ಮಾಧವ ೭

ಹೃದಯದಲ್ಲಿ ನಿನ್ನ ರೂಪ ವದನದಲ್ಲಿ ನಿನ್ನ ನಾಮ
ಉದರದಲ್ಲಿ ಅರ್ಪಿತಾನ್ನವಿತ್ತು ಅನುದಿನ
ಒದಗಿ ಬಂದು ಬದಿಯಲಿದ್ದು ಮದಡ ಬುದ್ಧಿಯನ್ನು ಬಿಡಿಸಿ
ಸದಯನಾಗಿ ಬಿಡದೆ ಸಲಹೊ ಮುದದಿ ಮಾಧವ ೮

ಸ್ನಾನ ಮೌನ ಧ್ಯಾನ ತಪಗಳೇನು ಮಾಡಲೇನು ದೇವ
ನೀನೆ ಕೃಪೆಯಿನೊಲಿಯದಿರಲು ಜ್ಞಾನ ಬಾರದು
ಏನು ಹೀನ ಹಾನಿ ಬರಲು ನೀನು ಮಾತ್ರ ಬಿಡದಿರೆನ್ನ
ನೀನೆ ಜನಕೆ ಸೂತ್ರಧಾರಿ ಮಾನ್ಯ ಮಾಧವ ೯

ನಿತ್ಯವಲ್ಲ ದೇಹವಿನ್ನು ವ್ಯರ್ಥವಾಗಿ ಪೋಪುದಾಯು
ಮತ್ತೆ ಬರುವುದೇನು ನಿಜವು ಮರ್ತ್ಯಕಾಯವು
ಚಿತ್ತ ಶುದ್ಧನನ್ನ ಮಾಡು ನಿತ್ಯ ನಿನ್ನ ಭಜಿಸುತಿಪ್ಪ
ಸತ್ಯವಂತರೊಡನೆ ಬಳಕೆಯಿತ್ತು ಮಾಧವ ೧೦

ಅಂಬುಗುಳ್ಳೆಯಂತೆ ಇರುವ ಡಿಂಬವನ್ನು ನಂಬಿ ಕೆಟ್ಟು
ಹಂಬಲಿಸುತ ವಿಷಯಗಳಿಗೆ ಡೊಂಬನಾದೆನು
ಕಂಬಳಿಯೊಳು ಕಟ್ಟಿದನ್ನ ತಿಂಬುವನಿಗೆ ದೊರೆವ ಸುಖವು
ತುಂಬಿ ತುಳುಕುತಿಹುದು ಭವವ ನಂಬೆ ಮಾಧವ ೧೧

ಹೊಟ್ಟು ತಂದು ಕುಟ್ಟಿ ಕೇರಿ ಕಷ್ಟಪಟ್ಟು ತುಕ್ಕಿ ಬೀಸಿ
ಅಟ್ಟಹಾಸದಿಂದ ರೊಟ್ಟಿ ಸುಟ್ಟು ತಿನ್ನಲು
ಎಷ್ಟು ಸುಖವೊ ಅಷ್ಟೆಯಿನ್ನು ಭ್ರಷ್ಟ ಭವದಿ ಮಮತೆಯಿಡಲ
ದೆಷ್ಟು ಶಿಷ್ಟನಾಗಲವಗೆ ನಷ್ಟ ಮಾಧವ ॥೨

ಹೊಟ್ಟೆಕಿಚ್ಚು ಪಡುವೆ ದೈವಕೆಷ್ಟು ಪೂಜೆ ಮಾಡೆ ಕರುಣ
ಪುಟ್ಟಲೊಲ್ಲದದಕೆ ಬೆಟ್ಟದಷ್ಟು ಕೊಟ್ಟರು
ಬೆಟ್ಟು ನೀರೊಳದ್ದಿ ಬಾಯೊಳಿಟ್ಟು ಚಪ್ಪರಿಸಲು ರುಚಿಯ
ದೆಷ್ಟೊ ದುಷ್ಟನಿತ್ತ ವರದಲಷ್ಟೆ ಮಾಧವ ॥೩

ತಪ್ಪು ಸಾಸಿರಂಗಳನ್ನು ಒಪ್ಪಿಕೊಂಡು ಕಾವದೇವ
ಮುಪ್ಪುರಂಗಳನ್ನು ಗೆಲಿಸಿದಪ್ರಮೇಯನೆ
ಕಪ್ಪು ಮೇಘಕಾಂತಿಯಿಂದಲೊಪ್ಪುತಿಪ್ಪ ತಿರುಮಲೇಶ
ಮುಪ್ಪು ಇಲ್ಲದಿಪ್ಪ ಸರ್ಪಶಯನ ಮಾಧವ ॥೪

ಒರಳ ನೆಕ್ಕಿ ವ್ರತವ ಕೆಟ್ಟ ಮರುಳನಂದವಾಯ್ತು ದೇಹ
ಧರಿಸಿದುದಕೆ ನಿನ್ನ ಬಿಟ್ಟು ನರರ ಸ್ತುತಿಸಲು
ಹರಕು ಚಿಂದಿ ಬಿಡಿಸಲಿಲ್ಲ ಕರಕು ಅನ್ನ ಹೋಗಲಿಲ್ಲ
ನರಕ ಬಾಧೆ ತಪ್ಪಲಿಲ್ಲ ವರದ ಮಾಧವ ॥೫

ಮೊರಡು ತುರುವ ಹಿಡಿದು ಕಟ್ಟಿ ಕರೆದು ಕಷ್ಟ ಪಟ್ಟು ಪಾಲ
ನುರಗಗಳಿಗೆ ಎರೆದ ತೆರದಲಾಯ್ತು ನಿನ್ನನು
ಮರೆದು ತಿರಿದು ಕಾಡಿಬೇಡಿ ತರಣಿ ಮುಣಗ ದುಡಿದು ಬಡಿದು
ಕರಣ ತೃಪ್ತಿಗೆಂದು ಸುರಿದೆ ಬಂದೆ ಮಾಧವ ॥೬

ಕೆರವ ತಿಂಬ ನಾಯಿಗಿನ್ನು ಸುರುಚಿಯನ್ನ ಸೊಗಯಿಸುವುದೆ
ನರಕ ಭಾಗಿ ಪಾಮರಂಗೆ ನಿನ್ನ ನಾಮವು
ಗರಳದಂತೆ ತೋರ್ಪುದೈಯ ಗುರುಗಳಿಲ್ಲ ಹಿರಿಯರಿಲ್ಲ
ದುರಳ ಸಂಗ ಬಿಡಲಿಸಲ್ಲ ಕರುಣಿ ಮಾಧವ ॥೭

ಕ್ರೂರ ಮಾನವರೊಳುದಾರ ಧೀರ ಶೂರರೆಂದು ಸಾರಿ
ಬಾರಿ ಬಾರಿಗಿನ್ನು ಪೊಗಳಿ ಬೊಬ್ಬೆಯಿಟ್ಟರು
ಬಾರದವರಿಗೆಂದು ಕರುಣ ಘೋರತನದ ದನುಜರವರು
ನೀರ ಕಡೆದರುಂಟೆ ಬೆಣ್ಣೆ ಶೌರಿ ಮಾಧವ ೧೮

ಹಾಳು ಹೊಲಕೆ ನೀರನೆತ್ತಿ ತೋಳು ಬೀಳು ಹೋದವೋಲು
ಖೂಳ ಜನಕೆ ಪೇಳಿಕೊಳ್ಳುತಿಹನು ಬಾಳ್ವೆಯು
ದಾಳಿ ಮಾಳ್ಪ ವಿಷಯಗಳನು ಹೂಳಿ ಜ್ಞಾನ ಭಕ್ತಿಯನ್ನು
ತಾಳಿ ನಿನ್ನನೋಲಗಿಸಲು ಬಾಳ್ವೆ ಮಾಧವ ೧೯

ಎಷ್ಟು ನೀಲಿಯನ್ನು ತೊಳೆಯೆ ಬಿಟ್ಟು ಹೋಗದವರ ಬಣ್ಣ
ದುಷ್ಟ ಮಾನವರಿಗೆ ಕರುಣ ಪುಟ್ಟದೆಂದಿಗು
ಕಷ್ಟಪಟ್ಟು ಸೇವಿಸುವರ ಹೊಟ್ಟೆಯನ್ನು ಹೊಡೆದು ತಮ್ಮ
ಪೆಟ್ಟಿಗೆಯನು ತುಂಬಿಸುವರೊ ದಿಟ್ಟ ಮಾಧವ ೨೦

ನಿರುತ ನಿನ್ನ ಕಥೆಯ ಬಿಟ್ಟು ನರರ ಕಥೆಗಳನ್ನು ಕೇಳಿ
ಗುರುಗಳನ್ನು ಹಿರಿಯರನ್ನು ಜರೆಯುತಿಪ್ಪರು
ಪೊರೆದ ತಂದೆ ತಾಯ ಮಾತ ಪರಿಕಿಸದಲೆ ತೊರೆದು ತಮ್ಮ
ತರುಣಿ ನುಡಿಯ ಕೇಳಿ ನೆಚ್ಚುತಿಹರು ಮಾಧವ ೨೧

ಪಟ್ಟದರಸಿಯನ್ನು ತೊರೆದು ಬಿಟ್ಟು ಪರರ ಸತಿಯ ಕೂಡಿ
ಕೊಟ್ಟ ಸಾಲವನ್ನು ಕೊಡದೆ ನುಂಗುತಿಪ್ಪರು
ಮುಟ್ಟಿ ಕರವ ಭಾಷೆಯನ್ನು ಕೊಟ್ಟು ಮೋಸ ಮಾಡುತಿಹರು
ಕೆಟ್ಟು ಮಾರಿಗೆರಗಿ ನಿನ್ನ ಬಿಟ್ಟು ಮಾಧವ ೨೨

ಕಂಡುದನ್ನು ಪೇಳದಿಹರು ಕೊಂಡೆಯವನು ಪೇಳುತಿಹರು
ಉಂಡ ಮನೆಗೆ ಬಗೆವರೆರಡನವರು ಭಂಡರು
ಕಂಡು ನುತಿಸಿ ಬೇಡಿಕೊಂಡರು ದಂಡಿಸುವರ ಕಂಡು ನಡುಗಿ
ಕೊಂಡು ಪೋಗಿ ಕೊಡುತಲಿಹರು ಕಂಡ್ಯ ಮಾಧವ ೨೩

ಕೊಳ್ಳರೊಳಗೆ ಸ್ನೇಹ ಬಹಳ ಸುಳ್ಳರೊಳಗೆ ಸೋಲುತಿಹರು
ಒಳ್ಳೆಯವರ ಕಂಡವರ ಟೊಳ್ಳು ಮಾಳ್ಪರು
ಬಳ್ಳೆಸುರಿದು ಬಲ್ಲಿದವರಿಗಳ್ಳೆ ಬಿರಿಯಲುಣಿಸಿ ದಣಿಸಿ
ತಳ್ಳಿ ಬಿಡುವರಿಲ್ಲದವರನೆಲ್ಲ ಮಾಧವ ೨೪

ಮಾಡಿದಂಥ ಕೃತಿಯು ಮರೆತು ಕೇಡು ಬಗೆದು ಕಾಡುತಿಹನು
ನೋಡರೊಮ್ಮೆಗಾದರವರು ಬಡವರೆಂಬುದ
ಜಾಡೆಯರಿತು ನಿನ್ನ ನಾಮ ಪಾಡಿ ಪೊಗಳುತಿಹರಿಗೆಂದು
ಕೇಡು ಬರದು ನಾಡಿನೊಳಗೆ ನೋಡೆ ಮಾಧವ ೨೫

ಶಾಕವ್ರತದೊಳೆಲ್ಲ ಶಾಕಂಗಳನ್ನು ಬಿಡುವ ತೆರದಿ
ಬೇಕು ಬೇಕು ಎಂಬ ಬಯಕೆ ಬಿಡಲು ಬಾರದು
ಸಾಕೆನಿಸದೆ ರತಿಯ ಸುಖದೊಳೇಕ ಚಿತ್ತನಾಗುವಂತೆ
ಲೋಕನಾಥ ನಿನ್ನಲಿಡದೆ ಹೋದೆ ಮಾಧವ ೨೬

ನೇಮ ನಿಷ್ಠೆಯೆಂದು ಪರರ ಧಾಮದನ್ನ ಬಿಡುವವೋಲು
ಕಾಮಲೋಭ ಮೋಹಗಳನು ಬಿಡಲು ಬಾರದು
ತಾಮಸರನು ನೋಡೆನೆಂಬ ನೇಮವನ್ನು ನಿತ್ಯ ಪರರ
ಕಾಮಿನಿಯರ ಬಿಡದೆ ಹೋದೆ ಸ್ವಾಮಿ ಮಾಧವ ೨೭

ಹೇಸಿಗೆಯನು ಕಂಡು ಕರದಿ ನಾಸಿಕವನು ಹಿಡಿಯುವಂತೆ
ಹೇಸಿ ವಿಷಯ ವಾಸನೆಯನು ಬಿಡಲು ಸಲ್ಲದು
ಘಾಸಿಬಟ್ಟು ಪರರ ಸೇವೆಯಾಸೆಬಟ್ಟು ಮಾಡುವಂತೆ
ಸೂಸಿ ನಿನ್ನ ತೋಷಬಡಿಸಲಿಲ್ಲ ಮಾಧವ ೨೮

ಪರರ ವಿತ್ತ ಪದವಿ ಕಂಡು ಹರುಷ ಕ್ಲೇಶಗಳಿಗೆ ಸಿಲುಕು–
ತಿರುಳು ಹಗಲು ಬಿಡದೆ ಕುದಿದು ತೊಳಲುತಿರುವೆನು
ನರಕವಾರ್ತೆಯನ್ನು ಕೇಳಿ ದುರುಳ ವಿಷಯಗಳಿಗೆ ಮನವ
ನೆರಗಿಸುವೆನು ಮುಂದೆ ಗತಿಯದೇನೊ ಮಾಧವ ೨೯

ಹೇಸಿ ವಿಷಯ ಸುಖವ ನಾನು ಲೇಸೆನುತ್ತೆ ತಿಳಿದು ಮಮತೆ
ಯಾಸೆಯಲ್ಲಿ ಕಟ್ಟುಬಿದ್ದು ಕ್ಲೇಶಪಡುತಿಹೆ
ಪಾಶಬಿಡಿಸಿ ದಾಸ ದಾಸ ದಾಸನಾಗಿಸೆನ್ನ ದೋಷ
ರಾಶಿಯನ್ನು ನಾಶ ಮಾಡೊ ಶ್ರೀಶ ಮಾಧವ ೩೦

ಆಗದೆನಗೆ ಅಬುಜನಾಭ ಭಾಗವತವ ಕೇಳೆ ಮನಸು
ಬೈಗು ಬೆಳಗು ಪೋಗುತಿಹುದು ಸಾಗಿ ಬಾರದು
ಭೋಗ ಭಾಗ್ಯಗಳನು ಬಯಸಿ ರಾಗ ಲೋಭಗಳಲಿ ನೆಲಸಿ
ತಾಗು ಬಾಗುಗಳನು ತಿಳಿಯದಾದೆ ಮಾಧವ ೩೧

ಬಂದ ಕಾರ್ಯವಾಗಲಿಲ್ಲ ಎಂದು ಬ್ರಹ್ಮ ದೇಹ ಧರಿಸಿ
ಮುಂದೆ ಗತಿಯದಾವುದ್ಯೆಯ ಸಿಂಧುಶಯನನೆ
ಮಂದನಾಗಿ ನೊಂದೆನಯ್ಯೋ ಹಿಂದು
ಮುಂದ ನೊಂದನರಿಯೆ
ಬಂದು ಸಲಹೊ ಕಂದನೆಂದೂ ತಂದೆ ಮಾಧವ ೩೨

ದಾಸ ವೇಷವನ್ನು ಹಾಕಿ ದೇಶ ದೇಶವನ್ನು ತುಕ್ಕಿ
ಮೋಸಮಾಡಿ ಸುಜನರನ್ನು ಘಾಸಿಗೊಳಿಸಿದೆ
ಕಾಸುವೀಸಗಳಿಸಲಾಯ್ತು ಕಾಶಿ ಕಾಳಹಸ್ತಿ ಯಾತ್ರೆ
ವಾಸಿ ಪಂಥವನ್ನು ಬಿಡಿಸು ಶ್ರೀಶ ಮಾಧವ ೩೩

ವೇದಶಾಸ್ತ್ರಗಳನು ಪಠಿಸಿ ವಾದಿಸಿದೆನು ಸಭೆಗಳಲ್ಲಿ
ಭೇದ ಬುದ್ಧಿ ಪೋಗಲಿಲ್ಲ ಕ್ರೋಧ ವಶದಲಿ
ಆದರಿಸುತ ಕರೆಯದಿರಲು ಖೇದದಿಂದ ಬೈದು ಬರುವೆ
ಪಾದ ಭಜನೆಯಿತ್ತು ಸಲಹೊ ಶ್ರೀದ ಮಾಧವ ೩೪

ಹೆಂಡಿರೆಂದು ಮಕ್ಕಳೆಂದು ಮಂಡೆಯನ್ನು ಬಾಗಿಕೊಂಡು
ಚಂಡಿತನದಿ ಕಾಡಿಬೇಡಿ ಭಂಡನಾದೆನು
ಚಂಡ ಯಮನ ಭಟರು ಬಂದು ಚಂಡಿಕೆಯನು
ಹಿಡಿದು ಎಳೆಯೆ ಹೆಂಡಿರೆಲ್ಲೊ ಮಕ್ಕಳೆಲ್ಲೊ ದಂಡ ಮಾಧವ ೩೫

ಮೂತ್ರ ಬಿಲದ ಮೋಹದಲ್ಲಿ ಗಾತ್ರವನ್ನು ಬಳಲಿಸುತ್ತ
ಸೂತ್ರ ಬೊಂಬೆಯಾದೆ ಕಾಮನ ವಶಕೆ ಸಿಕ್ಕುತ
ನೇತ್ರ ಸನ್ನೆಯನ್ನು ಮಾಡಿ ಪಾತ್ರದವರ ಕರೆದುಕೊಂಡಿ
ಸ್ತೋತ್ರ ಮಾಡಿ ಕಳೆದಿ ಹಗಲು ರಾತ್ರಿ ಮಾಧವ ೩೬

ನ್ಯಾಯ ಮಾರ್ಗಿಗಳನು ತೊರೆದು ಹೇಯ
ಮನುಜರನ್ನು ಸೇರಿ
ತಾಯ ಮಾರಿ ತೊತ್ತ ಕೊಂಬ ತೆರದಲಾದೆನೊ
ತೋಯಜಾಕ್ಷ ನಿನ್ನ ಪಾದ ವಾಯದಿಂದ ನೆನೆಯದಿನ್ನು
ಬೀಯವಾಗುತಿರುವುದಾಯು ಜೀಯ ಮಾಧವ ೩೭

ಧೈರ್ಯವಾಗದೆನಗೆ ಭಕ್ತವರ್ಯರನ್ನು ಪೊಂದಲಿಕ್ಕೆ
ಚೌರ್ಯದಾಸನಾದೆ ವಿಷಯ ಧುರ್ಯನೆನಿಸಿದೆ
ಆರ್ಯಧರ್ಮವನ್ನು ಮರೆತು ಕ್ರೌರ್ಯ ಕರ್ಮದಲ್ಲಿ ನಿಂತು
ಕಾಯ ಕಾರ್ಯವನ್ನು ತಿಳಿಯದಾದೆ ಮಾಧವ ೩೮

ಸತಿಯು ಸುತರು ಸ್ಥಿತಿಯು ಎಂಬುವತಿಯಾಸೆಗಳಿಗೆ ಸಿಲುಕಿ
ಮತಿಯಗೆಟ್ಟು ಪತಿತನಾದೆ ಗತಿಯಗಾಣದೆ
ಪತಿತರನ್ನು ಪತಿಕರಿಸುವ ವಿತತ ಕೀರ್ತಿವಂತನೆಂದು
ಶ್ರುತಿಯ ವಚನ ಮೊರೆಯುತಿಹುದೊ ಸತತ ಮಾಧವ ೩೯

ಚೆಂದವಾದ ಇಂದ್ರಿಯಗಳಿಗಂದವಾದ ವಿಷಯವಿತ್ತೆ
ಒಂದಕಿತ್ತ ಸಾಧನಂಗಳೊಂದಕಾಗಿವೆ
ತಂದೆ ನಿನ್ನ ಕಥೆಯ ಬಿಟ್ಟು ಮಂದಿ ವಾರ್ತೆ ಕೇಳುತಿಹುದು
ಸುಂದರಿಯರು ನೋಡುತಿರುವುದಕ್ಷಿ ಮಾಧವ ೪೦

ಸಂದ ತುಳಸಿ ದಲಗಳನ್ನು ಚೆಂದದಿಂದ ಮೂಸಿಸದೆಲೆ
ಸುಂದರಿಯರ ಮೈಯ ಗಂಧಕೆಳೆಸುತಿಪ್ಪುದು
ಬಂದ ಡಿಂಗರಿಗರನಪ್ಪದೆಂದು ಮಂದ ತರುಣಿಯರನು
ಪೊಂದಲೆಳೆಸುತಿರುವುದೈಯ ತಂದೆ ಮಾಧವ ೪೧

ನೊಂದು ಸುಜನರನ್ನ ಬಿಟ್ಟು ಬಂದು ಕುಜನರನ್ನ ಕಳಸಿ
ಬಂದ ತೆರದಿ ಮಾಡುತಿಹುದು ನಿಂದ್ಯ ಜಿಹ್ವೆಯು
ಮಂದನಾಗಿ ನೊಂದೆನಯ್ಯಾ ಹಿಂದು
ಮುಂದ ನೊಂದನರಿಯೆ
ಬಂದು ನೀನೊ ಕಾಯದಿರಲು ತಂದೆ ಮಾಧವ ೪೨

ಮದುವೆಗೆಂದು ಸಿದ್ಧಪಡಿಸಲದುವೆ ಪಯಣಕೊದಗಿದಂಥ
ದಿದರ ಬಗೆಯನರಿಯಲಾಯ್ತು ಗೈದ ಸಾಧನ
ಉದರಕೆಂದು ಒದತಿದನ್ನವದರ ಮೇಲೆಯಿಡಲು ಕ್ಷುಧೆಯು
ಒದರಿ ಪೋಪುದೇನೊ ಪೇಳೊ ಮುದದಿ ಮಾಧವ ೪೩

ಭರದಿ ಯಮನ ಭಟರು ಬಂದು
ಹೊರಡಿರೆಂದು ಮೆಟ್ಟಿ ಮುಂದು
ಕೊರಳಿಗಾತ್ಮ ಸೇರಿದಾಗ ಹರಿಯ ನಾಮವು
ಬರದು ಜಿಹ್ವೆಗೆಂದು ತಿಳಿದು ಮರುಳು ಮನವ ತಿದ್ದಿಕೊಂಡು
ಶರಣರಾಗಿ ನಿತ್ಯ ನೆನೆಯಲೊಲಿವೆ ಮಾಧವ ೪೪

ಶ್ವಾಸಖಾಸವೆರೆಡೂ ಕಂಠದೇಶದಲ್ಲಿ ಕೂಡಿದಾಗ
ವಾಸುದೇವ ನಾಮ ಮನಕೆ ಭಾಸವಾಗದು
ಮೋಸ ಹೋಗದಂತೆ ಶ್ರೀನಿವಾಸ ನಿನ್ನ ದಾಸನಾಗೆ
ಘಾಸಿಯಾಗದಂತೆ ಪೋಷಿಸುವೆಯೊ ಮಾಧವ ೪೫

ಬಂದು ಇಂದ್ರಿಯಂಗಳೆಲ್ಲ ಒಂದುಗೂಡಿ ತನುವ ಮುಸುಗ
ಲಂದಿಗೊದಗದೈಯ ಸಿಂಧುಶಯನ ನಾಮವು
ನಿಂದು ಕುಳಿತು ತಿಂದು ತೇಗಿ ಬಂದು ಹೋಗುವಾಗ ನಿನ್ನ
ಕಂದನೆಂದು ಪೊಂದೆ ಪೊರೆವೆ ತಂದೆ ಮಾಧವ ೪೬

ಕಲ್ಲೊ ಮರವೊ ಆಗಿ ಜ್ಞಾನವಿಲ್ಲದಾಗ ಮರಣವೊದಗೆ
ಪುಲ್ಲನಾಭ ಕೃಷ್ಣನೆಂಬ ಸೊಲ್ಲು ಬಾರದು
ಖುಲ್ಲ ಬುಧ್ಧಿಯನ್ನು ಬಿಟ್ಟು ಬಲ್ಲ ಗುರುಗಳನ್ನು ಪೊಂದ
ಲಲ್ಲಿ ನಿನ್ನ ಮಹಿಮೆಯರಿವ ಚೆಲ್ವ ಮಾಧವ ೪೭

ವಾತಪಿತ್ತವೆರೆಡು ಕೂಡಿ ಧಾತು ಕುಂದಿಸುತ್ತೆ ತನುವ
ನಾತು ಮುಸುಗೆ ಬರದು ನಿನ್ನ ಖ್ಯಾತ ನಾಮವು
ಪ್ರೀತಿಗಾಗಿ ಸಕಲ ಕರ್ಮ ರೀತಿಯರಿತು ಮಾಡುತಿದ್ದು
ದೂತನಾಗಿ ಬಾಳ್ವನವ ಪುನೀತ ಮಾಧವ ೪೮

ಸಿಂಗರಿಸಿದ ದೇಹವಿದನು ಭಂಗಿಸುತ್ತೆ ರುಜೆಯು ಬಂದು
ಕಂಗಳೊಳಗೆ ಸೆಳೆಯೆ ಬರೆದು ರಂಗ ನಾಮವು
ಅಂಗಸೌಖ್ಯವನ್ನು ಮರೆತು ಸಂಗರಹಿತನಾದ ನಿನ್ನ
ಡಿಂಗರಿಗನೆ ಮುಕ್ತ ಮಂಗಳಾಂಗ ಮಾಧವ ೪೯

ಕೆಟ್ಟ ಜನ್ಮದಲ್ಲಿ ಪುಟ್ಟಿ ದುಷ್ಟ ಕರ್ಮ ಮಾಡಿ ದೇಹ
ಬಿಟ್ಟು ಹೋಗುವಾಗ ವಿಠಲನ್ನ ನಾಮವು
ಥಟ್ಟನೆಂದು ಬಾರದೈಯ ಪುಟ್ಟಿದಾಗಳಿಂದ ಮನದ
ಪೆಟ್ಟಿಗೆಯೊಳಗಿಟ್ಟು ಭಜಿಸದಿರಲು ಮಾಧವ ೫೦

ಕಾಗೆಯಂತೆ ಮೈಯ ಸುಟ್ಟು ರೋಗ ಬಂದ ಎಮ್ಮೆ ಮೈಗೆ
ತಾಗಿಸಿರುವ ಬರೆಗಳಂತೆ ಬರೆದು ನಾಮವ
ಬಾಗಿ ಜನರು ನುತಿಸುವಂತೆ ರಾಗದರಿವೆಗಳನು ಧರಿಸಿ
ಯಾಗ ಮಾಡಲೊಲಿಯೆ ನಾಗಶಯನ ಮಾಧವ ೫೧

ಧನವ ಬಿಟ್ಟರಾಯಿತೇನೊ ಧನವು ಬಿಡದೆ ಧನವನಿನ್ನು
ಮನೆಯ ಬಿಟ್ಟರೇನು ಗೂಬೆ ಬಿಡದೆ ಧನವನು
ತನುವ ಮಮತೆ ಬಿಟ್ಟರೇನು ಶುನಕಕೇನು ಮಮತೆ ನಿನ್ನ
ನೆನೆಯದಿದ್ದರಿಲ್ಲಿ ಫಲವು ಜಗದಿ ಮಾಧವ ೫೨

ತಾತ ನನ್ನ ಮಾತೆಯನ್ನು ಖಾತಿಯಿಂದ ಬೈದು ನೂಕಿ ತೀರ್ಥ
ಕ್ಷೇತ್ರ ಯಾತ್ರೆ ಮಾಡಲೇನು ಪುಣ್ಯವೊ
ಪಾತಿವ್ರತ್ಯವನ್ನು ತೊರೆದು ಧೂರ್ತಳಾಗಿ ನಿತ್ಯ ನೇಮ
ವೋತು ಮಾಡುತ್ತಿದ್ದರೇನು ಖ್ಯಾತ ಮಾಧವ ೫೩

ಹೊಲೆಯನವನು ತನ್ನ ಮನದ ನಿಲಯದಲ್ಲಿ ನಿಲಿಸದವನು
ಕುಲದ ಹೊಲೆಯ ಹೊಲೆಯನಲ್ಲ ನಿನ್ನ ನೆನೆಯಲು
ಹೊಲೆಯ ಹೊಲೆಯನೆಂದು ಚೀರಿ ಕೆಲಕೆ ಸಿಡಿದು ದೂರಲೇಕೆ
ಹೊಲೆಯ ಮನವ ತಿದ್ದಿಕೊಳ್ಳದವನು ಮಾಧವ ೫೪

ಹೊಲೆಯ ಬಂದನೆಂದು ಗಂಟೆಯೆಳೆದು ಬಾರಿಸುತ್ತೆ ನಿತ್ಯ
ಹಲವು ಪೂಜೆ ಮಾಳ್ಪರೆಲ್ಲ ತಿಳಿದು ನೋಡಲಿ
ಒಳಗೆ ಪರರ ದ್ರವ್ಯ ಲಲನೆ ನೆಲದಿ ಮನವ ನಿಲಿಸಿ ದುಷ್ಟ
ಹೊಲೆಯರಜ್ಞರಾಗದಿಹರೆ ಚೆಲುವ ಮಾಧವ ೫೫

ಅರುಣನುದಯದಲ್ಲಿ ಎದ್ದು ಪರಮಪುರುಷ ನಿನ್ನ ನೆನೆದು
ಗುರುಗಳಂಘ್ರಿ ವನಜವನ್ನು ಮನದಿ ಸ್ಮರಿಸುತ
ಹೊರಗೆ ನಡೆದು ಶೌಚ ವಿಧಿಯ ಚರಿಸಿ ಗಂಗೆಯಲ್ಲಿ ಮಿಂದು
ತರಣಿಗರ್ಘ್ಯವಿತ್ತು ಮನೆಗೆ ಬಂದು ಮಾಧವ ೫೬

ಬುಧರ ಬಳಿಗೆ ಪೋಗಿಯವರ ಪದಕೆ ನಮಿಸಿ ನಿನ್ನ ಕಥೆಯ
ನೊದಗಿ ಕೇಳಿ ಉದರಕಾಗಿ ಶೀಲವೃತ್ತಿಯೆ
ಮುದದಿ ಚರಿಸಿ ನಿತ್ಯಪೂಜೆ ವಿಧಿಯ ಮೀರದಂತೆ ಮಾಡಿ
ಪದುಳದಿಂದಲತಿಥಿಯಿದಿರು ನೋಡಿ ಮಾಧವ ೫೭

ಬಂದ ಅತಿಥಿಯನ್ನು ಕರೆದು ತಂದು ಪೀಠವಿತ್ತು ಮುದದಿ
ವಂದಿಸುತ್ತ ಕರವ ಮುಗಿದು ದ್ವಂದ್ವ ಪಾದವ
ಚೆಂದದಿಂದ ತೊಳೆದು ತನ್ನ ಮಂದಿ ಸಹಿತ ಶಿರದಿ ಧರಿಸಿ
ಮಂದಿರಕ್ಕೆ ಚೆಲ್ಲಿ ಧನ್ಯನೆಂದು ಮಾಧವ ೫೮

ಅನ್ನವಿತ್ತರದುವೆ ಭವನವನ್ನವೀಯದಿರಲರಣ್ಯ
ವನ್ನದಾನದಿಂದ ಘನ್ನದುರಿತ ಪರಿಹರ
ಅನ್ನದಾನ ಸರ್ವ ದಾನವನ್ನದಿಂದ ಸರ್ವ ಪುಣ್ಯ
ಹೊನ್ನನೆಷ್ಟು ಸುರಿಯೆ ತೃಪ್ತಿಹೊಂದ ಮಾಧವ ೫೯

ಇದ್ದುದಷ್ಟೆ ಸಾಕ್ಷಿಯಿಂದ ಮೆದ್ದು ಸಭ್ಯರೀತಿಯಲ್ಲಿ
ಪದ್ಧತಿಯನು ತಪ್ಪಿಸದಲೆ ಇದ್ದು ಧರೆಯೊಳು
ಶುದ್ಧ ಭಕ್ತಿಯಿಂದ ನಿನ್ನ ಪೊದ್ದಿದವರ ಕೂಡಿ ಭವವ
ಗೆದ್ದು ಪಡೆಯಬೇಕು ಮುಕ್ತಿ ಮುದ್ದು ಮಾಧವ ೬೦

ಮುನ್ನ ಮಾಡಿದಂಥ ಕರ್ಮ ಬೆನ್ನ ಬಿಡದಲಿದ್ದರಿನ್ನು
ನಿನ್ನನೇಕೆ ಭಜಿಸಬೇಕು ಧನ್ಯರಾಗಲು
ಹೊನ್ನು ಹೆಣ್ಣು ಮಣ್ಣು ಮೂರು ನನ್ನದೆಂಬ ಮಮತೆ ಬಿಡಿಸಿ
ನಿನ್ನ ಶರಣರಲ್ಲಿಯಿಟ್ಟು ಸಲಹೊ ಮಾಧವ ೬೧

ಒಡಲಿಗನ್ನವನ್ನು ಕಾಣೆ ಉಡಲು ವಸ್ತ್ರ ಕಾಣೆನೈಯ
ನುಡಿಯ ಕೇಳಿ ಕೊಡುವ ಒಡೆಯರನ್ನು ಕಾಣೆನೊ
ಬಡವನಾಗಿ ನೊಂದು ಭವದ
ಕಡಲಿನೊಳಗೆ ಮುಳುಗುತಿಹೆನೊ
ಸಡಿಲ ಬಿಡದೆ ಹಿಡಿದು ತೆಗೆಯೊ ಕಡಗೆ ಮಾಧವ ೬೨

ಎಷ್ಟು ಜನ್ಮದಲ್ಲಿ ನಾನು ಮುಟ್ಟಿ ಮಾಡಿದಂಥ ಕರ್ಮ –
ವಟ್ಟಿ ಬಂದು ಕಾಡುತಿಹುದೊ ದೃಷ್ಟವಲ್ಲವೊ
ಸೃಷ್ಟಿಯೊಳಗೆ ಎನ್ನ ಪೋಲ್ವ ಕೆಟ್ಟ ಪಾಪಿ ಪುಟ್ಟದಿರಲಿ
ಕಷ್ಟವನ್ನು ಕಳೆದು ಸಲಹೊ ಶಿಷ್ಟ ಮಾಧವ ೬೩

ನಿನ್ನ ಭಕ್ತರೆನಿಸಿದವರು ಬನ್ನಬಡಲಿ ಬೇಕು ನಿತ್ಯ
ಅನ್ನ ಉದಕ ಒಡವೆ ವಸ್ತ್ರವನ್ನು ಕಾಣದೆ
ಬೆನ್ನುಹತ್ತಿ ರೋಗ ರುಜಿನ ಕುನ್ನಿಯಂತೆ ಕಾಡಬೇಕು
ನಿನ್ನ ನೆನೆದು ಧನ್ಯನಾಗಬೇಕು ಮಾಧವ ೬೪

ಕಾಲ ದೇಶ ವಿದ್ಯೆ ಕರ್ಮ ಜಾಲದಲ್ಲಿ ಸಿಕ್ಕಿಸೆನ್ನ
ಲೋಲನಾಗಿ ಲೀಲೆಯಾಡುತಿರುವುದುಚಿತವೆ
ಮೇಲೊ ಕೀಳೊ ನಿನ್ನ ಘನತೆ ಮೂಲಕರ್ತ ನೀನೆ ತಿಳಿದು
ಬಾಲಕನ್ನ ಪಾಲಿಸೈಯ ಶೀಲ ಮಾಧವ ೬೫

ಹಿಂದೆ ಯಾರ ಕೇಳಿ ಪೊರೆದೆ ಇಂದು ಯಾರ ಕೇಳಿ ಜರಿದೆ
ತಂದೆ ಹೀಗೆ ಕ್ಷಣಿಕತನವ ಮಾಡೆ ನಿನ್ನಯ
ಮಂದಿ ನಗರೆ ಪರಮ ಪುರುಷ
ಪೊಂದಿದವರ ಪೊರೆಯದಿರಲು
ಕುಂದು ನಿನಗೆ ನಿನ್ನ ಕೀರ್ತಿಗೆಂದೆ ಮಾಧವ ೬೬

ತತ್ವಮಾನಿ ದಿವಿಜರೆನ್ನ ನೆತ್ತಿ ಕರವ ಪಿಡಿದು ಕೆಟ್ಟ
ವೃತ್ತಿಯನ್ನು ಬಿಡಿಸದಿನ್ನು ನಿತ್ಯ ವಿಷಯದಿ
ಒತ್ತಿ ಮೋಹಪಾಶ ಬಿಗಿದು ಸುತ್ತಮುತ್ತ ತುಳಿಯುತಿಹರು
ಮೃತ್ಯು ಬರದ ಮುನ್ನೆ ಕೃಪಯಿನೆತ್ತೊ ಮಾಧವ ೬೭

ಆನೆಯನ್ನು ಕಾಯುವಾಗ ಜ್ಞಾನವಿದ್ದು ಬಗೆಯದೇನೊ
ನಾನು ಒದರುತಿರಲು ಸುಮ್ಮನಿರುವುದೇನೆಲೊ
ದಾನವಾರಿ ದಿವಿಜರೊಡೆಯ ದೀನಪಾಲ ಜ್ಞಾನಪೂರ್ಣ
ಮಾನವನ್ನು ಕಾಯ್ದುಕೊಳ್ಳೊ ದಾನಿ ಮಾಧವ ೬೮

ರೆಕ್ಕೆ ಮುರಿದ ಪಕ್ಕಿಯಂತೆ ದಿಕ್ಕುಕೆಟ್ಟು ಕೂಗುತಿಹೆನೊ
ಅಕ್ಕಟಕಟ ಸೆರೆಯ ಬಿಡಿಸೊ ರಕ್ಕಸಾಂತಕ
ಠಕ್ಕಿಸುತ್ತೆ ಭವದಲೌಕೆ ನಕ್ಕು ಲೀಲೆಯಾಡುತಿಹುದು
ತಕ್ಕುದಲ್ಲ ನಿನಗೆ ಲೆಕ್ಕಿಸಿನ್ನು ಮಾಧವ ೬೯

ಹಾನಿ ವೃದ್ಧಿ ಕ್ಲೇಶ ಹರುಷ ಹೀನ ಮಾನಗಳಿಗೆ ಎನ್ನ
ನೀನೆ ಹಿಡಿದು ನೂಕಿ ಗೋಣು ಮುರಿವುದೇನಿದು
ಏನು ಪರಿಯಲೆನ್ನ ಮನಕೆ ನೀನು ಸೂಚಿಸುವೆಯೊ ಅಂತೆ
ನಾನು ನಿನ್ನಧೀನನಾಗಿ ಮಾಳ್ಪೆ ಮಾಧವ ೭೦

ಮನವು ಮಾಳ್ಪ ದುಷ್ಟ ಕೃತ್ಯವೆನಿತು ಪೇಳಲಯ್ಯ ತನ್ನ
ಮನೆಯ ದೂತನನ್ನು ಮಾಡಿ ಸೆಳೆಯುತಿಪ್ಪುದು
ವನಿತೆ ಕನಕ ಧರಣಿ ಧಾನ್ಯ ತನಯರಲ್ಲಿ ಬಿನಗು ಮಮತೆ
ಜನಿಸುವಂತೆ ಠೊಣೆಯುತಿಹುದೊ ಅನಘ ಮಾಧವ ೭೧

ಕಾಳುಗರ್ಭವಾಸ ಮತ್ತೆ ಮೂಳ ಬಾಲ ಭಾವ ಕೊಬ್ಬಿ
ಧಾಳಿ ಮಾಳ್ಪ ಯೌವ್ವನದರ ಮೇಲೆ ವಾರ್ಧಿಕ
ಹೇಳಲಳವೆ ತ್ರಿವಿಧ ನೋವ ಬಾಳುಗೆಡಿಸುತಿಹುದು ದೇವ
ಗೋಳು ಬಿಡಿಸಿ ಕಾವ ವಿಭುವು ನೀನೆ ಮಾಧವ ೭೨

ಶರಣ ಜನರಪಾಲ ಕಲ್ಪತರು ದಯಾ ಸ್ವರೂಪನೆಂದು
ಧರೆಯೊಳಖಿಳ ನಿಗಮವುಸುರುತಿರಲು ನಿನ್ನಯ
ಚರಣವಾಂತೆ ಶಿರದೊಳಿನ್ನು ಕರುಣವಿಲ್ಲದಿರುವುದೇನೊ
ಮರೆಯದಿನ್ನು ಸಲಹಿ ಬಿರುದನುಳುಹೊ ಮಾಧವ ೭೩

ಹಿಂದೆ ನಾನನಾಥನಾಗಿ ನಿಂದು ಹಲವು ಜನ್ಮದಲ್ಲಿ
ಬಂದು ನರಕ ಯಾತನೆಯಲಿ ನೊಂದು ಬಳಲಿದೆ
ಒಂದೆ ನಿನ್ನ ಹೆಸರುಗೊಂಡು ನಿಂದೆ ನಾ ಸನಾಥನಾಗಿ
ಮುಂದೆ ಸಲಹಬೇಕೊ ಕರುಣದಿಂದ ಮಾಧವ ೭೪

ಹಲವು ಮಾತನಾಡಲೇಕೆ ಒಲಿವುದಿನ್ನು ಹರಿಯೊ ನಿನ್ನ
ಸಲಿಗೆಯಿಂದ ಬಿನ್ನಪವನು ಸಲಿಸಿ ನಿಂದೆನು
ಕಲುಷ ಜನ್ಮ ಬಾರದಂತೆ ಸಲಹಬೇಕು ಮುಂದೆ ಮುಕ್ತಿ
ಲಲನೆಯೊಡನೆ ಸುಖದಲಿರುವ ತೆರದಿ ಮಾಧವ ೭೫

ಲೇಶವರಿಯೆ ನಾನು ನಿನ್ನ ದಾಸನೆಂದು ಡಂಗುರವನು
ಹೊಯ್ಸಿ ತಿರುಗುತಿರಲು ಮೋಹಪಾಶ ಬಿಗಿಯುತೆ
ಘಾಸಿಗೊಳಿಸುವಂಥ ಪಂಥವಾಸಿಯೇನೊ ವಾಸುದೇವ
ಮೋಸ ಮಾಡದೆನ್ನ ಸಲಹೊ ಶ್ರೀಶ ಮಾಧವ ೭೬

ಏತಕ್ಕೆಯ ಇಷ್ಟು ಛಲವು ದೂತನನ್ನು ಬಳಲಿಸಿದರೆ ಖಿ-
ನ್ನತಿ ಬರುವುದೇಳೊ ಜಗನ್ನಾಥ ಪೇಳೆಲೊ
ಮಾತ ಮನ್ನಿಸಿನ್ನು ಭವದ ಭೀತಿ ಬಿಡಿಸಿ ಪ್ರೀತಿಯಿಂದ
ಸೋತು ಮುಗಿದೆನ್ನೆಯ ಕರವ ಪೂತ ಮಾಧವ ೭೭

ಹುಟ್ಟಿ ಹೊಂದಿ ಬೇಡಿ ಬಳಲಿ ಕೆಟ್ಟು ಪಾರತಂತ್ರ್ಯದಲ್ಲಿ
ಕಷ್ಟ ನಷ್ಟಗಳಿಗೆ ಬಿದ್ದ ದುಃಖದನುಭವ
ಇಷ್ಟು ನಿನಗೆ ಇಲ್ಲಿ ಒದರಿನೆಷ್ಟು ಮೊರೆಯನಿಟ್ಟರಿನ್ನು
ಪುಟ್ಟದಾಯ್ತೆ ಕರುಣಾ ಪುಣ್ಯಪುರುಷ ಮಾಧವ ೭೮

ನಾಚಿಕಿಲ್ಲ ಹೇಸಿಕಿಲ್ಲ ಊಚ ನೀಚವೆಂಬುದಿಲ್ಲ
ಯೋಚಿಸುವುದು ಆಚರಿಪುದು ಕ್ವಚಿತು ಇಲ್ಲವೊ
ಈ ಚರಾಚರದೊಳು ನಿನಗೆ ಗೋಚರಿಸದ ವಿಷಯವಿಲ್ಲ
ಖೇಚರರಿಗೆ ಸೂಚಿಸದಿಹ ಮಹಿಮ ಮಾಧವ ೭೯

ದೂರದಲ್ಲಿ ಇರುವಿಯೇನೊ ಚೀರಿ ಮೊರೆಯನಿಟ್ಟು ಬೇಡ
ಲಾರು ನೀನು ಎಂದು ಬೇಡದಿರುವುದುಚಿತವೆ
ಧಾರುಣಿಯೊಳಗಿನ್ನು ನಾನು ಭಾರವೇನು ಪೇಳೊ ದೇವ
ಸಾರಿದವರ ಪೊರೆದ ಕೀರ್ತಿಯಾಂತ ಮಾಧವ ೮೦

ಏಕಮೇವ ಅದ್ವಿತೀಯನೋಕನೀಯನೆಂದು ಶ್ರುತಿ ವಿ-
ವೇಕವಾತು ಸಾರುತಿಹುದು ಮಾಕಳತ್ರನೆ
ಆ ಕಮಲಭವಾದಿ ಸುರರನೇಕ ವಿಧದಿ ಗುಣಿಸೆ ಮನಕೆ
ತಾಕದಿಪ್ಪ ಸುಗುಣಪೂರ್ಣ ಮಹಿಮ ಮಾಧವ ೮೧

ಒಡವೆ ವಸ್ತ್ರವನ್ನು ಕೊಡುವೆ ಮಡದಿ ಮಕ್ಕಳನ್ನು
ಕೊಡುವೆ ಪೊಡವಿ ಭಾಗ್ಯವನ್ನು ಕೊಡುವೆ ತಡವ ಮಾಡದೆ
ಅಡಿಯ ಮೇಲೆ ಮಾಡಿ ಶಿರವ ಕಡಿಯಲಿಟ್ಟು ಅಡರಲಿನ್ನು
ದೃಢದ ಭಕ್ತಿ ಮಾತ್ರ ಕೊಡೆಲೊ ಒಡೆಯ ಮಾಧವ ೮೨

ಕೋಟಿ ದ್ರವ್ಯವಿಟ್ಟು ಕೊಂಡೂ ಕಾಟಿಯನ್ನ ತಿನ್ನುತಿಹನು
ನೀಟು ಕವಡೆಯಿಲ್ಲದವಗೆ ಸೌಖ್ಯದೂಟವು
ಆಟವಲ್ಲ ಕಂಡ ಮಾತು ಏಟು ಪೋಟುಗಳಿಗೆ ಸಿಗದ
ಮಾಟಗಾರ ನಿನಗದಾರು ಸಾಟಿ ಮಾಧವ ೮೩

ನಿನ್ನ ನಾಮ ರತ್ನಕೋಶವನ್ನು ಕದ್ದ ಕಳ್ಳ ನಾನು
ನಿನ್ನ ಭಕ್ತಿಪಾಶದಿಂದಲೆನ್ನ ಬಂಧಿಸಿ
ನಿನ್ನ ಭಕ್ತಿ ಜನರಿಗೊಪ್ಪಿಸಿನ್ನು ನಿನ್ನ ದುರ್ಗದಿರಿಸಿ
ಎನ್ನನೆಂದು ಬಿಡದಿರ್ರೈಯ ಘನ್ನ ಮಾಧವ ೮೪

ನೀರಿನೊಳಗೆ ಎನ್ನನದ್ದು ಕ್ಷೀರದೊಳಗೆ ಅದ್ದು ಎನ್ನ
ಭಾರವನ್ನು ಒಪ್ಪಿದೆನೊ ನಿನ್ನ ಚರಣಕೆ
ಹೇರನಿತ್ತಮೇಲೆ ಸುಂಕವೇರಿಸುವರೆ ಲೋಕದೊಳಗೆ
ದೂರ ತಿಳಿದು ನೋಡಿ ಸಲಹೊ ಧೀರ ಮಾಧವ ೮೫

ಯಾರು ವಂದಿಸಿದರೆ ಏನು ಯಾರು ನಿಂದಿಸಿದರೆ ಏನೊ
ಯಾರು ಶಾಪಿಸಿದರೆ ಏನೊ ಏನೊ ಕೋಪಿಸೆ
ಯಾರು ಮಾತ ಬಿಟ್ಟರೇನು ಯಾರು ಬಾಕಿ ಬಿಟ್ಟರೇನು
ಮಾರುತೀಶ ನಿನ್ನ ಪ್ರೀತಿಯಿರಲು ಮಾಧವ ೮೬

ನಿನ್ನ ವಾರ್ತೆ ಕೇಳಲಿಲ್ಲ ನಿನ್ನ ಯಾತ್ರೆ ಪೋಗಲಿಲ್ಲ
ನಿನ್ನ ಮೂರ್ತಿ ನೋಡಲಿಲ್ಲ ಘನ್ನ ಮಹಿಮನೆ
ನಿನ್ನ ಸ್ಮರಣೆ ಮಾಡಲಿಲ್ಲ ನಿನ್ನ ಚರಣ ಪಿಡಿಯಲಿಲ್ಲ
ನಿನ್ನ ಕರುಣೆ ಪಡೆಯಲಿಲ್ಲವಿನ್ನು ಮಾಧವ ೮೭

ಯಾವ ಜನ್ಮದವಳೊ ತಾಯಿ ಯಾವ ಜನ್ಮದವನೊ ತಂದೆ
ಯಾವ ಜನ್ಮದವರೊ ಸತಿಯು ಸುತರು ಭ್ರಾತರು
ಯಾವ ಜನ್ಮದವರೊ ಬಳಗ ಯಾವ ಜನ್ಮದವರೊ ಹಿತರು
ಯಾವ ಜನ್ಮದವರೊ ಭೃತ್ಯವರ್ಗ ಮಾಧವ ೮೮

ಮನವ ನೋಡಿ ಹಿಗ್ಗುತಿಹರು ಧನವ ನೋಡಿ ಹಿಗ್ಗುತಿಹರು
ವನಿತೆ ಮುಖವ ನೋಡಿ ಹಿಗ್ಗುತಿಹರು ಕೆಲವರು
ತನಯರನ್ನು ಕಂಡು ಹಿಗ್ಗಿ ಮನದಿ ಹರ್ಷಿಸುವರು ಜಗದಿ
ನನಗೆ ನಿನ್ನ ನೆನೆಯುತಿಹುದೆ ಹಿಗ್ಗು ಮಾಧವ ೮೯

ಬಡವನೆಂದು ಮಿಡುಕಿ ದುಃಖಬಡದೆ ದೃಢವ ಹಿಡಿದು ನಿತ್ಯ
ಜಡನ ತೆರದಲೊಡನೆ ಬಹರ ಕಡೆಗೆ ನೋಡದೆ
ಪಡೆದ ತಾಯಿ ತಂದೆ ಮತ್ತೆ ಮಡದಿ ಮಗಳು ಪೊಡವಿ ಭಾಗ್ಯ
ಒಡೆಯ ನಿನ್ನದೆಂದು ಬಿಡಲು ಕೆಡಿಸೆ ಮಾಧವ ೯೦

ಕೆಟ್ಟೆನೆಂದು ಬಳಲಲೇಕೆ ಗುಡ್ಡಬೆಟ್ಟ ತೊಳಲಲೇಕೆ
ಹೊಟ್ಟೆಗಾಗಿ ಪರರ ಕಷ್ಟಬಡಿಸಲೇತಕೆ
ಸೃಷ್ಟಿಮಾಡಿದಂಥ ದೇವ ಬಿಟ್ಟು ಬಿಡುವನಲ್ಲವೆಂದು
ಘಟ್ಟಿ ಮನದಿ ಮುಟ್ಟಿ ಭಜಿಸಲೊಲಿವೆ ಮಾಧವ ೯೧

ಜಾರ ಕರ್ಮಕೆಲ್ಲ ಗೋಪಿ ಜಾರನೆಂಬ ನಾಮವಿಹುದು
ಚೋರ ಕರ್ಮಕೆಲ್ಲ ಬೆಣ್ಣೆಗಳ್ಳನೆಂಬುದು
ಕ್ರೂರತನಕೆ ಮಾವನೊಡನೆ ಹೋರಿಕೊಂಡನೆಂಬುದಿಹುದು
ಮೂರು ಪಾಪವಳಿಯೊ ಮೂರು ನಾಮ ಮಾಧವ ೯೨

ಕೊಟ್ಟು ಹೋಗೊ ಸಾಲವನ್ನು ಸೃಷ್ಟಿಗೊಡೆಯ ನೀನು ಕಣ್ಣ
ಬಿಟ್ಟರಂಜಿ ಬಿಡುವನಲ್ಲ ಎಷ್ಟು ಮಾಡಲು
ಘಟ್ಟಿ ಭಕ್ತಿಪಾಶದಿಂದ ಕಟ್ಟಿ ನಿನ್ನನಿಲ್ಲಿ ಬಿಡದ
ಬಿಟ್ಟುಕೊಂಬೆನೆನ್ನ ಮನದಿ ದಿಟ್ಟ ಮಾಧವ ೯೩

ಕಾಲ ತೂಗಿ ಅಡಿಯನಿಡಲು ಮೂಲ ಬೇರ ತಿನ್ನುತಿರಲು
ಮೇಲೆ ಹಾರಿ ಬೀಳುತಿರಲು ಬೇಡಿಕೊಳ್ಳಲು
ಭೂ ಲತಾಂಗಿಯನ್ನು ಬಿಡಲು ಶೀಲನಾಗಿ ತೊಳಲುತಿರಲು
ಬಾಲ ಭಾವ ತೋರುತಿರಲು ಬಿಡೆನು ಮಾಧವ ೯೪

ಹತ್ತರೇನು ಇಲ್ಲವೆಂದು ಬತ್ತಲಾಗಿ ನಿಂದು ಕುದುರೆ
ಹತ್ತುತೆತ್ತಲೋಡೆ ಬಿಡೆನು ಭಕ್ತವತ್ಸಲ
ಹತ್ತು ನೂರು ರೂಪನಾಗು ಮತ್ತೆ ಲಕ್ಷರೂಪನಾಗು
ಮುಕ್ತಿ ಕೊಡುವತನಕ ಬಿಡೆನು ಶಕ್ತ ಮಾಧವ ೯೫

ಎನ್ನ ದುರ್ಗುಣವನು ಮರೆದು ನಿನ್ನ ಸುಗುಣದಿಂದ ಪೊರೆದು
ಮನ್ನಿಸಿದರೆ ಎನ್ನ ಜನ್ಮವಿನ್ನು ಸಾರ್ಥಕ
ಎನ್ನ ಮನದ ಧಾವತಿಯನು ಮುನ್ನ ಬಿಡಿಸೆ ನಿನ್ನ ಕೀರ್ತಿ
ಯುನ್ನತಾಹುದೈಯ ಜಗದಿ ಧನ್ಯ ಮಾಧವ ೯೬

ನಿನಗೆ ನೀನೆ ತಿಳಿದು ಸಾಧು ಜನಕೆ ಸುಖವನೀವೆ ನಿತ್ಯ
ನಿನಗೆ ನೀನೆ ತಿಳಿದು ದುಃಖವೀವೆ ಖಳರಿಗೆ
ಅನಿಮಿಷರಿಗೆ ಮಿತ್ರನೆಂದು ದನುಜಗಣಕೆ ಶತ್ರುವೆಂದು
ಮನದ ನೆನವಿನಂತೆ ತೋರ್ಪೆ ಅನಘ ಮಾಧವ ೯೭

ತ್ರಿಗುಣ ರಹಿತನಾಗಿ ನೀನು ತ್ರಿಗುಣಗಳನು ಮನೆಯ ಮಾಡಿ
ತ್ರಿಗುಣ ಕಾರ್ಯಗಳನು ನಡೆಸಿ ತ್ರಿವಿಧರೂಪದಿ
ಜಗದಿ ಜೀವತತಿಯ ನೆರಹಿ ತೊಗಲು ಬೊಂಬೆಯಂತೆ ಕುಣಿಸಿ
ನಗುತ ಕೊಡುವೆ ಕಡೆಗೆ ಯೋಗ್ಯ ಗತಿಯ ಮಾಧವ ೯೮

ನಾನೆ ಕರ್ತನೆಂಬ ನರನು ಹೀನನವನು ಬದ್ಧನವನು
ನಾನು ನಿನ್ನ ಸಂಗಡಿದ್ದು ಮಾಳ್ಪೆನೆಂಬನು
ನಾನು ಪಾಪಗಳಿಗೆ ಕರ್ತ ನೀನು ಪುಣ್ಯಕೆನ್ನುತಿ–
ಹೆನು ತಾನು ಸತ್ವದವನು ಶಾಸ್ತ್ರಮತದಿ ಮಾಧವ ೯೯

ನಾನು ಯಾವುದಕ್ಕು ಸಲ್ಲೆ ನೀನು ಕುಣಿಸಿದಂತೆ ಕುಣಿವೆ
ಹೀನ ಲೇಸು ಕರ್ಮವೆಲ್ಲ ನಿನ್ನವೆನುತ
ಸ್ವಾನುಭವಕೆ ತಂದು ಸತತ ಜ್ಞಾನವಂತನಾಗಿ ನಿನ್ನ
ಧ್ಯಾನ ಮಾಳ್ಪನವನೆ ಮುಕ್ತಿಯೋಗ್ಯ ಮಾಧವ ೧೦೦

ಯಾವ ಜಾತಿಯಾದರೇನು ಯಾವ ಗೋತ್ರವಾದರೇನು
ಯಾವ ದೇಶ ಕಾಲವಾದರೇನು ಸಂತತ
ಪಾವನಾತ್ಮ ನಿನ್ನ ನಾಮ ಓವಿ ಭಜಿಪ ಭಕ್ತಜನರ
ನೋವ ಕಳೆದು ಸುಖವನೀವೆ ದೇವ ಮಾಧವ ೧೦೧

ಒಡಲ ನೆಳಲ ಪರಿಯಲೆಮ್ಮ ಬಿಡದೆ ಸಂಗಡಿದ್ದು ಪೊರೆವೆ
ಒಡವ ಭಾಗ್ಯವಂತರೆಂಬ ಕಡೆಗೆ ನೋಡದೆ
ತೊಡಿಸಿ ಕರುಣ ಕವಚವನ್ನು ದೃಢವ ಹಿಡಿಸಿ ತೊಡರ ಬಿಡಿಸಿ
ಕೊಡುವೆ ಬೇಡಿದಿಷ್ಟಗಳನು ಒಡೆಯ ಮಾಧವ ೧೦೨

ಆಡಿ ಆಡಿಸುತ್ತಲಿರುವೆ ಮಾಡಿ ಮಾಡಿಸುತ್ತಲಿರುವೆ
ನೋಡಿ ನೋಡಿಸುತ್ತಲಿರುವೆ ಪಿಡಿದು ಪಿಡಿಸುವೆ
ಬೇಡಿ ಬೇಡಿಸುತ್ತಲಿರುವೆ ನೀಡಿ ನೀಡಿಸುತ್ತಲಿರುವೆ
ರೂಢಿಯೊಳಗೆ ಜೋಡಿ ಯಾರೊ ನೋಡೆ ಮಾಧವ ೧೦೩

ಎಲ್ಲಿ ನೋಡಿದಲ್ಲಿ ಬೇಡಿದಲ್ಲಿ ನೀಡಿದಲ್ಲಿ ಆಡಿ
ದಲ್ಲಿ ಕೂಡಿದಲ್ಲಿ ಓಡಿದಲ್ಲಿ ಇರುತಿಹೆ
ಒಲ್ಲೆನೆಂಬರಿಲ್ಲ ನಿನ್ನ ಬಲ್ಲೆನೆಂಬರಿಲ್ಲ ನೀನು
ಇಲ್ಲದಿರುವ ನೆಲೆಯು ಜಗದೊಳಿಲ್ಲ ಮಾಧವ ೧೦೪

ಸಿಟ್ಟಿನಿಂದಲಗಸ ಕುದಿಸಿ ಬಟ್ಟೆಯನ್ನು ಒಗೆತಿಹುದು
ಸಿಟ್ಟಿಗಲ್ಲ ಬಟ್ಟೆಗಿನ್ನು ಅಹುದು ನಿರ್ಮಲ
ಗುಟ್ಟು ತಿಳಿಯಿತೀಗ ನಾವು ಕಷ್ಟಪಡುವುದೆಲ್ಲ ಮುಂದೆ
ಶಿಷ್ಟರಾಗಲಿಕ್ಕೆ ಸೃಷ್ಟಿಗೊಡೆಯ ಮಾಧವ ೧೦೫

ಹಿಂದೆ ಗಳಿಸಿ ಇರುವುದೊಂದು ಇಂದು
ಮಾಡುತಿಹುದು ಒಂದು
ಮುಂದೆ ಮಾಡಲಾಪುದೊಂದು ತ್ರಿವಿಧ ಕರ್ಮದಿ
ಕಂದಿ ಕುಂದಿ ಬೆಂದು ನೊಂದ ಮಂದ ಮಾನವರಿಗೆ ನಿನ್ನ –
ದೊಂದೆ ನಾಮದಿಂದ ಮುಕ್ತಿ ತಂದೆ ಮಾಧವ ೧೦೬

ಜಯತು ಜಯತು ಮಂಗಳಾಂಗ ಜಯತು ಜಯತು ನಾರಸಿಂಗ
ಜಯತು ಜಯತು ಕೃಪಾಪಾಂಗ ಜಯತು ಅಚ್ಯುತ
ಜಯತು ಜಯತು ದುಷ್ಟ ಶಿಕ್ಷ ಜಯತು ಜಯತು ಶಿಷ್ಟರಕ್ಷ
ಜಯತು ಜಯತು ಮುಕ್ತಿದಾತ ನಾಥ ಮಾಧವ ೧೦೭

ಬಾಲಕೃಷ್ಣ ದಾಸವರ್ಯ ಬಾಲ ಲಕ್ಷ್ಮಿನಾರಾಯಣನು
ಶೀಲ ಭಕ್ತಿಯಿಂದಲೀ ಸುಲಲಿತ ಗೀತೆಯ
ಮಾಲೆಗೈದು ಅರ್ಪಿಸಿದನು ಕಾಲ ಕಾಲದಲ್ಲಿ ಸಂತ
ಜಾಲ ನುಡಿದ ಸೂಕ್ತಿಗಳನು ತಾಳಿ ಮಾಧವ ೧೦೮

ಇಂತು ಲಕ್ಷ್ಮಿಕಾಂತ ಎನ್ನ ಸ್ವಾಂತದಲ್ಲಿ ನೀನು ನಿಂತು
ಎಂತು ನುಡಿಸಿದಂತೆ ನುಡಿದೆ ವೀಣೆಯಂದದಿ
ಸಂತತವಿದನಾರು ಭಕ್ತಿಯಾಂತು ಪಠಿಸಿ ಕೇಳ್ವರವರ
ಚಿಂತೆ ಬಿಡಿಸಿ ಕಾಯೊ ದಂತಿ ವರದ ಮಾಧವ ೧೦೯

## ೨೭೮

ಅಗಲಿರಲಾರೆನೊ ಹರಿಯೆ ನಿನ್ನನು ಪ

ಹಗಲು ಇರಳು ಸಮ್ಮೊಗದಲಿರುತಿಹ
ಮಿಗೆ ಭಾಗ್ಯವ ಕೊಡೊ ನಗೆಮೊಗದರಸನೆ ಅ.ಪ.

ಅನುದಿನ ನಿನ್ನಯ ಚರಣ ವನಜಕೆ
ಮಣಿಯುವುದೆನಗಾಭರಣ
ಅನಿಮಿಷರೊಡೆಯನೆ ಅನಿಮಿತ್ತ ಬಂಧುವೆ
ಪ್ರಣತ ಜನ ಮಂದಾರ ಮುಕುಂದನೇ ೧

ಮಾರ ಜನಕ ಎನ್ನ ಕರುಣದ
ಪಾರ ಪ್ರಭುವರೇಣ್ಯಾ
ಸಾರಸನಯನ ಉದಾರ ಹೃದಯ ಗಂ
ಭೀರ ಗುಣಾಂಬುಧಿ ಸಾರಸನಾಭನೇ ೨

ಮಂಗಳಾಂಗ ಹರಿಯೇ– ತವಪದ
ಭೃಂಗನೆನಿಸೊ ದೊರೆಯೆ
ತುಂಗವಿಕ್ರಮನೆ ರಥಾಂಗ ಪಾಣಿ ಭವ
ಭಂಗ ಕರಿಗಿರಿ ನೃಸಿಂಗ ಶುಭಾಂಗನೆ ೩

## ೨೭೯

ಅಪರಾಧ ಕ್ಷಮಿಸಿ ನೀ ಕೃಪೆಯಿಂದ ಸಲಹಯ್ಯ
ಸುಪವಿತ್ರ ಗಾತ್ರ ಸಾರಸ ನೇತ್ರ ಪ

ಉಪಕಾರವಾಯಿತು ನೀ ಗೈದ ಶಿಕ್ಷೆಯು
ವಿಪರೀತ ಮತಿ ಭ್ರಾಂತಿ ಪರಿಹಾರವಾಯಿತು ಅ.ಪ.

ಜಗವ ಸೃಷ್ಟಿಪೆ ನೀನು ಜಗದ ನಿಯಾಮಕ
ಬಗೆಯಲು ಸೂತ್ರಧಾರಿಯು ನೀನೆ
ತೊಗಲು ಬೊಂಬೆಗಳಂತೆ ನೀ ಕುಣಿಸುವೆ ಜಗವ
ಬಗೆ ತಿಳಿಯದೆ ಜನರು ಬಯಲು ಭ್ರಾಂತಿಯಿಂದ
ಮಿಗೆ ಕರ್ತೃತ್ವವ ತಮ್ಮಲಿ ತಿಳಿಯುತ
ಹಗರಣ ಪೊಂದುವುದ ನೀಗಿಸುವುದು
ಬಗೆಯೆ ನಿನ್ನ ಪರಮಾನುಗ್ರಹವು
ಮುಗಿವೆ ಕರಗಳನು ಕರಿಗಿರಿನಿಲಯ ೧

## ೨೮೦

ಆದಿಮೂಲ ಪಾಲಯಾ ಮಾಂ ಪ

ವೇದವೇದ್ಯ ಕರುಣೋದಧಿ ಎನ್ನಪ-
ರಾಧಗಳೆಣಿಸದೆ ಮೋದದಿ ಸಲಹೊ ಅ.ಪ.

ಜಗದುತ್ಪತ್ತಿ ಸ್ಥಿತಿಲಯ ಕಾರಣ
ಅಘಹರ ಅನಿಮಿಷ ಪೂಜಿತ ಚರಣ ೧

ಪರಮ ಪುರುಷ ಪರಮಾತ್ಮ ಪರಾತ್ಪರ
ಪರತರ ಪಾವನ ದುರಿತ ವಿದೂರ ೨

ಸಕಲ ವ್ಯಾಪಕ ಸುಖನಿರವಧಿಕ
ಮುಕುತಿದಾಯಕ ಮೂರ್ಜಗನಾಯಕ ೩

ಆರ್ತಬಂಧು ಲೋಕೋತ್ತರ ಮಹಿಮ ಕೃ–
ತಾರ್ಥನ ಮಾಡು ಪವಿತ್ರ ಚರಿತ್ರ ೪

ಪರಿಪರಿ ಜನ್ಮದ ಪರಿಭ್ರಮಣೆಯ ನೀ
ಪರಿಹರಿಸೈ ಶ್ರೀ ಕರಿಗಿರೀಶನೇ ೫

## ೨೮೧

ಅನೆಂತು ವರ್ಣಿಸಲಿ ಆ ದಿವ್ಯ ಮೂರುತಿಯನ ಪ

ಆನಂದಮಯ ನಮ್ಮ ಆನಂದಕಂದನನು ಅ.ಪ.

ಆ ಪಾದ ಆ ಜಾನು ಆ ನಡುವು ಆ ನಾಭಿ
ಆ ವಕ್ಷ ಆ ಬಾಹು ಆ ಮುಖದ ಭಾವ
ಆ ನೇತ್ರ ಆ ನಿಲುವು ಆ ಮಂದಹಾಸಗಳ
ಆದ್ಯಂತ ಬಣ್ಣಿಸಲು ಆದಿಶೇಷಗೆ ವಶವೆ ೧

ಆವನಿಗೆ ಸಮರಧಿಕರಿಲ್ಲವಾತಗಿನ್ನು
ಆವಸಾಮ್ಯವ ಕೊಟ್ಟು ಬಣ್ಣಿಸುವೆನು
ಆವನೀ ಜಗಕ್ಕೆಲ್ಲ ಆಧಾರವಾಗಿಹನೊ
ಆವನಂಘ್ರಿಗಳ ಮುನಿಗಳಾವಾಗ ಚಿಂತಿಪರೊ ೨

ಆವ ಮಂಗಳ ಮೂರ್ತಿಯಾ ಲಕ್ಷಣಗಳೆಲ್ಲ
ಆವ ಶಾಸ್ತ್ರದೊಳುಂಟು ಅವನಿಯೊಳಗೆ
ಆ ವಾಸುದೇವ ತಾನಾವಾಗಲೆಲ್ಲರೊಳು
ಆವಾಸವಾಗಿಹನು ಆ ಕರಿಗಿರೀಶನು ೩

## ೨೮೨

ಆರೋಗಣೆಯ ನೀ ಮಾಡಯ್ಯಾ ಯದುಕುಲ
ವಾರಿಧಿ ಚಂದ್ರಮನೆ ಪ

ಸಾರಸನಯನ ಅಪಾರಮಹಿಮ ಕರು
ಣಾರಸ ಪರಿಪೂರ್ಣಸಾರ ಭೋಕ್ತನೆ ಸ್ವಾಮಿ ಅ.ಪ.

ಬಡವನು ನಾ ನಿನಗೆ ಕೊಡಲರಿಯೆನೊ ಸ್ವಾಮಿ
ಪೊಡವಿಗೊಡೆಯ ನಿನ್ನ ಅಡಿಭಕ್ತ ನಾನಯ್ಯ
ಕಡಲಶಯನ ಒಂದು ಕುಡಿತೆ ಪಾಲನು ನಿನಗೆ
ಕೊಡುವೆನು ನಿತ್ಯತೃಪ್ತ ಒಡನೆ ಸ್ವೀಕರಿಸಯ್ಯಾ
ಮೃಡವಂದಿತ ಪದಜಡಜಯುಗಳದಲಿ
ದೃಢಭಕ್ತಿಯ ನೀ ಕೊಡು ಕೈ ಬಿಡದಲೆ
ನುಡಿಗೆ ನುಡಿಗೆ ನಿನ್ನ ನಾಮವ ನುಡಿಸಯ್ಯ
ಬಡವರ ಬಂಧುವೆ ಕರಿಗಿರೀಶನೆ ೧

## ೨೮೩

ಈತನೇ ಪರಾತ್ಪರನು ಖ್ಯಾತ ನಿಗಮ ಸನ್ನುತ ಪ

ವೀತ ಶೋಕ ಭಯ ವಿದೂರ
ಮಾತುಳಾಂತಕ ಮದನ ಜನಕ ಅ.ಪ.

ಆದಿಮಧ್ಯಾಂತರಹಿತ – ವೇದ ಪೀಠನ ಜನಕನೀತ
ಆದಿಮೂಲ ಅನಘ ಅಚ್ಯುತ ಅಪ್ರಮೇಯ ಅಮರವಂದಿತ ೧

ನಿತ್ಯತೃಪ್ತ ನಿಖಿಲವ್ಯಾಪ್ತ ಸತ್ಯಸಂಕಲ್ಪ ಸ್ವರತ
ಹಸ್ತಿವರದನಾದಪರ ವಸ್ತುವೆನಿಸಿದ ಖ್ಯಾತ ೨

ಸೃಷ್ಟಿಸ್ಥಿತಿಲಯಾದಿಕರ್ತ, ದುಷ್ಟದಮನ ಗೈಯುತಲೀತ
ಕೃಷ್ಣರೂಪದಿಂದಲೆಸೆವ ಶ್ರೇಷ್ಠದೈವ ಶ್ರೀ ಕರಿಗಿರೀಶ ೩

## ೨೮೪

ಉಪಕೃತಿ ಎನ್ನದಲ್ಲ ನರಹರಿ
ಕೃಪೆ ಕಾರಣವಿದಕೆಲ್ಲ ಪ

ಅಪರಾಧಗಳನು ಮನ್ನಿಸಿ ಪೊರೆಯುವ
ವಿಪುಲ ಕೃಪಾನಿಧಿ ಹರಿಯಲ್ಲದೆಲೆ ಅ.ಪ.

ಜೀವ ಪರಾಧೀನ ಸ್ವತಂತ್ರ ರಾ
ಜೀವದಳನಯನ
ಸರ್ವೋತ್ತಮ ಪ್ರಭು ಕರಿಗಿರೀಶನೆ ಜಗ
ಜೀವನ ಪಾವನ ಪ್ರೇರಕನಲ್ಲದೆ ೧

## ೨೮೫

ಎಂತು ಜೀವಿಪೆನಯ್ಯಾ ನಿನ್ನನಗಲಿ ನಾನು
ಶಾಂತ ಮೂರುತಿ ಕೃಷ್ಣ ಕೃಷ್ಣಯ್ಯಾ ಪ

ದಂತಿವರದ ಭಕ್ತ ಚಿಂತಾಮಣಿಯೆ ಲಕ್ಷ್ಮೀ
ಕಾಂತ ಸಕಲ ಜಗದಂತರಾತ್ಮಕ ದೇವ ಅ.ಪ.

ಅಂಗಜಪಿತ ನಿನ್ನ ಅನುಪಮ ರೂಪವ
ಕಂಗಳಿಂದಲಿ ನಿನ್ನ ನಿತ್ಯ ನೋಡಿ ನಲಿಯುತ
ತುಂಗಮಹಿಮ ನಿನ್ನ ಘನ ಕೃಪೆಯಿಂದ ಅಂತ-
ರಂಗದ ಭಕ್ತ ನಾನೆಂದೆನಿಸಿರಲಾಗಿ
ಮಂಗಳಾಂಗ ಮನೋಹರ ನಿನ್ನ
ಸಂಗ ಬಿಟ್ಟಿರಲಾರೆನೋ ಸ್ವಾಮಿ
ರಂಗ ಎನ್ನಂತರಂಗವರಿಯಯಾ
ಇಂಗಿತಜ್ಞ ನೀನಲ್ಲವೇ ಕೃಷ್ಣ ೧

ಇಂದಿರೇಶನೆ ನಿನ್ನ ಚರಿತೆಯ ಕೇಳಿ ಆ-
ನಂದದ ಸವಿ ಕಂಡ ಪುಣ್ಯಾತ್ಮರಿಗೆ ಬೇರೆ
ಒಂದರಲಭಿರುಚಿ ತೋರ್ಪುದೆ ಗುಣಗಣ
ಸಿಂಧು ನಿನ್ನನು ಬಿಟ್ಟೇನೊಂದ ನಾನೊಲ್ಲೆನು
ಸಿಂಧು ಮಂದಿರ ಸುಂದರ ನಿನ್ನ
ಪೊಂದಿಕೊಂಡಿಹನಲ್ಲವೇ ಕೃಷ್ಣ
ತಂದೆ ಕೈ ಬಿಡಬೇಡವೊ ಎಳ-
ಗಂದಿಯೆಂಬುದ ನೆನೆದು ಪಾಲಿಸೊ ೨

ದೋಷ ರಹಿತ ಯಾದವೇಶ ಭಕ್ತರ ಪೋಷ
ಶ್ರೀಶ ಕರಿಗಿರೀಶ ಸಕಲ ಲೋಕೇಶ
ವಾಸವಾರ್ಚಿತ ಪಾದ ಭೂಸುರ ಪ್ರಿಯ ಎನ್ನ
ದೋಷಗಳೆಣಿಸದೆ ನೀ ಸಲಹಲಿ ಬೇಕೊ
ವಾಸುದೇವ ಪರಾತ್ಪರ ಕೃಷ್ಣ
ಕ್ಲೇಶ ಪರಿಹರನಲ್ಲವೆ ಸ್ವಾಮಿ
ದಾಸ ಜನರಭೀಷ್ಟದಾಯಕ
ನಾ ಶರಣು ಹೊಕ್ಕಿಹೆನು ರಕ್ಷಿಸು ೩

## ೨೮೬

ಎಂಥಾ ಸ್ಥಿತಿಯೆ ಶ್ರೀರಾಮಗೆ ಪ

ಚಿಂತಿತ ಫಲದಗೆ ಚಿಂತಾಪ್ರಾಪ್ತಿಯೆ ಅ.ಪ.

ಲೋಕೈಕನಾಥಗೆ ಈ ಕಪಿನಾಥನು ಸು–
ಗ್ರೀವನು ನಾಥನೆಂದೆನಿಸುವ ಪರಿಯೆ ೧

ಸಕಲ ಲೋಕ ಶರಣ್ಯಗೆ
ಕಕುಲತೆಯಿಂದನ್ಯರಲಿ ದೈನ್ಯವೆ ೨

ಯಾವನನುಗ್ರಹ ಬೇಡುವರು
ಈ ವಿಭುವಿಗೆ ಸುಗ್ರೀವನ ದಯವೆ ೩

ಎಲ್ಲರ ದುಃಖವ ಪರಿಹರಿಸುವನಿಗೆ
ಇಲ್ಲಿ ಸುಗ್ರೀವನೊಳ್ ದೈನ್ಯದ ಮೊರೆಯೆ ೪

ಕರಿಗಿರೀಶನ ಕಾರ್ಯಕೆ ಕಪಿವರ
ನೆರವಾಗುವ ಪರಿ ಮಾಡಿಸುವುದೆ ೫

## ೨೮೭

ಏಕ ಬಾಣ ಬಿಟ್ಟನು ಜಾಣ ಪ

ಏಕ ಬಾಣ ತಾನೇಕ ಗುರಿಯಲಿ
ಏಕ ಸಂಕಲ್ಪದಿ ಏಕ ವಾಕ್ಯವನು ಅ.ಪ.

ಏಕ ದೈವ ಲೋಕೈಕ ಮಹಿಮ ಜಗ–
ದೇಕ ಕಾರಣ ಭಕ್ತ ಶೋಕ ನಿವಾರಣ

ಶ್ರೀಕರ ಶುಭಗುಣ ಸೀತಾರಮಣ ಪೂರ್ಣ
ರಾಕೇಂದು ವದನ ದಿವಾಕರ ಕುಲಭೂಷಣ ೧

ಕಾಕುಜನರ ಬಲು ಶೋಕಕಾರಣ ಕರು
ಣಾಕರ ಶರಣಾಗತ ಜನ ರಕ್ಷಣ
ಶ್ರೀಕಮಲೇಕ್ಷಣ ಲೋಕ ವಿಲಕ್ಷಣ
ಲೋಕವಿನುತ ಶ್ರೀ ಕರಿಗಿರಿ ನಿಕೇತನ ೨

## ೨೮೮

ಏನ ಪೇಳಲಿ ಹರಿಯ ವ್ಯಾಪಾರ ಮಹಿಮೆ ಪ

ಆನಂದ ಆಶ್ಚರ್ಯ ಆಗುವುದು ಎನಗೆ ಅ.ಪ.

ಮರಳಿಗೋಸುಗ ಪೋಗೆ ಮಾಣಿಕ್ಯ ದೊರೆಯಿತು
ಗರಳ ಪಾತ್ರೆಯು ಅಮೃತ ಕಳಶವಾಯ್ತು
ಇರುಳು ಕತ್ತಲೆಯೊಳಗೆ ಮಣಿದೀಪ ಮಿರುಗಿತು
ಕೊರಳಿಗ್ಹಾಕಿದ ಸರ್ಪ ಕಮಲ ಮಾಲಿಕೆಯಾಯ್ತು ೧

ಪಾಪ ಕಾರ್ಯವ ಕೊಳಲು ಪುಣ್ಯ ಸಾಧನವೀವ
ಪಾಪ ಸಾಧನವೀವ ಪುಣ್ಯ ಕಾರ್ಯದಲಿ
ಪಾಪ ಬೀಜದ ಪುಣ್ಯ ಪುಣ್ಯ ಬೀಜದ ಪಾಪ
ಶ್ರೀಪತಿಯ ವ್ಯಾಪಾರ ಈ ಪರಿಯಲಿಹುದು ೨

ಮೃಗಯಾ ವಿಹಾರದಲಿ ಮನವಿಟ್ಟು ನಾ ಬರಲು
ಮೃಗಲಾಂಛನವನ ಕಳೆಯ ಮೀರುವಂಥ
ಮಿಗೆ ತೇಜದೀ ಮಗುವು ಎನಗೆ ದೊರೆತುದು ನರ
ಮೃಗರೂಪಿ ಕರಿಗಿರೀಶನ ಕರುಣವಿಲ್ಲದಲೆ ೩

## ೨೮೯

ಏನು ಕರುಣೆಗೈದೆ ನಳಿನಾಕ್ಷ ಪ

ಈ ನಿನ್ನ ಭಕ್ತನೊಳೇನು ಮಮತೆಯೋ ನಿನಗೆ ಅ.ಪ.

ಹಿಂದೆ ಬಲಿಯು ತಾ ಯಜ್ಞವ ಮಾಡಲು
ಇಂದ್ರ ಪದವು ಪ್ರಾಪ್ತಿ ನಿನ್ನಿಂದಲ್ಲದೆ
ಇಂದು ಆ ಪದವಿಯನತಿಯುಕ್ತಿಯಿಂದಲಿ
ಸಂದೇಹವಿಲ್ಲದೆ ಸೂರೆಗೈದವ ನೀನೆ ೧

ಪರಮ ವಿದ್ವಾಂಸರನು ಧೈರ್ಯಶೀಲರನು
ನೆರೆಮೋಹಗೊಳಿಸುವುದೈಹಿಕ ಭಾಗ್ಯವು
ಪರಮ ಕಾರುಣ್ಯದಿಂದೊಲಿದು ನೀನಿವನನು
ಸಿರಿಮೋಹದಿಂದಲಿ ಪಾರುಮಾಡಿದೆ ದೇವ ೨

ನೀನಿಂದು ಗೈದುದು ಪರಮೋಪಕಾರವು
ನಾನದರೊಳು ಲೇಶದೋಷವೆಣಿಸನಯ್ಯಾ
ಶ್ರೀನಿಧಿ ಕರಿಗಿರೀಶನೆ ನಿನ್ನ ಚರಣಕ್ಕೆ
ಆನಮಿಸುವೆನಿಂದು ದೀನವತ್ಸಲ ಸ್ವಾಮಿ ೩

## ೨೯೦

ಏನು ಪುಣ್ಯವ ಮಾಡಿ ನಾನಿಂದು ನಿನ್ನ ಕಂಡೆ
ದೀನ ವತ್ಸಲ ಸ್ವಾಮಿ ಕೃಷ್ಣ ಪ

ಜ್ಞಾನಗಮ್ಯನೆ ನಿನ್ನ ಕಾಣಲು ಮನದಲ್ಲಿ
ಮೌನಿವರರು ನಿತ್ಯ ಧ್ಯಾನವ ಮಾಡುವರಯ್ಯ ಅ.ಪ.

ಶ್ರುತಿ ಶಾಸ್ತ್ರಗಳನೋದಿ ಮಥನವ ಮಾಡುವ
ಮತಿಸಾಧನದಿಂದ ನಿನ್ನರಸುವರೊ
ಪತಿತಪಾವನ ನಿನ್ನ ಕರುಣವೊಂದಿಲ್ಲದಿರೆ
ಇತರ ಸಾಧನವೆಲ್ಲ ಗತಿದೋರದೋ ಸ್ವಾಮಿ ೧

ನಿನ್ನ ಭಕ್ತರು ಮಾಳ್ಪ ಸಾಧನಂಗಳಿಗೆಲ್ಲ
ನಿನ್ನ ಕಾರುಣ್ಯವೇ ಕಾರಣವಲ್ಲವೆ
ನಿನ್ನ ನುತಿಸ ಬಂದ ನರರ ಕ್ಷೇಮದ ಭಾರ
ನಿನ್ನದೆಂದು ತಿಳಿದು ನೀನಾಗಿ ಪೊರೆಯುವೆ ೨

ಏನೊಂದು ಸಾಧನವರಿಯದ ಎನಗೀಗ
ನೀನಾಗಿ ದಯಮಾಡಿ ಮೈದೋರಿದೆ
ಏನು ಧನ್ಯನೊ ನಾನು ಆನಂದಕೆಣೆಗಾಣೆ
ದಾನವಾಂತಕ ಸ್ವಾಮಿ ಕರಿಗಿರೀಶನೆ ಕೃಷ್ಣ ೩

## ೨೯೧

ಕಂಡೆ ಕಂಡೆನು ಸ್ವಾಮಿಯ ಸುಪ್ರೇಮಿಯಾ ಪ

ಕಂಡೆ ಕಂಡೆನು ಕೃಷ್ಣರಾಯನ
ಪುಂಡರೀಕ ದಳಾಯತಾಕ್ಷನ
ಪಾಂಡವಪ್ರಿಯ ಪಾರ್ಥಸಖನ ಉ
ದ್ದಂಡ ಮಹಿಮ ಸುರೇಂದ್ರವಂದ್ಯನ ಅ.ಪ.

ಕನಕ ನವಮಣಿ ಖಚಿತ । ವಾಗಿಹ ಸಿಂಹಾ
ಸನದೊಳು ಸಲೆ ಶೋಭಿತ । ಸುರುಚಿರ ದಿವ್ಯ
ಘನನೀಲನಿಭರಂಜಿತ । ನಿರ್ಮಲಗಾತ್ರ
ಕನಕರತ್ನ ಕಿರೀಟ ಕುಂಡಲ ಮಣಿ

ಗಣದ ಹಾರಾದಿ ಬಹು ಭೂ
ಷಣಗಳನುಪಮ ಕಾಂತಿಯಿಂದಲಿ
ಮಿನುಗುವತಿ ಲಾವಣ್ಯ ಮೂರ್ತಿಯ ೧

ಕೋಟಿ ಮನ್ಮಥರೂಪನ । ಶ್ರೀಕೃಷ್ಣನ
ಹಾಟಕಾಂಬರಧಾರನ । ಕರುಣಾಮಯ
ನೋಟದಿಂದಲಿ ನೋಳ್ಪನ । ಕಂಬು ಕಂಠನ
ಆಟಮಾತ್ರದಿ ಪ್ರಬಲ ದೈತ್ಯ ಮ
ಹಾಟವಿಯ ನಿರ್ಧೂಮಗೈದನ
ಖೇಟವಾಹನನೆನಿಪ ತ್ರಿಜಗದಿ
ಸಾಟಿಯಿಲ್ಲದ ದೇವದೇವನ ೨

ಮೆರೆವ ದ್ವಾರಕಾಧೀಶನ । ದ್ರೌಪದಿದೇವಿ
ಮೊರೆ ಕೇಳಿ ಸಲಹಿದನ । ಭಜಿಪರ ಅವ
ಸರಕೊದಗುವ ದೇವನ । ಶ್ರೀ ಕೃಷ್ಣನ
ತರಳತನದಲಿ ಗೋಕುಲದಿ ತಾ
ಪರಿಪರಿಯ ಲೀಲೆಗಳ ತೋರಿದ
ಪರಮ ಪುರುಷನ ಕರಿಗಿರೀಶನ
ಸರಿಯಧಕರಿಲ್ಲದ ಸುರೇಶನ ೩

## ೨೯೨

ಕರುಣವೇಕೆ ಬಾರದಯ್ಯಾ ಕರಿವರದನೆ ಪ

ಶರಣ ರಕ್ಷಕನೆಂದು ನಿನ್ನ ಮೊರೆಯ ಹೊಕ್ಕೆನೊ ಸರಸಿಜಾಕ್ಷ
ಮರಣ ಕಾಲದಿ ಮಗನ ಕರೆದ ಪುರುಷ ಪುಣ್ಯ ಶರಧಿಯೇನೊ ಅ.ಪ.

ತುತಿಸಸಲಿಲ್ಲವೆಂದು ಎನ್ನ ಹಿತವಗೈಯದೆ ಜರಿಪರೇನೊ
ತುತಿಸಲಾಪವೇ ಶ್ರುತಿಗಳನ್ನು ಮಿತಿಗೆ ಸಿಲ್ಕದ ನಿನ್ನ ಮಹಿಮೆ ೧

ಏನು ಸಾಧನವವ ಮಾಡಲಿಲ್ಲವೆಂದು ಕೈಬಿಡುವೆಯೇನೊ
ನೀನು ದಯಮಾಡಿದಲ್ಲದೆ ಏನು ಸಾಧನ ಮಾಡಲಾಪೆನೊ ೨

ಪಾಪಪುಣ್ಯ ಕರ್ಮಗಳಿಗೆ ನೀನೆ ಪ್ರೇರಕನಲ್ಲವೇನೊ
ಶ್ರೀ ಪರಾತ್ಪರ ನೀ ಸ್ವತಂತ್ರ ನಾ ಪರಾಧೀನನಲ್ಲವೆ ೩

ಪುಣ್ಯಗೈದವರಲಿ ಕರುಣವನು ಗೈವುದೇನು ಮಹಿಮೆ
ಘನ್ನ ಪಾಪಿಗಳಲಿ ನೀ ಪ್ರಸನ್ನನಾಗಲು ಖ್ಯಾತಿಯಲ್ಲವೆ ೪

ಪತಿತಪಾವನ ದೀನರಕ್ಷಕ ಶ್ರಿತ ಜನಮಂದಾರನೆಂಬ
ವಿತತ ಬಿರುದು ಬರಿದೆ ಪೇಳೋ ಗತಿ ಪ್ರದಾಯಕನಲ್ಲವೇನೊ ೫

ದುರಿತ ರಾಶಿ ನೋಡಿ ಬೆದರಿ ನಿಂತೆಯೇನೊ ನೀನು
ದುರಿತ ದೂರನಲ್ಲವೇ ನಿನ್ನ ಸ್ಮರಣೆ ನೋಡದ ದುರಿತವಿಹುದಿ ೬

ತರಳತನದ ಸಲಿಗೆಯಿಂದ ಪರಿಪರಿಯಲ್ಲಿ ನುಡಿದೆನಯ್ಯಾ
ಪರಮ ತತ್ವವರಿಯೆ ನಾನು ಪೊರೆಯೊ ಎನ್ನ ಕರಿಗಿರೀಶ ೭

## ೨೯೩

ಕರುಣಾಕರ ಕೃಷ್ಣ ಪ

ಮರೆಯದೆ ಕಾಯೊ ಮೊರೆಯಿಡುವೆ ದೇವ ಅ.ಪ.

ಸರಸಿಜಾಕ್ಷಸ್ವಾಮಿ
ಮೆರೆದ ಸಭೆಯೊಳು ಕರುಣದಿ ಕಾಯ್ದೆಯೊ ೧

ಅನಿಮಿತ್ತ ಬಂಧುವೆ ಹರೆ
ಅನುದಿನ ಎನ್ನ ಮಾನ ನಿನ್ನಾಧೀನ ೨

ಕರಿಗಿರೀಶ ಶ್ರೀಶ
ದುರುಳನ ಬಾಧೆಯ ಪರಿಹರಿಸೋ ದೇವ ೩

## ೨೯೪

ಕಳವಳಿಪುದೆನ್ನ ಮನ ಕಮಲಾಕ್ಷ ಬಾರದಿರೆ ಪ

ನಳಿನಸಂಭವ ಲಿಖಿತವೇನಿಹುದೊ ಸಖಿಯೆ ಅ.ಪ.

ಪೋದ ವಿಪ್ರನು ಬರದಿರಲು ಏನು ಕಾರಣವೊ
ಹಾದಿಯಲಿ ವಿಘ್ನ ತಾನೊದಗಿತೊ
ಮಾಧವನಿಗೆನ್ನೊಳು ಮಮತೆ ಬಾರದೆ ಹೊಯ್ತೆ
ಮೇದಿನಿಯೊಳೇಕೆ ನಾ ಪುಟ್ಟಿ ಬಂದನೆ ಸಖಿಯೆ ೧

ನಿನ್ನ ಹೊರತೆನಗಿನ್ನು ಅನ್ಯಗತಿಯಿಲ್ಲೆಂದು
ಭಿನ್ನವಿಸಿಕೊಂಡಿದ್ದೇನಾಯಿತೆ
ಮುನ್ನ ಮಾಡಿದ ಕರ್ಮ ಬಲವಂತವಾಗಿರಲು
ಬನ್ನಪಡಿಸುತಲೆನ್ನ ಬಳಲಿಪುದು ಸರಿಯೆ ೨

ವಸುದೇವ ಸುತನಾಗಿ ಶಿಶುತನದ ಕ್ರೀಡೆಯೊಳ್
ಅಸುರರನು ಸಂಹಾರ ಮಾಡಿದವಗೆ
ಶಿಶುಪಾಲನಾಕಾಲದ ವಶಮಾಡಲಸದಳವೆ
ಕುಸುಮಾಕ್ಷಿ ಕರಿಗಿರೀಶನೆ ಗತಿಯು ಸಖಿಯೆ ೩

## ೨೯೫

ಕಾಪಾಡೆಲೊ ದೇವ ಕರುಣಾರ್ಣವ ಪ

ನಾ ಪಾಪಿಯು ಎಂದು ನೀ ಪರಿ
ಪಾಲಿಸದೀಪರಿಗೈದರೆ ಆಪದ್ಬಾಂಧವ ಅ.ಪ.

ಮೊರೆಯಿಡುವೆನು ಇನ್ಯಾರಿಗೆ । ನೀನಿಲ್ಲದೆ
ಪೊರೆವ ಪ್ರಭುವಾರೆನಗೆ । ಶರಣ ಮಂ
ದಾರನೆಂದರಿತು ನಿನ್ನಯ ಪಾದ
ನೆರೆ ನಂಬಿದೆನು ಇನ್ನು ಪೊರೆಯಬೇಕೆನ್ನನು ೧

ಕರಿರಾಜನ ಭಯ ಪರಿಹರಿಸಿದ । ವರ
ಗರುಡಗಮನ ಸಿರಿವರದ । ಜನಾರ್ದನ
ಪರಮ ಪುರುಷ ಶ್ರೀ ಕರಿಗಿರಿ ಮಂದಿರ
ನರಹರಿ ನಮಿಪೆನು ಚರಣ ಸರಸಿಜಕೆ ೨

## ೨೯೬

ತೋರಿಸೊ ತವರೂಪ ತೋಯಜ ನೇತ್ರ ಪ

ಮಾರಜನಕ ಕರುಣಾರಸಪೂರ್ಣನೆ
ನಾರಾಯಣ ಭವತಾರಕ ಮಮ ಸ್ವಾಮಿ ಅ.ಪ.

ದಶರಥ ನಂದನ ವಸುಮತಿ ರಮಣ ತ್ರಿ
ದಶವಂದಿತ ಚರಣ ಪಶುಪತಿಧನುಭೇದನ
ವಸುಧಾಸುತೆರಮಣ ಋಷಿಪತ್ನಿ ಶಾಪಹರಣ
ಅಸಮಾ ವಲ್ಕಲ ಚೀರವಸನಾ ಭೂಷಣಸ್ವಾಮಿ
ಬಿಸಜಾಪ್ತನ ಸುತಗೊಲಿದವನಗ್ರಜ

ನಸುವನು ತೊಲಗಿಸಿ ಅಸುನಾಥನ ಸುತ
ಗೊಸೆದು ಬಿಸಜಭವ ಪದವಿಯ ಕರುಣಿಸಿ
ವಿಷಧಿಯ ಬಂಧಿಸಿದಸಮ ಸಮರ್ಥ ೧

ದಿನಮಣಿವಂಶ ಮಸ್ತಕಮಣಿಯೆಂದೆನಿಸಿ
ಮುನಿ ಕೌಶಿಕನ ಯಜ್ಞಫಲವಾಗಿ ರಕ್ಷಿಸಿ
ಅನಲಾಕ್ಷಧನು ಮುರಿದು ಮುನಿಪತ್ನಿಯನು ಪೊರೆದು
ಜನಕಸುತೆಯ ಕರವನು ಪಿಡಿದ ಧೀರ
ಜನಕನಾಜ್ಞೆಯಿಂ ವನವ ಪ್ರವೇಶಿಸಿ
ಇನಸುತಗೊಲಿಯುತ ಅನಿಲಜನಿಂದಲಿ
ಘನಸೇವೆಯ ಕೊಂಡನಿಮಿಷ ವೈರಿಯ
ಹನನಗೈದ ಹೇ ಅನುಪಮ ಶೂರ ೨

ಲೀಲಾಮಾನುಷರೂಪ ಭೂಲಲನಾಧಿಪ
ಫಾಲಾಕ್ಷವಿನುತ ವಿಶಾಲಸುಕೀರ್ತಿಯು ತಾ
ಆಲಸ್ಯವಿಲ್ಲದೆ ವಿಶಾಲವನವ ಪೊಕ್ಕು
ವಾಲಿಯ ಸಂಹರಿಸಿ ಪಾಲಿಸಿ ಸುಗ್ರೀವನ
ಲೋಲಲೋಚನೆಯಿಹ ಮೂಲವ ತಿಳಿದು ಬಂ
ದ್ಹೇಳಿದ ಪವನಜಗಾಲಿಂಗನವಿತ್ತು
ಖೂಳ ದಶಾಸ್ಯನ ಕಾಲನೆಂದೆನಿಸಿದ
ಶ್ರೀಲೋಲನೆ ಶ್ರೀ ಕರಿಗಿರೀಶನೆ ೩

## ೨೯೭

ದೇವಾದಿ ದೇವ ನಮೋ ಶ್ರೀ ಸತ್ಯದೇವ ಪ

ದೇವಾದಿ ದೇವ ಹರಿ ಗೋವಿಂದ ಮುಕುಂದ
ಭಾವಜನಕ ಸದ್ಭಾವುಕ ಜನಪ್ರಿಯ ಅ.ಪ.

ಶ್ರೀಶಾ ಶಶಿಕೋಟಿ ಸಂಕಾಶ
ಸುಶೋಭಿತ ದರಹಾಸ
ಸಾಧು ಸುಜನ ಪರಿಪೋಷ
ಸಕಲಾಗಮ ಸನ್ನುತ ಸರ್ವೇಶ ಈಶಾ
ಈ ಸಮಸ್ತ ಜಗದೀಶನೆಂದು ನಿನ್ನ
ನಾ ಸ್ತುತಿಸುವೆ ಮನದಾಸೆಯ ಸಲ್ಲಿಸೊ
ವಾಸವಾದಿ ಸುರಮಹಿಮ ಪ
ರೇಶ ಪೂರ್ಣಗುಣ ದಾಸಜನಾವನ
ಕ್ಲೇಶವ ಕಳೆದಿನ್ನು ನೀ ಸರ್ವದ ಎನ್ನ
ಪೋಷಿಸು ಕರಿಗಿರಿ ವಾಸ ಶ್ರೀ ನರಹರಿ ೧

## ೨೯೮

ದೇವಾದಿ ದೇವ ನೀನವಧರಿಸು ಬಿನ್ನಪವ ಪ

ಈ ವಿವಿಧ ಸುರರೊಳಗೆ ಸರಿಯಲ್ಲ ನಿನಗೆ ಅ.ಪ.

ಸರಸಿಜಾಸನ ಶಂಭು ಮೊದಲಾದ ಸುರರೆಲ್ಲಾ
ಪರತಂತ್ರರವರಲಿ ಕೊರತೆಯುಂಟು
ನಿರ್ದೋಷ ನಿರವಧಿಕ ಕಲ್ಯಾಣಗುಣಪೂರ್ಣ
ನಿರ್ದುಃಖ ನಿರತಿಶಯ ನಿರುಪಮಾನಂದಾತ್ಮ
ಸರ್ವಜ್ಞ ಸರ್ವೇಶ ಸರ್ವತಂತ್ರ ಸ್ವತಂತ್ರ
ಸರ್ವವಸ್ತುಗಳಲಿ ಸರ್ವದಾ ಪರಿಪೂರ್ಣ
ಪರಿಪೂರ್ಣಕಾಮ ನಿನ್ನುರದಲೆನಗೆ
ಸ್ಥಿರವಾಸಕೆಡೆಯ ನೀ ಕರುಣದಿಂದಿತ್ತು
ಹರುಷಪಡಿಸುವುದೆನ್ನ ಶರಧಿಮಂದಿರನೆ
ಗಿರಿಯ ಧರಿಸಿದೆ ಕರಿಗಿರೀಶನೆ

## ೨೯೯

ನಂದನಂದನ ಗೋವಿಂದ ಹರಿ ಪ

ಸುಂದರವದನ ಸುರೇಂದ್ರ ಸುವಂದ್ಯ ಅ.ಪ.

ಮಂದರಾದ್ರಿಧರ ಮಾಧವ ಮುರಹರ
ಬೃಂದಾವನ ವಿಹಾರ
ಸುಂದರ ಮುರಳೀಧರ ಸುಮನೋಹರ
ಸಿಂಧುಶಯನ ಸುಖಸಾಂದ್ರ ಪರಾತ್ಪರ ೧

ಕೇಶೀ ಮಥನ ಕಂಸಾಸುರ ಮರ್ದನ
ಭೂಸುರ ಸನ್ನುತ ಶ್ರೀಚರಣ
ದಾಸ ಜನಾವನ ಕರುಣಾಭರಣ
ಕೇಶವಗುಣ ಪರಿಪೂರ್ಣ ೨

ಮುರನರಕಾಂತಕ ಮುಕ್ತಿಪ್ರದಾಯಕ
ಶರಣಾಗತ ಜನ ಪಾಲಕ
ಕರಿಗಿರೀಶ ಕಾಮಿತ ಫಲದಾಯಕ
ಗರುಡಗಮನ ಶ್ರೀ ರುಕ್ಮಿಣಿನಾಯಕ ೩

## ೩೦೦

ನಾಗವೇಣಿಯೆಂದರೆ ಹೀಗೇಕೆ ಮಾಳ್ಪಿರಿ
ಬಾಗಿಲು ಕುಟ್ಟುವುದೇಕೆ ನೀವ್ ಪ

ಬಾಗಿಲು ಬಿಡುವೊಡೆ ಹೇಗದು ಸಾಧ್ಯವೊ
ಬೇಗ ಹೇಳು ನೀನಾರು ಇನ್ನು ಅ.ಪ.

ಆಗಮ ಕದ್ದೊಯ್ದ ಅಸುರನ ಕೊಂದು ನಾ
ನಾನಾಗಲೆ ನಾಲ್ಮೊಗಗಿತ್ತೆ ಕೇಳಿ ಆಗಲೆ
ಆಗಮದಲಿ ನಿನಗರ್ತಿಯಷ್ಟಿದ್ದರೆ
ಮೂಗನ್ಹಿಡಿದು ಕೂಡೋ ಬೇಗ ೧

ಮೂಗನ್ಹಿಡಿವ ಒಣಯೋಗಿಯು ನಾನಲ್ಲ
ಆ ಗಿರಿಯನು ನಾ ಪೊತ್ತೆ ಕೇಳಿ
ಈಗ ನಾವರಿದೆವು ನೀ ಗಿರಿ ಹೊರವಡೆ
ಸೋಗಿನ ಕಳ್ಳ ನೀನೆಂದು ಇಂದು ೨

ಕಳ್ಳನಲ್ಲ ಭೂಮಿ ಕಳ್ಳನ ಕೊಂದೆನೆ
ಒಳ್ಳೆ ಸೂಕರ ನಾನಾಗಿ ಕೇಳಿ
ಘೊಳ್ಳನೆ ನಗುವರು ಕೇಳಿದವರು ಇದ
ಮೆಲ್ಲು ಹೋಗಿ ನೀ ಮಣ್ಣ ೩

ಮಣ್ಣು ಮಾತೇಕೆ ಹಿರಣ್ಯಕನನು ಕೊಂದೆ
ಚಿಣ್ಣನ ಕಾಯ್ದೆನು ಕೇಳಿ
ಚಿಣ್ಣರ ಸಾಕ್ಷಿಯ ಬಿಟ್ಟರೆ ನಿನಗಿಲ್ಲ
ಚಿಣ್ಣನಾಗು ನೀ ಹೋಗೊ ೪

ಸಣ್ಣವನಾದರೂ ಘನ್ನನು ನಾನಾದೆ
ಪುಣ್ಯನದಿಯ ನಾ ಪೆತ್ತೆ ಕೇಳಿ
ಬಿನ್ನಾಣ ಮಾತಿಗೆ ಸೋಲುವರಲ್ಲವೊ
ಬೆನ್ನು ತಿರುಗಿಸಿ ನೀ ಪೋಗೊ ೫

ತಿರುಗಿಸಿದವನಲ್ಲ ಬೆನ್ನನೊಬ್ಬರಿಗೂ ನಾ
ಪರಶುಧರನು ನಾ ಕೇಳಿ
ಅರಸರಲ್ಲ ನಾವ್ ಸರಸಿಜನೇತ್ರೆಯರು
ಕರುಣರಹಿತ ನೀ ಪೋಗೊ ೬

ಚರಣರಜದಿ ನಾ ಶಿಲೆಯನುದ್ಧರಿಸಿದೆ
ಕರುಣರಹಿತನೆ ಪೇಳಿ ನೀವು
ಸರಸ ಮಾತುಗಳನು ಮನ್ನಿಸಿ ಎಮ್ಮನು
ಕರಿಗಿರೀಶ ನೀ ಕಾಯೋ ಸ್ವಾಮಿ ೭

## ೩೦೧

ನಾ ಧನ್ಯ ನಾ ಧನ್ಯ ನಾ ಧನ್ಯನಿಂದು ಪ

ಹೇ ದಯಾನಿಧೇ ನಿನ್ನ ಪಾದಾನುಗ್ರಹದಿಂದ ಅ.ಪ.

ಏತರವ ನಾನೆಂದುದಾಸೀನ ಮಾಡದಲೆ
ಲೇಸು ಮಮತೆಯ ಕೋರಿ ಈ ಸ್ಥಳಕೆ ಬಂದಿ
ಆಸುರೀ ಭಾವವನು ನಾಶಗೊಳಿಸಿ ಎನ್ನ
ನೀ ಸಲಹಿದೆಯೋ ಜಗದೀಶ ನಿರುಪಮ ಕರುಣಿ ೧

ಸತ್ವಗುಣ ಪ್ರಚುರರಲಿ ನೀ ತೋರುವುದಕ್ಕಿಂತ
ಅತ್ಯಧಿಕ ವಾತ್ಸಲ್ಯವೆನ್ನೊಳಗೆ ತೋರ್ಪೆ
ಕರ್ತೃ ನೀನೆಂಬ ತತ್ವ ಮನಸಿಗೆ ತಂದೆ
ಭಕ್ತವಾತ್ಸಲ್ಯಕ್ಕಿದು ಕುರುಹಲ್ಲವೇ ದೇವ ೨

ಸುರಲೋಕಕ್ಕಿಂತಧಿಕ ಪದವಿ ಎನಗಿತ್ತೆ
ನಿರುತಲೆನ್ನಯ ಬೆನ್ನು ಕಾಯುತಲಿರುವೆ
ಕರುಣೆಗೆಣೆಗಾಣೆ ಕರಿಗಿರೀಶನೇ ನಿನ್ನ
ಸ್ಮರಣೆಯನನವರತ ಇರುವಂತೆ ಕೃಪೆಮಾಡೋ ೩

## ೩೦೨

ನಾರದ ಮುನಿವರರೆ । ಸದ್ಗುರುವರ
ನಾರಾಯಣ ಪ್ರಿಯಶ್ರೀ ಪ

ನಾರದ ಮುನಿವರರೆ ನಿಮ್ಮಯ
ಚಾರುಚರಣಕೆ ನಮಿಪೆನು ಆ
ದ್ವಾರಕಾಪುರನಿಲಯ ಕೃಷ್ಣನ-
ಪಾರಮಹಿಮೆಯ ಸಾರ ಪೇಳ್ದಿರಿ ಅ.ಪ.

ಪರಮ ಸುಂದರ ರೂಪನು । ಆ ಕೃಷ್ಣನು
ಪರತರ ಪರಮಾತ್ಮನು
ಶರಣಜನ ಮಂದಾರನಾತನು
ಕರುಣಶರಧಿಯು ಕಾಮಜನಕನು
ಸರಸಿಜೋದ್ಭವ ಸುರರಿಗಧಿಕನು
ಹರಿಯು ಇವನೆಂದರುಹಿದಿರಿ ಗುರು ೧

ಲೋಕಮೋಹಕನಯ್ಯನು । ಶ್ರೀಕೃಷ್ಣನು
ಲೋಕ ವಿಲಕ್ಷಣನು
ಲೋಕ ಕಂಟಕರನ್ನು ಶಿಕ್ಷಿಸಿ
ನಾಕ ನಿಲಯರ ಭರದಿ ರಕ್ಷಿಸಿ
ಲೋಕ ಕಲ್ಯಾಣವನ್ನು ಗೈದ ತ್ರಿ
ಲೋಕದೊಡೆಯನೆಂದರುಹಿದಿರಿ ಗುರು ೨

ಈ ವಿಧಿ ಶುಭರೂಪನ । ಶ್ರೀಕೃಷ್ಣನ
ದೇವಾದಿದೇವೇಶನ
ಪಾವನಾಂಘ್ರಿಗಳನ್ನು ಪೂಜಿಸಿ
ಸೇವಿಸುವ ಸೌಭಾಗ್ಯವೆಂದಿಗೆ
ದೇವ ಕರಿಗಿರಿನಿಲಯ ನರಹರಿ
ಯಿವನೆಂಬುದನೆನಗೆ ತಿಳುಹಿರಿ ೩

## ೩೦೩

ನಿನ್ನದೇ ಸಕಲ ಸೌಭಾಗ್ಯ ಸಾಧನವು ಹರಿಯೆ ಪ

ನಿನ್ನದೆಂಬಭಿಮಾನ ಲವಲೇಶ ಸಲ್ಲದಯ್ಯಾ ಅ.ಪ.

ನಿನ್ನ ಪ್ರೇರಣೆ ಹೊರತು ತೃಣವೊಂದು ಚಲಿಸದು
ನಿನ್ನಿಚ್ಛೆಗನುಸಾರ ಸಕಲ ಜಗವು
ನಿನ್ನ ಚಿತ್ತಕೆ ಬಾರದಿಹುದೇನು ನಡೆಯುವುದೋ
ನಿನ್ನ ನಂಬಿದವರನು ನೀನಾಗೆ ಸಲಹುವೆಯೊ ೧

ಸರ್ವತಂತ್ರ ಸ್ವತಂತ್ರ ಸರ್ವಾಂತರಾತ್ಮಕನೆ
ಸರ್ವಜಗದಾಧಾರ ಸರ್ವೇಶನೆ
ಶರ್ವರೀಚರ ಗರ್ವ ಸಂಹಾರ ಅಘ ದೂರ
ಸರ್ವಕಾಲದಲೆನ್ನ ಗರ್ವರಹಿತನ ಮಾಡೊ ೨

ಸತ್ಯಚಿತ್ತನೆ ನಿನ್ನ ಚಿತ್ತವೆನ್ನಯ ಭಾಗ್ಯ
ಕರ್ತೃತ್ವದಭಿಮಾನ ಕಳೆದು ಕಾಯೊ
ಮತ್ತೇನು ಬೇಡುವೆನು ಪರತಂತ್ರ ನಾನಯ್ಯ
ಮುಕ್ತಿದಾಯಕ ಶ್ರೀಶ ಶ್ರೀ ಕರಿಗಿರೀಶ ೩

## ೩೦೪

ನಿನ್ನ ಬಿಟ್ಟಿರಲಾರೆ ನೀರಜಾಕ್ಷ ಪ

ಘನ್ನ ಮಹಿಮನೆ ನಿನ್ನ ಸನ್ನಿಧಾನವನೀಯೊ ಅ.ಪ.

ಸರ್ವಧರ್ಮಗಳಿಗೆ ನೀನಿಲ್ಲದಿನ್ನಿಲ್ಲ
ಉರ್ವಿಕರಿಗೆ ನೀನೆ ಉರ್ವೀಶನೆ

ನಿರ್ವಿಕಾರ ಮಹಾತ್ಮ ನಿಖಿಲಾಂತರಾತ್ಮಕನೆ
ಸರ್ವದಾ ತವ ಪಾದ ಸೇವೆಯೆನಗೀಯೊ ೧

ತಡವ್ಯಾಕೆ ಬರಲಿನ್ನು ಪೊಡವೀಶ ಯನ್ನೊಡನೆ
ತಡೆಯಲಾರೆನು ನಿನ್ನ ವಿರಹವನ್ನು
ನುಡಿಯಬೇಡವೋ ಎನ್ನ ನೀ ಪೋಗು ಎಂದೆನುತ
ಕಡು ದಯಾನಿಧಿ ನಿನ್ನ ನಾ ಬಿಡೆನೊ ೨

ಆನಂದ ಪರಿಪೂರ್ಣ ಶ್ರೀನಾಥ ನಿನಗೇಕೆ
ಕಾನನಾ ವಾಸವು ಕಮಲನಯನ
ಜ್ಞಾನದಾಯಕ ನಿನ್ನ ಚರಣ ಶರಣನೊ ನಾನು
ದೀನರಕ್ಷಕ ಸ್ವಾಮಿ ಶ್ರೀ ಕರಿಗಿರೀಶ ೩

## ೩೦೫

ನೀನಾರು ಪೇಳೆನಗೆ ನಿರುಪಮ ಬಲಪೂರ್ಣ
ಮಾನವರೊಳೀ ಪರಿಯ ಶೌರ್ಯವುಂಟೆ ಪ

ದಾನವಂತಕನೆಂದು ಮಾನಸಕೆ ತೋರುತಿದೆ
ಪ್ರಾಣಿಗಳಿಗೆಲ್ಲಾ ನೀ ತ್ರಾಣದಾಯಕನೆ ಅ.ಪ.

ಆಕಾರದಲಿ ನೋಡೆ ನರವೇಷಧಾರಿ ಪ
ರಾಕ್ರಮದಿ ಪರಿಕಿಸಲು ಪರಮಪುರುಷ
ಶ್ರೀಕಂಠಚಾಪವನು ಖಂಡಿಸಿದ ಕಡುಧೀರ
ಕಾಕುತ್ಥ ಶ್ರೀರಾಮನೆಂದು ತೋರುವುದೆನಗೆ ೧

ಕೋದಂಡಧರ ನಿನ್ನ ಕ್ರೋಧಾಗ್ನಿಗಂಜುತ ಮ
ಹೋದಧಿಯು ಪಥ ಬಿಡಲು ಲಂಕೆಗೈದಿ
ಆ ದಶಾಸ್ಯನ ಕಂಠಪಂಕ್ತಿಯನು ಕಳಚಿಸಿದ
ಆ ದಾಶರಥಿಯು ನೀನಲ್ಲದೆ ಬೇರಿಲ್ಲ ೨

ಲೋಕಕಾರಣ ನೀನೆ ಲೋಕೇಶ ಲೋಕಧರ
ಲೋಕಾಂತರಾತ್ಮಕನು ಲೋಕಜನಕ
ಲೋಕರಕ್ಷಕ ಸಕಲ ಲೋಕನಿಯಾಮಕನು
ಏಕಮೇವಾದ್ವಿತೀಯನು ಕರಗಿರೀಶನು ನೀನೆ ೩

## ೩೦೬

ನೀರಜಾಕ್ಷ ರಾಮ ಲೋಕಾಭಿರಾಮ ಪ

ನೀರದನಿಭಶ್ಯಾಮ ನಿತ್ಯಮಂಗಳ ನಾಮ ಅ.ಪ.

ನಿನ್ನ ಬಿಟ್ಟು ನಾನು ಅನಾಥನು
ಸನ್ನುತ ಗುಣರನ್ನ ಸತ್ಕೀರ್ತಿ ಸಂಪನ್ನ ೧

ದೇಶಕೊಡೆಯ ನೀನು ದಾಸ ನಿನಗೆ ನಾನು
ಕೌಸಲ್ಯವರಪುತ್ರ ಕೋಮಲ ಶುಭಗಾತ್ರ ೨

ನಿನ್ನ ಸನ್ನಿಧಿವಾಸ ಪುಣ್ಯಫಲವಿಶೇಷ
ಘನ್ನ ಕರಿಗಿರೀಶ ಗಂಭೀರ ಗುಣಭೂಷ ೩

## ೩೦೭

ನೀಲ ಗಗನ ನಿಭ ನಿರ್ಮಲಗಾತ್ರನೆ ಪ

ಬಾಲಶಶಾಂಕನ ಪೋಲ್ವ ಸ್ವಾಮಿ
ಬಾಲಶಶಾಂಕನ ಪೋಲ್ವ
ನೀಲಕುಂತಳ ಪರಿಶೋಭಿತ ಫಾಲಕೆ
ಕುಂಕುಮವ ಹಚ್ಚುವೆನು ೧

ನಳಿನ ನಯನ ಕೋಮಲ ಕಮಲಾನನ
ಚಲುವ ಕರಂಗಳ ತೋರೋ ಸ್ವಾಮಿ
ನಳಿನವ ಪೋಲುವ ಚಲುವ ಕರಕೆ ನಾ
ನರಿಸಿನ ಹಚ್ಚುವೆನೀಗ ಸ್ವಾಮಿ ೨

ಅಂಬುಜನಾಭನೆ ಅಂಬುಧಿ ಗಂಭೀರ
ಶಂಬರಾರಿ ಶತತೇಜ ಸ್ವಾಮಿ
ಕಂಬುಕಂಧರ ತೋರು ಸಂಭ್ರಮದಲಿ ನಾ
ಗಂಧವ ಹಚ್ಚುವೆನೀಗ ಸ್ವಾಮಿ ೩

ಸುಮಶರ ಜನಕನೆ ಸುವಶರ ವೈರಿಯ
ಅಮಿತ ಕಾರ್ಮುಕ ಭಂಜಕ ಸ್ವಾಮಿ
ಸಮ ವಿರಹಿತ ನಿನ್ನ ಕೊರಳಿಗ್ಹಾಕುವೆನೀಗ
ಕುಸುಮ ಮಾಲೆಯ ನಾನು ಸ್ವಾಮಿ ೪

ಸಾರಸಾಪ್ತಕುಲ ವಾರಿಧಿ ಚಂದ್ರಮನೆ
ಧೀರ ವೀರ ದಿತಿಜಾರಿದೇವ
ಶ್ರೀರಘುವೀರ ಶ್ರೀ ಕರಿಗಿರೀಶನೇ ನಿಮ
ಗಾರತಿ ಎತ್ತುವೆ ಸ್ವಾಮಿ ೫

## ೩೦೮

ಪದುಮನಾಭನ ಚರಿತೆಯು ಪರಮಾದ್ಭುತವು ಪ

ಯದುಕುಲ ಲೋಲನ ವಿಧ ವಿಧ ಲೀಲೆಯೊ
ಪದೇ ಪದೇ ನೆನೆಯಲು ಪರಮಹರುಷ ಮನಕೆ ಅ.ಪ.

ದೇವತೆಗಳ ಮೊರೆ ಲಾಲಿಸಿ ಭುವಿಯೊಳು
ದೇವಕಿ ಸುತನಾಗಿ ಜನಿಸಿದನು

ಗೋವಳರೊಡಗೂಡಿ ಗೋವ್ಗಳ ಕಾಯ್ದ ಬೃಂ
ದಾವನ ಲೋಲನು ಶ್ರೀವೇಣುಗೋಪಾಲ ೧

ಕಾಮಜನಕ ಸರ್ವಕಾಮಿತದಾಯಕ
ಕಾಮಿನಿಯರ ಕೂಡೆ ಕ್ರೀಡಿಸಿದನನಘ
ಆ ಮಹಾಭಕ್ತ ಅಕ್ರೂರನಿಗೊಲಿದನು
ತಾಮಸ ಕಂಸನ ಧ್ವಂಸಗೈದನು ದೇವ ೨

ಕರಿಗಿರೀಶ ಮುಚುಕುಂದ ವರಪ್ರದ
ಸರಸಿಜಾಕ್ಷ ಶ್ರೀರುಕ್ಮಿಣಿರಮಣ
ಸುರರಿಪು ನರಕಾಸುರ ಸಂಹಾರಕ
ಸುರಮಾತೆಗೆ ಕುಂಡಲಿಗಳನಿತ್ತನು ೩

## ೩೦೯

ಪರಮಪುರುಷ ಯದುಕುಲೇಶ
ಶರಧಿ ಮಂದಿರವಾಸ ಶ್ರೀಶ ಪ

ಪರಮ ಹರುಷದಿಂದಲೀಗ
ಉರುಟನೆಯ ಮಾಡುವೆನು ಅ.ಪ.

ನೀಲಮೇಘ ವರ್ಣ ನಿನ್ನ ಬಾಲಶಶಿಯ ಪೋಲುವಂಥ
ಫಾಲವನ್ನು ತೋರುಬೇಗ ಕುಂಕುಮವ ಹಚ್ಚುವೆನು ೧

ವಾರಿಜಾಕ್ಷ ಮಾರಜನಕ ವಾರಿನಿಧಿ ಗಂಭೀರ ಸುಗುಣ
ತೋರು ನಿನ್ನ ಚರಣಗಳನು ಅರಿಸಿನವ ಹಚ್ಚುವೆನು ೨

ಸುಂದರಾಂಗ ಮಂದಹಾಸ ಕುಂದರನೆ ಸಿಂಧುಶಯನ
ಕಂಧರವ ತೋರು ಬೇಗ ಗಂಧವನು ಹಚ್ಚುವೆನು ೩

ಕುಸುಮನಾಭ ಕುಸುಮ ನೇತ್ರ ಕುಸುಮಪೀಠ ಸ್ತೋತ್ರ ಪಾದ
ಕುಸುಮ ಶರನ ಪಿತನೆ ನಿನಗೆ ಕುಸುಮ ಮಾಲೆ ಹಾಕುವೆನು ೪

ಧೀರ ನಿರ್ವಿಕಾರ ರೂಪ ಚಾರು ಚರಿತ ಕರಿಗಿರೀಶ
ಆರತಿಯ ಬೆಳಗುವೆನು ತೋರು ತವ ಮುಖಾರವಿಂದ ೫

## ೩೧೦

ಪುಂಡರೀಕನಯನ ಕೃಷ್ಣ ಪ

ಕಂಡೆನಿಂದು ನಿನ್ನ ಬಹುದಿನ ಬಳಿಕ ಬ್ರ
ಹ್ಮಾಂಡದೊಡೆಯ ಉದ್ದಂಡ ಮಹಿಮನೆ ಅ.ಪ

ಪುಟ್ಟಿದಂದಿನಿಂದಾ ಕಷ್ಟವಪಟ್ಟೆನು ಗೋವಿಂದ
ಸೃಷ್ಟಿಯೊಳಗೆ ನಾ ಪುಟ್ಟಿದನೇತಕೆ
ಜಿಷ್ಣುಸಖನೇ ಎನ್ನ ಕೊನೆಗಾಣೆ ೧

ಕರಿಗಿರೀಶ ನಿನ್ನ ಚರಣವ ನೆರೆ ನಂಬಿಹರನ್ನ
ಸರಿ ತೋರಿದ ಪರಿ ಪೊರೆ ಕಂಸಾರಿಯೆ
ಸ್ಥಿರ ಸಂಕಲ್ಪನೆ ಕರುಣಾಶರಧಿಯೆ ೨

## ೩೧೧

ಬಂದ ಶ್ರೀಹರಿ ದಯದಿಂದ ಆನಂದದಿಂದ ಪ

ಮಂದಗಮನೆ ನಲವಿಂದ ಕರೆಯೆ ಎಳ
ಗಂದಿಯ ಪರಿಯಲಿ ಸಿಂಧುರ ವರದನು
ಎಂದೆಂದಿಗು ನಿಜ ಬಂಧುವೆಂದೆನಿಪ ಪೂ
ರ್ಣೆಂದುವದನ ಗೋವಿಂದ ಮುಕುಂದ ಅ.ಪ.

ಭಕ್ತರ ಅವರಸಕೆ ಸಿದ್ಧ । ಭಕುತಿಗೆ ತಾ ಬದ್ಧ
ಮತ್ತನ್ಯ ಸಾಧನಕೆ ಆಗಮಬಾಧ್ಯ । ಭಕ್ತರಿಗದು ವೇದ್ಯ
ಭಕ್ತರ ಪೊರೆಯಲು ಅತ್ಯಾದರದಲಿ
ಹತ್ತವತಾರವ ಎತ್ತಿದ ಶ್ರೀ ಪುರು
ಷೋತ್ತಮ ಜಗದುತ್ಪತ್ತಿ ಸ್ಥಿತಿ ನಿಲಯ
ಕರ್ತೃ ಕೃಪಾಕರ ಕರಿಗಿರೀಶನು ೧

## ೩೧೨

ಬಂದೆಯಾ ಬಂಧುವೆ ಭಾಗ್ಯದ ನಿಧಿಯೆ
ಮಂದರದರ ನಿನ್ನ ಮಂದಿರಕ್ಕೆ ಪ

ತಂದೆಯ ಮಮ ಹೃನ್ಮಂದಿರಕಾಗಲೇ
ಬಂದೆಯೊ ಕರುಣಾಸಿಂಧುವೆ ಸ್ವಾಮಿ ಅ.ಪ

ಆಗಮನುತ ನಿನ್ನಾಗಮನದಿ ಇನ್ನು
ನೀಗಿತು ಚಿಂತೆಯು ನೀರಜನಯನ
ಯಾಗ ಸಾಫಲ್ಯಕೆ ಸೂಚನೆಯಿದು ಮಹಾ
ಭಾಗದೇವ ಹರೆ ಭಾಗವತ ಪ್ರಿಯ ೧

ಮುಂದಿನ ಕಾರ್ಯವ ನೀನೆ ವಹಿಪುದು
ಎಂದೆಂದಿಗೂ ನೀನೆ ಗತಿಯು
ನಂದನಂದನ ಗೋವಿಂದ ಮುಕುಂದನೆ
ನಿಂದಿರಿಸಯ್ಯಾ ನಿನ್ನಾಜ್ಞೆಯಲೆಮ್ಮನು ೨

ನಾಗಶಯನ ನಳಿನಾಯತ ಲೋಚನ
ಯೋಗಿನಿಲಯ ಕಮಲಾಲಯವಾಸ
ಯಾಗರಕ್ಷಕನೆ ಯಾಗ ಫಲಪ್ರದ
ಬಾಗುವೆ ಚರಣಕೆ ಕರಿಗಿರೀಶನೆ ೩

## ೩೧೩

ಬಾರಯ್ಯ ಬಾ ಬಾ ಯದುಕುಲರಾಯ । ಹೇ ಭಾಗವತಪ್ರಿಯ ಪ

ಸಾರಸಾಕ್ಷ ಕರುಣಾರಸಪೂರಿತ
ಮಾರಜನಕ ಭವತಾರಕ ಮುರಹರ ಅ.ಪ.

ಬೃಂದಾರಕ ಬೃಂದ ಸುವಂದಿತ ಚರಣ । ಭುಜಗೇಂದ್ರಶಯನ
ಮಂದಾಕಿನಿಪಿತ ಮುಕುಂದ ದುರಿತಹರಣ ।
ವಿಹಗೇಂದ್ರಗಮನ
ಮಂದಹಾಸ ಬಲುಸುಂದರವದನಾ । ಶುಭಗಣಪೂರ್ಣ
ಮಂದರಧರ ಗೋವಿಂದ ಭಜಕ ಜನ
ಮಂದಾರನೆ ಮುಚುಕುಂದವರದ ರಾ
ಕೇಂದುಕುಲಜಲಧಿ ಚಂದಮನೆನಿಸುವ
ಇಂದಿರೆಯರಸ ಶ್ರೀ ಕರಿಗಿರೀಶನೇ ೧

## ೩೧೪

ಭೂಷಿತ ವನಮಾಲ । ಶ್ರೀಲೋಲ ಪ

ಆಶ್ರಿತ ರಕ್ಷ ಕೃಪಾಲ ವಾಲ ಅ.ಪ.

ಮಕರ ಕುಂಡಲಧರ ಪೀತಾಂಬರ । ಧೃತ
ಅಕಳಂಕ ಸುಂದರ ಶ್ರೀಮನೋಹರ ೧

ಜಲರುಹನಯನ ಜಲನಿಧಿಶಯನ
ವನಜಭವಾದಿ ಸಂಸೇವಿತ ಚರಣ ೨

ಅನಿಮಿಷ ಪೂಜಿತ ಮುನಿಜನ ವಿನುತ
ವನರುಹ ಸಂಭವ ತಾತ ವಿಖ್ಯಾತ ೩

ಕಾಮಿತಫಲದ ಸಾಮಜವರದ
ಸಾಮನಿಗಮ ಸಂಗೀತ ವಿನೋದ ೪

ಮಂದ ಸುಹಾಸ ಮೇಘ ಸಂಕಾಶ
ಸುಂದರವದನ ಶ್ರೀ ಕರಿಗಿರೀಶ ೫

## ೩೧೫

ಮನ್ನಿಸು ಅಪರಾಧ ಮನ್ಮಥ ಜನಕನೆ ಪ

ಸನ್ನುತ ಗುಣಸಂಪನ್ನ ಮಹಿಮ ತಾ
ರುಣ್ಯ ಪಯೋನಿಧಿ ಬಿನ್ನಪ ಲಾಲಿಸಿ ಅ.ಪ

ಅಮರ ಶಿರೋಮಣಿ । ಆಶ್ರಿತ ರಕ್ಷಾಮಣಿ
ರಮಣಿ ರುಕ್ಮಿಣಿ ಮುಖಕಮಲ ಗಗನಮಣಿ
ನಮಿಪೆ ಭಕ್ತರ ಚಿಂತಾಮಣಿ ತವ ಚರಣಕೆ
ಮಣಿಯದೆ ಮೂಢ ಶಿಖಾಮಣಿಯಾದೆನು ೧

ಕಾಮಜನಕ ಪರಿಪೂರ್ಣ ಕಾಮ । ಭಕ್ತ
ಕಾಮಧೇನು ಕೋಟಿಕಾಮ ಲಾವಣ್ಯನೆ
ಶ್ರೀ ಮನೋಹರ ಕೌಸ್ತುಭಮಣಿಹಾರ ನಿ
ನ್ನೀ ಮಹಿಮೆಗೆ ಎನ್ನೀ ಮಣಿ ಅಧಿಕವೆ ೨

ಶರಣ ಶರಣ್ಯನೆ ಶಾಶ್ವತ ಸುಖದನೆ
ಪರಮ ಪುರುಷನೆ ಪಾವನಚರಿತ
ಕರಿಗಿರೀಶನೆ ಕರುಣಾಭರಣನೆ
ಕರಿವರದನೆ ಕರುಣವ ತೋರಿಸಿ ೩

## ೩೧೬

ಮೋಹನ ನವ ಭವನ ಪರೇಶನ ಪ

ಮೋಹ ದುರಿತ ಭವ ಭಯ ವಿಮೋಚನನ
ನೇಹದ ಗೇಹವು ಸಕಲ ಭುವನ ಸನ್ ಅ.ಪ.

ನಿಲಯ ಮಧ್ಯದೊಳಗೆ ಶೋಭಿಪ ನವ ಮಣಿ ಸ್ತಂಭಗಳು
ಬಲುವಿಧದಿಂ ಮನರಂಜಕವೆನಿಸುತ
ಲಲಿತಕಾಂತಿಗಳ ಬೀರುತಲಿರ್ಪ ೧

ನಿರುಪಮಾದ್ಭುತ ಶರೀರವಾಂತಿಹ ಉರಗಾಧಿಪನಿರವು
ಶರದರತುನಕಂಗಳ ದೀಪದ ಕರಿಗೊರಳು ರಸನೆಗಳು
ಕಾಣುವ ತ್ರಿಜಗನ್ ೨

ಭೋಗಿರಾಜಶಯನೆ ವರಮೇಘಕಾಯನೆನಿಸಿ
ಯೋಗಿವಿನುತ ನಿಜ ಲೀಲೆಯ ಪಾರ್ಥನಿ
ಗಾಗಿ ತೋರಿಸಿದ ಶ್ರೀ ಕರಿಗಿರೀಶನ ೩

## ೩೧೭

ಶರಣಾಗತ ರಕ್ಷಾಮಣಿಯೆ ಶ್ರೀ ಹರಿಯೆ ಪ

ಶರಣಾಗತ ಜನ ವರ ರಕ್ಷಾಮಣಿಯೆಂಬ
ಬಿರುದಿನಿಂದಲಿ ಮೆರೆವ ಕರುಣಾ
ಭರಣ ಕಾಮಿತ ವರಪ್ರದಾಯಕ ಅ.ಪ.

ಜನನ ಮರಣ ರಹಿತ ಜಗದ ಜನ್ಮಾದಿ ಕರ್ತ
ಜನುಮ ಜನುಮದಲ್ಲಿ ಜಗದ ಜೀವರಿಗೆಲ್ಲಾ
ಅನಿಮಿತ್ತ ಬಂಧುವೆಂದು ನಿನ್ನಯ ಪಾದ
ವನಜಗಳನು ನಾವಿಂದು ನಂಬಿಹೆವಿನ್ನು
ವನಜನಾಭನೇ ನೀ ಬಂದು ಕಾಯಬೇಕೆಂದು
ತನುಮನಂಗಳ ನಿನಗೆ ಒಪ್ಪಿಸಿ
ಅನುನಯದಿ ಶಿರ ಮಣಿದು ಬೇಡುವೆ
ಅನಘ ಅನುಪಮ ಗುಣಗಣಾಂಬುಧಿ
ಅನಿಮಿಷೋತ್ತಮ ಅಪ್ರಮೇಯನೆ ೧

ಕಾಮಜನಕ ಪೂರ್ಣಕಾಮ ಆಶ್ರಿತ ಜನ
ಕಾಮಧೇನುವೆ ಕೋಟಿ ಕಾಮಲಾವಣ್ಯನೆ
ಶ್ರೀ ಮನೋಹರ ಗಂಭೀರ ಸುರುಚಿರ ಘನ
ಶ್ಯಾಮಸುಂದರ ಶರೀರ ಸನ್ನುತ ಮಹಿಮ
ಸಾಮಜನರ ಉದ್ಧಾರ ಭಕ್ತ ಮಂದಾರ
ಸಾಮಗಾನ ಪ್ರೇಮ ಜಗದಭಿ
ರಾಮ ರಾಕ್ಷಸ ಭೀಮ ಮಂಗಳ
ನಾಮ ಸುರಮುನಿ ಸ್ತೋಮ ಸನ್ನುತ
ಸ್ವಾಮಿದೇವ ಲಲಾಮ ನಮೊ ನಮೊ ೨

ಇಂದಿರಾರಮಣ ಗೋವಿಂದ ಮಾಧವ ಅರ
ವಿಂದಲೋಚನ ಪೂರ್ಣಾನಂದ ಸ್ವರೂಪನೆ
ಎಂದೆಂದು ನೀನಲ್ಲದೆ ಗತಿ ಎಮಗಿಲ್ಲ
ವೆಂದು ನಿನ್ನನು ಬಿಡದೆ ಕರಿಗಿರೀಶನೆ
ತಂದೆ ಯೆಮ್ಮಯ ಕುಂದುಗಳ ನೀ
ನೊಂದನೆಣಿಸದೆ ಬಂದು ಸಲಹುವು
ರೆಂದು ಬೇಡುವೆ ಇಂದು ಕರುಣಾ
ಸಿಂಧು ನತಜನ ಬಂಧು ನರಹರಿ ೩

## ೩೧೮

ಶ್ರೀ ಮನೋಹರ ಹರಿಯಾಪಾರ ವ್ಯಾಪಾರ ಪ

ಶ್ರೀ ಮಹಾಲಕುಮಿ ಮನಕೆ ಗೋಚರಿಸಿದದರಪಾರ ಅ.ಪ.

ಕುಂಭಿಣಿ ಪರಮಾಣುಗಳನು
ಅಂಬುಕಣಗಳನ್ನು ಗಣನೆ
ಗಿಂಬುಗೈದು ತಿಳಿಯಬಹುದು
ಅಂಬುಜಾಕ್ಷನ ಗುಣವಗಣಿತ ೧

ನಿಗಮ ನಿಕರ ತೋಡಿ ಪುಡುಕಿ
ನೀರಜಾಕ್ಷನ ನೆಲೆಯ ಕಾಣದು
ಜಗದ ಜನರ ಭಾವನೆಗಿನ್ನು
ಸಿಗುವನೆ ಅಚಿಂತ್ಯಮಹಿಮ ೨

ಭಜಕ ಜನರ ಮನಕೆ ತನ್ನ
ನಿಜ ಕರ್ತೃತ್ವವನು ತೋರಿ
ನಿಜ ಸುಜ್ಞಾನವಿತ್ತು ಪೊರೆವ
ವಿಜಯಸಾರಥಿ ಕರಿಗಿರೀಶ ೩

## ೩೧೯

ಶ್ರೀ ಲಲಾಮನೆ ನಿನ್ನ ಚರಣಾಬ್ಜಗಳಿಗೆ ನಮೊ
ನೀಲಮೇಘಶ್ಯಾಮ ನಿರುಪಮ ತ್ರಿಧಾಮ ಪ

ಮೂಲಕಾರಣ ನಿನ್ನ ಹೊರತಿನ್ನು ಕಾಯುವರು
ಮೂಲರ್ೋಕದೊಳಗಿಲ್ಲ ಮುರಹರ ಮುಕುಂದ ಅ.ಪ.

ಕಲುಷವರ್ಜಿತ ನಿತ್ಯ ಕಲ್ಯಾಣಗುಣ ಪೂರ್ಣ
ಜಲಜನಾಭನೆ ದೇವಾ ಜಲಧಿಶಯನ
ಜಲಜಜಾಂಡವ ಸೃಷ್ಟಿ ಸ್ಥಿತಿ ಪ್ರಳಯ ಕರ್ತ ನಿನ್ನ
ನೆಲೆಗಾಣೆವೋ ಸ್ವಾಮಿ ಅಪ್ರಮೇಯ ಸ್ವರೂಪ ೧

ಕುಂಭಿಣಿಯ ಪಮಾಣುಗಳನಧಿಕ ಯತ್ನದಲಿ
ಅಂಬುಧಿಯ ಕಣಗಳನು ಎಣಿಸಬಹುದು
ಅಂಬುಜಾಕ್ಷನೇ ನಿನ್ನ ಆನಂದ ಮೊದಲಾದ
ಗಂಭೀರ ಗುಣಗಳನು ಎಣಿಸಲಾರಿಗೆ ಸಾಧ್ಯ ೨

ಪರಮಾತ್ಮ ಪರಂಜ್ಯೋತಿ ಪರಮ ಪಾವನರೂಪ
ಪರಿಪೂರ್ಣ ಆನಂದ ಪುರುಷೋತ್ತಮ
ಕರಿರಾಜವರದ ಶ್ರೀ ಕರಿಗಿರೀಶನೆ ನಿನ್ನ
ಚರಣ ಸೇವಕನೆಂದು ಕರಪಿಡಿದು ಕಾಯೊ ೩

## ೩೨೦

ಶ್ರೀ ವರನೆ ಪರತರನೆ ಪ

ಪಾವನಕರ ಕರುಣಾರಸ ಭರಿತನೆ ಅ.ಪ.
ಅಘ ಪರಿಹಾರಕ ಹರಿಯೆ
ಬಗೆ ಬಗೆ ಅಪರಾಧಗಳನು ಕ್ಷಮಿಸಿದೆ ೧

ಸಕಲ ನಿಯಾಮಕ ವಿಭುವೆ
ಭಕುತಪರಾಧ ಸಹಿಷ್ಣುವೆ ಪ್ರಭುವೆ ೨

ಮೊರೆಯನು ಕೇಳೆಲೊ ದೊರೆಯೆ
ಗರುವ ಕೊಡದೆ ಪೊರೆ ಕರಿಗಿರಿ ನಿಲಯನೆ ೩

## ೩೨೧

ಶ್ರೀ ಹರಿವ್ಯಾಪಾರ ಅಪಾರ ಪ

ಶ್ರೀ ಸರಸಿಜಭವ ಸುರವರ ಪ್ರಮುಖರ
ಭಾವನೆಗೊ ಅತಿ ದೂರ ಅ.ಪ.

ಪೊಂದಿದೆ ಭಕುತರಿಗೆ ಕದಾಚಿತು
ಬಂದೊಡಹಂ ಮಮತೆ
ಕುಂದಿಸಿ ಗರ್ವವ ಬಂದತಿ ಲೀಲೆಯೊಳ್
ಚಂದದಿ ಪೊರೆವ ಗಜೇಂದ್ರವರದನು ೧

ಕಷ್ಟದಿ ತೊಳಲಿಸುವ ನಿಜಭಕ್ತರ
ಶ್ರೇಷ್ಠಗತಿಯ ಕೊಡುವ
ದುಷ್ಟರಿಗೆ ಸಿರಿಕೊಟ್ಟು ಕೆಡಿಸುವನು
ಶಿಷ್ಟ ಪಾಂಡವಪ್ರಿಯನ ಗುಟ್ಟಿದು ಕಾಣಿರೊ ೨

ದೇವದಾನವರ ಸ್ವಭಾವವ
ಭಾವಿಸಿ ತಾನವರ
ಕಾವನು ಕೊಲುವನು ಕಲುಷ ವಿದೂರನು
ದೇವವರೇಣ್ಯ ಶ್ರೀ ಕರಿಗಿರೀಶನು ೩

## ೩೨೨

### ಸೀಸಪದ್ಯ

ಸರಸಿಯೊಳಗಂದು ಮಕರ ಭಾದೆಗೆ ಸಿಲುಕಿ
ಕರಿರಾಜ ತಾ ಕರೆಯೆ ಭರದಿ ನೀ ಬಂದೆ
ತಂದೆ ಭಾಧಿಸುತಿರಲು ಕಂದ ಪ್ರಹ್ಲಾದನನು
ಸಂದೇಹವಿಲ್ಲದಲೆ ಬಂದು ಕಾಯ್ದೆ

ವಿಪಿನದಲಿ ಧ್ರುವರಾಯ ತಪವಗೈಯುತಲಿರಲು
ಕೃಪೆಯಿಂದ ಮೈದೋರ್ದೆ ಕೃಪಣವತ್ಸಲನೇ
ಮರಣ ಕಾಲದಿ ಮಗನ ಕರೆದಜಾಮಿಳನಂದು
ಕರುಣದಿಂದಲಿ ಪೊರೆದೆ ಕರುಣ ಶರಧೆ
ಅಂದು ಸಭೆಯಲಿ ದುರುಳ ಸೆರಗ ಸೆಳೆಯುತಿರೆ
ನೊಂದು ಚೀರಿಡಲಕ್ಷಯಾಂಬರವನಿತ್ತೆ
ಇಂದು ನೀನಲ್ಲದೆಲೆ ಕಾಯ್ವರಿನ್ನಾರಿಹರು
ತಂದೆ ನೀ ಮೈದೋರು ಶ್ರೀ ಕರಿಗಿರೀಶ

## ೩೨೩

ಸಾರಸನಯನ ನಮೋ ನಮೋ ಪ

ನಾರಾಯಣ ಗೋವಿಂದ ನಮೋ ಅ.ಪ.

ದೀನ ಜನಾವನ ದಾನವ ಮಥನ
ಶ್ರೀ ನಿಕೇತನ ಕೌಸ್ತುಭಾಭರಣ ೧

ದಾಮೋದರ ದುರಿತಾರಿ ಪರಾತ್ಪರ
ಹೇಮಾಂಬರಧರ ವನಮಾಲಾಧರ ೨

ಸಾರಸಾಪ್ತನು ಸಾರುತಿಹನು ತವ
ಸಾರಸಪಾದದ ಚಾರುದರುಶನಕೆ ೩

ಮಾರ್ತಾಂಡನ ಬಲು ಚಂಡಕಿರಣವೆಮ್ಮ
ನೇತ್ರಪಟುತ್ವ ಕುಂದಿಸುವುದು ಕೇಳ್ ೪

ತರಣಿ ಪ್ರಕಾಶದಿ ತಪಿಸುತಿಹೆವು ನಾವ್
ಪೊರೆವುದೆಮ್ಮನು ಕರಿಗಿರೀಶನೆ ೫

## ೩೨೪

ಹರಿಯೆ ಹದಿನಾಲ್ಕು ಲೋಕದ ದೊರೆಯೆ ಪ

ಕರುಣದಿಂದ ತವ ಚರಣ ಕಮಲ ಷಟ್
ಚರಣನೆನಿಸಿ ಎನ್ನ ಪೊರೆವುದು ಸಂತತ ಅ.ಪ

ವೀರಭಕ್ತ ಪ್ರಹ್ಲಾದ ವರದ ಕರುಣಾರಸ ಪರಿಪೂರ್ಣ
ಸಾರಸಿ ಭವ ಮುಖ ಸುರವರ ಸನ್ನುತ ಚಾರ ಚರಣನಳಿನ
ಸಾರಿದ ಪ್ರಣತ ಜನಾರ್ತಿನಿವಾರಣ
ಘೋರದುರಿತ ಮದಗಜ ಪಂಚಾನನ
ನಾರದ ಮುನಿವರ ಸೇವಿತ ಚರಣ
ಸಾರಸಾಕ್ಷಿ ಶ್ರೀ ಕರಿಗಿರಿ ನಿಕೇತನ ೧

## ೩೨೫

ಹರಿ ಹರಿ ಕೃಷ್ಣ ಗೋವಿಂದ ಪ

ನರಹರಿ ಮಾಧವ ಗೋವಿಂದ ಅ.ಪ

ಕೇಶವ ನಾರಾಯಣ ಗೋವಿಂದ
ವಾಸುದೇವ ಶ್ರೀ ಗೋವಿಂದ
ಶ್ರೀಶ ಜನಾರ್ದನ ಗೋವಿಂದ । ಹರಿ
ದಾಸ ಜನಾವನ ಗೋವಿಂದ ೧

ವಾಮನ ದಾಮೋದರ ಗೋವಿಂದ
ಕಾಮಿಕದಾಯಕ ಗೋವಿಂದ
ರಾಮ ರಘೂತ್ತಮ ಗೋವಿಂದ । ಗುಣ
ಧಾಮ ದಯಾನಿಧೇ ಗೋವಿಂದ ೨

ಶ್ರೀಧರ ಭೂಧರ ಗೋವಿಂದ
ಆದಿಮೂಲ ಶ್ರೀ ಗೋವಿಂದ
ವೇದ ವೇದ್ಯ ಹರಿ ಗೋವಿಂದ । ನಿಜ
ಪಾದ ಭಜಕಪ್ರಿಯ ಗೋವಿಂದ ೩

ಪದ್ಮದಳಾಂಬಕ ಗೋವಿಂದ
ಪದ್ಮನಾಭ ಶ್ರೀ ಗೋವಿಂದ
ಪದ್ಮಿನಿ ಅರಸನೆ ಗೋವಿಂದ । ಕರ
ಪದ್ಮದಿ ಪಿಡಿ ಎನ್ನ ಗೋವಿಂದ ೪

ಕರಿಗಿರೀಶ ನರಹರಿ ಗೋವಿಂದ
ಪರತರ ಮುರಹರ ಗೋವಿಂದ
ಗರುಡಗಮನ ಶ್ರೀ ಗೋವಿಂದ । ಹರಿ
ಹರಿ ಹರಿ ಹರಿ ಹರಿ ಗೋವಿಂದ ೫

## ೩೨೬

ಆವಿರ್ಭವಿಸಿದಳಾಗ ಜಗನ್ಮಾತೆ । ಅಖಿಲಾಂಡ ವಿಖ್ಯಾತೆ ಪ

ದೇವದಾನವರು ತಾವೊಡಗೂಡುತ
ಲಾವುದಧಿಯಮದಿಸುತ್ತಿರಲದರೊಳು ಅ.ಪ

ಪೊಳೆವ ಬೆರಳುಂಗುರ ಶೋಭಿತಪಾದ । ಧರಿಸಿದ ಸುರುಚಿರ
ರುಳಿಯು ಅಂದಿಗೆ ಗೆಜ್ಜೆಯ ನಾದ । ಕಟಿಯಲಿ ನೋಡೆ
ಥಳಥಳವಾದ ಶೃಂಗಾರವಾದ । ಒಡ್ಯಾಣದ ಮೋದ
ದಲಿ ತಾನಿಟ್ಟಿಹ ಚಲುವಿಕೆಯಿಂದಲಿ
ಸಲೆ ಬೆಳಗುತಲಿ ನಳಿನಲೋಚನೊಳು ೧

ಕರಿರಾಜನ ಕರದಂತೆ ಒಪ್ಪುವ ಕರವು । ಬೆರಳಲಿ ನೋಡೆ
ಪರಿಶೋಭಿಸುತಿಹ ಮಾಣಿಕ್ಯದುಂಗುರವು । ರಾರಾಜಿಸುವ
ಹರಡಿ ಕಂಕಣಗಳು ಬಲು ಸುರುಚಿರವು । ಪರಿಕಿಸೆ ಸುಂದರವು
ಪರಿ ಪರಿ ಸರಗಳು ಕೊರಳೊಳು ಶೋಭಿಸೆ
ತರಣಿ ಕಾಂತಿಯನು ತಿರಸ್ಕರಿಸುತ್ತಲಿ ೨

ಮಂದಸ್ಮಿತ ಪರಿಶೋಭಿತ ಶುಭವದನ । ಆನಂದಸದನ
ಕುಂದಕುಟ್ಮಲದಂತಿಹ ಸಮರದನ । ಸಂತಾಪಾರ್ದನ
ಬಂಧುರ ಚಂಪಕ ನಾಸಿಕದ ಹದನ । ಏಂ ಪೇಳಲಿ ಅದನ
ಮಂದರಾದ್ರಿಧರ ಕರಿಗಿರೀಶನ
ಎಂದೆಂದಗಲದ ಸುಂದರಾಬ್ಜಮುಖಿ ೩

## ೩೨೭

ರುಕ್ಮಿಣಿಯ ದಿವ್ಯತರ ರೂಪವನು ವರ್ಣಿಸಲು
ರುಕ್ಮಗರ್ಭಗೆ ವಶವೆ ರೂಢಿಯೊಳಗೆ ಪ

ಮಿಕ್ಕ ಮನುಜರ ಮಾತು ಲೆಕ್ಕವೇತರದಯ್ಯಾ
ಪಕ್ಷಿವಾಹನ ಕೇಳು ಪರಮಪುರುಷ ಅ.ಪ

ಆ ದೇವಿಯಂಘ್ರಿಗಳ ಕೋಮಲಕೆ ಕುರುಹಾಗಿ
ಭೂದೇವಿ ತರುಗಳಲಿ ತಳಿರ ತಾಳಿಹಳೊ ೧

ಆ ಪಾದ ನಖಕಾಂತಿ ತಾ ಪ್ರಕಾಶಿಪ ತೆರೆಯು
ಈ ಪುತ್ಥಳಿಯ ಗಮನವಾದರ್ಶ ಹಂಸಕೆ ೨

ಬಡನಡುವ ತಾ ನೋಡಿ ಅಡವಿ ಸೇರಿತು ಸಿಂಹ
ಚೆಲುವ ನೇತ್ರವ ನೋಡಿ ಚಪಲ ಹೊಂದಿತು ಹರಿಣ ೩

ನೀಲವೇಣಿಯ ನೋಡಿ ನಾಗಗಳು ನಾಚಿದವು
ಶ್ರೀ ಲಕುಮಿಯಾ ಕನ್ಯೆ ಶ್ರೀ ಕರಿಗಿರೀಶನರಾಣಿ ೪

## ೩೨೮

ದೇವೀ ಶ್ರೀ ತುಳಸೀ ದುರಿತೌಘವಿನಾಶಿ ಪ

ಶ್ರೀ ವರನಾನಂದಾಶ್ರು ಸುಜಾತೆ ಕೃ
ಪಾವ ಲೋಕೆ ಜಗಪಾವನಿ ಜನನಿ ಅ.ಪ

ತುಂಗ ಮಂಗಳರೂಪಿಣಿ ಸುಗುಣ ತ
ರಂಗೆ ಪರಮ ಕಲ್ಯಾಣಿ
ಅಂಗಜಪಿತ ನಿತ್ಯ ಮಂಗಳರೂಪ, ನೃ
ಸಿಂಗ ಕರಿಗೀಶನು ಸುಖಪೂರ್ಣನು
ಮಂಗಳಕರುಣಾಪಾಂಗದಿ ನಿನ್ನನ
ರ್ಧಾಂಗಿಯೆಂದಂಗೀಕರಿಸುತಲೆಮ್ಮಂತ
ರಂಗಕೆ ಸಂತಸ ಕಂಗಳಿಗುತ್ಸವ
ಹಿಂಗದೆ ತರಲೆಂದು ಭಿನ್ನಪಗೈವೆವು

## ೩೨೯

ವೃಂದಾವನದೊಳು ಶೋಭಿಸುತಿರುವಳು
ಸುಂದರ ಶ್ರೀ ತುಳಸಿ ಪ

ನಂದನಂದನ ಗತಿ ಪ್ರಿಯಳೆಂದೆನಿಸುತ
ವಂದಿಸುವರ ಭವ ಬಂಧವ ಬಿಡಿಸುತ ಅ.ಪ

ನಿತ್ಯವು ಪ್ರಾತಃಕಾಲದೊಳೆದ್ದು
ಪವಿತ್ರ ಚಿತ್ತದಲಿ ಭಕ್ತಿಯಲಿ
ಸ್ತೋತ್ರವ ಗೈಯುತ ಸುತ್ತಿ ಪ್ರದಕ್ಷಿಣೆ
ಮತ್ತೆ ನಮಿಪರಘ ಬತ್ತಿಸಿ ಸಲಹುತ ೧

ತುಳಸಿ ವೃಂದಾವನ ಮಹಿಮೆಯ ಮನದಲಿ
ನಿಲಿಸಿ ಸೇವಿಸುವ ಸಜ್ಜನರ
ಕಲಿದೋಷಗಳನು ಕಳೆದು ಸತತ ಶ್ರೀ
ನಿಲಯನೊಳ್ ಭಕ್ತಿಯ ಕೊಡುವೆನೆಂದೆನುತ ೨

ತುಳಸಿ ದಳದಿ ಶ್ರೀ ಕರಿಗಿರೀಶನ
ವಿಲಸಿತ ಪೂಜೆಯ ಮಾಡುವರ
ಸುಲಲಿತ ಸತ್ಪಥದೊಳು ನಡೆಸುತ ನಿ
ರ್ಮಲಮತಿ ಕರುಣಿಸಿ ಸಲಹುವೆನೆನ್ನುತ ೩

## ೩೩೦

ಪ್ರಾಣನಾಥ ಪಾವನಗಾತ್ರ ಪ

ಪ್ರಾಣನಾಥ ಪವಮಾನತನಯ ಕರುಣಾನಿಧೇ
ನಿನ್ನಡಿಗಾನಮಿಸುವೆನು ಅ.ಪ

ಬನ್ನಬಡಿಪ ಖಳರನ್ನು ಮುರಿದು ಶರ
ಣನ್ನುವರನು ಕಾರುಣ್ಯದಿ ಪೊರೆಯುವ ೧

ಸೇರಿದವರ ಭವದೂರಗೈದು ಮನ
ಕೋರಿಕೆ ಸಲಿಸುವ ಧೀರ ಉದಾರ ೨

ಎನ್ನ ಮನೋರಥವನು ಸಲಿಸುವೊಡೆ
ನಿನ್ನ ಹೊರತು ನಾನನ್ಯರ ಕಾಣೆನು ೩

ಮಂಜುಳ ವೇಷ ಪ್ರಭಂಜನ ಕುವರ ಧ
ನಂಜಯ ಸೋದರ ಕುಂಜರಗಮನ ೪

ಕರಿಗಿರೀಶ ಶ್ರೀ ನರಹರಿ ಚರಣವ
ನಿರುತ ಸೇವಿಸುವ ಶರಣ ಶಿರೋಮಣಿ ೫

## ೩೩೧

ಪಾರ್ವತಿರಮಣ ಕರುಣಾಭರಣ
ಪಾಹಿಪುರಮಥನ ತ್ರಿಲೋಚನ ಪ

ಪಾವನವೇಷ ಫಣಿಗಣಭೂಷ
ಪಾಪನಾಶ ಭೂತೇಶ ಮಹೀಶ ೧

ಕಾಮ ಮದಹರ ಕಲುಷ ವಿದೂರ
ಸೋಮಶೇಖರ ಶಂಕರ ೨

ಕರಿಗಿರೀಶಪ್ರಿಯ ಕೈಲಾಸನಿಲಯ
ಪರಮ ಕೃಪಾಮಯ ಸುಕಾಯ ೩

## ೩೩೨

ಪಾಲಿಸು ಪರಮೇಶ । ಪಾಪ ವಿನಾಶ ಪ

ಫಾಲನಯನ ತ್ರಿಶೂಲಧರ ಕರು
ಣಾಲವಾಲ ವಿಶಾಲ ಮಹಿಮನೆ

ಕಾಲಕಾಲ ಕಪಾಲಧರ ಸುರ
ಜಾಲನುತ ಪದ ಶೈಲಜಾವರ ಅ.ಪ.

ಶಂಕರ ಶಶಿಶೇಖರ । ಸದಾಶಿವ
ಸಂಕಟಹರ ಈಶ್ವರ । ವರದಾನ ಶೂರ
ಶಂಕೆಯಿಲ್ಲದೆ ತ್ವತದಾಂಬುಜ
ಕಿಂಕರರ ಮನ ಪಂಕ ಕಳೆವ ಅಕ
ಳಂಕ ಮತಿಯನು ಕರುಣಿಸುವ ಮೀ
ನಾಂಕ ಮದಹರ ಮೃಡಸುರೇಶ್ವರ ೧

ಗಜ ಚರ್ಮಾಂಬರಧರನೆ । ಗೌರೀವರನೆ
ಅಜಸುತಾಧ್ವರ ಹರನೆ । ಪ್ರಣಿತಾರ್ಥಿಹರನೆ
ನಿಜಪದಾಂಬುಜ ಪೂಜೆ ಮಾಡುವ
ಸುಜನ ಮನ ಅಂಬುಜ ದಿವಾಕರ
ಕುಜನ ಭಂಜನ ಭುಜಗಭೂಷಣ
ನಿಜ ಚರಣ ಪಂಕಜವ ತೋರಿಸಿ..... ೨

ಹರಿನೀಲನಿಭಕಂಧರ । ಮುಪ್ಪುರಹರ
ಶರಣಜನ ಮಂದಾರ । ಕೈಲಾಸಮಂದಿರ
ಸುರುಚಿರಾಂಗ ಶುಭಪ್ರದಾಯಕ
ವರ ವಿನಾಯಕ ಜನಕ ಜಾಹ್ನವಿ
ಧರನೇ ಕರುಣಾಭರಣ ಪಾವನ
ಕರಿಗಿರೀಶನ ಪರಮಪ್ರಿಯ ಹರಿ..... ೩

## ೩೩೩

ವೃಷಭವಾಹನ ಪಶುಪತಿ ಬಂದ ಆನಂದದಿಂದ ಪ

ಶಶಿಧರ ಶಂಕರ ಸುರಗಂಗಾಧರ
ಅಸಮ ಸುಶೋಭಿತ ಜಟಾಜೂಟಧರ ಅ.ಪ

ಕರದಿ ಧರಿಸಿದ ಡಮರುಗ ತ್ರಿಶೂಲ । ಸುಂದರವಾದ
ವರಸಾರಂಗ ಸರಸಿಜಭವ ಕಪಾಲ । ಕೊರಳಲಿ ನೋಡೆ
ಧರಿಸಿದ ಬಹುಪರಿ ರುಂಡಮಾಲಾ । ಕಿಡಿಗಣ್ಣಿನ ಫಾಲಾ
ಗರಳಕಂಠ ಕರಿವರ ಚರ್ಮಾಂಬರ
ಧರ ಗೌರೀವರ ಸ್ಮರ ಮದಪರಿಹರ ೧

ರಜತಾಚಲ ಮಂದಿರವಾಸ । ಮಹೇಶ ಶಿವಕೃತ್ತಿವಾಸ
ಭುಜಗಭೂಷಣ ಶೋಭಿತ ವರವೇಷ । ಭಕ್ತರ ಪೋಷ
ಗಜಮುಖ ಜನಕ ಭೂತ ಗಣೇಶ ಪಾಪೌಘ ವಿನಾಶ
ಕುಜನಾವಳಿ ಮದಗಜ ಮೃಗರಾಜನು
ಸುಜನಜಾಲ ಪಂಕಜಹಿತ ದಿನಮಣಿ ೨

ಸುರವರನಮಿತಚರಣನು ಬಂದ । ಶೋಭಿತವಾದ
ಪರಿಪರಿ ಚಿತ್ರ ಭೂಷಣನು ಬಂದ । ಕೋರಿದವರ
ಕರೆದೀವ ಕರುಣಾಭರಣನು ಬಂದ । ತಾನೊಲವಿಂದ
ಚರಣ ಶರಣರಘ ಪರಿಹರಗೈಸುವ
ಕರಿಗಿರೀಶಪ್ರಿಯ ಪುರಹರ ಶಂಕರ ೩

## ೩೩೪

ಗುರುವೆ ತವ ಚರಣ ಕಮಲ ಷಟ್ಚರಣನೆನಿಸೊ ಎನ್ನ ಪ

ಪರಮಹಂಸಕುಲ ಸುಧಾಬ್ಧಿ ಸುಧಾಕರ ಸುಧೀಂದ್ರಯತಿಕರಜ ಅ.ಪ

ಶ್ರೀವರ ಚರಣ ಸರೋರುಹ ಮಧುಕರ ಪೂತ । ಶುಭಮಚರಿತ
ಭಾವಜಾದಿ ಷಡ್ವರ್ಗಸುನಿಗ್ರಹ ಶೀಲ ಕವಿಕುಲಲೋಲ
ಕೋವಿದ ಕುಲ ಸಂಭಾವಿತ ಮಹಿಮ ಸ

ದಾ ವಿನೋದಿ ಸತ್ಸೇವಕ ಜನ ಸಂ
ಜೀವನ ಶುಭಕರ ಪಾವನರೂಪ ಪ
ರಾವರೇಶ ಪದಸೇವಕ ಯತಿವರ ೧

ಸಕಲ ಶಾಸ್ತ್ರ ಪಾರಂಗತ ಪರಿಣತ ಖ್ಯಾತ । ಗ್ರಂಥಪ್ರಣೀತ
ಸುಖತರ ಸುಖತೀರ್ಥ ಸಮಯ
ಸಂವರ್ಧಕ ಧೀರ । ಸುಜನೋದ್ಧಾರ
ಮುಕುತಿ ಸಾಧನೆಗೆ ಕುಟಿಲ ಮಾರ್ಗವ
ನಿಖಿಲ ನಿಜಾಶ್ರಿತ ನಿಕರಕೆ ತೋರುತ
ಭಕುತ ಕರೆವ ಕೋರಿಕೆಗಳ ನೀಡುತ
ಸುಖವ ಕರೆವ ಸುಂದರ ಯತೀಂದ್ರ ೨

ಪರಮಪುರುಷ ಶ್ರೀ ಬದರಿವಾಸ ಭಜಕಾಗ್ರಣಿಯೇ ।
ಗುಣಮಣಿ ಖಣಿಯೇ
ಸುರವರನುತ ಶ್ರೀ ರಾಮಚಂದ್ರ ಚರಣಾಬ್ಜಾ । ರಾಧಿಕ ಸುಪೂಜ್ಯ
ದುರಿತ ಕಳೆದು ಭವಶರಧಿಯ ದಾಟುವ
ಸರಿಮಾರ್ಗವ ನಾನರಿಯೇನೋ ಗುರುವರ
ಕರಿಗಿರೀಶ ಶ್ರೀ ನರಹರಿ ಚರಣವ
ನೆರೆ ನಂಬುವ ಪರಿ ಕರುಣಿಸು ಯತಿವರ ೩

## ೩೩೫

ನಮಿಸುವೆ ಗುರುರಾಜ – ಸುತೇಜ ಪ

ನಮಿಸುವೆ ಸುಜನರ ಕಲ್ಪಭೂಜ ಅ.ಪ

ಶರಣ ಜನಾವನ ಕರುಣಾಭರಣ
ಹರಿಚರಣಾರಾಧನ ಧುರೀಣ ೧

ಮೂರಾವತಾರವನೆತ್ತಿದ ಧೀರ
ಸಾರಿದವರ ಸಂತಾಪ ವಿದೂರ ೨

ದ್ವಿಜಕುಲದೀಪ ಭವ್ಯ ಸ್ವರೂಪ
ಅಜರಾಮರ ಸತ್ಕೀರ್ತಿ ಪ್ರತಾಪ ೩

ಜ್ಞಾನವಿರಕ್ತಿ ನಿರ್ಮಲಭಕ್ತಿ
ಮಾಣದೆ ಕೊಡುವುದು ಮನಸಿಗೆ ಶಾಂತಿ ೪

ವರ ಮಂತ್ರಾಲಯ ಸುರುಚಿರ ನಿಲಯ
ಕರಿಗಿರೀಶ ಶ್ರೀ ನರಹರಿಪ್ರಿಯ ೫

## ೩೩೬

ವೃಂದಾವನ ಪ್ರವೇಶಿಸಿದಂದವ
ಚಂದದಿ ಪೇಳುವೆ ಪಾಲಿಪುದು ಪ

ಇಂದಿರೆಯರಸನ ಪ್ರೇರಣೆಯಿಂದ ಯತಿ
ವೃಂದ ತಿಲಕ ರಾಘವೇಂದ್ರರಾನಂದದಿ ಅ.ಪ

ಒಂದು ದಿನವು ಶ್ರೀ ರಾಯರು ಶಿಷ್ಯರ
ವೃಂದಕೆ ಪಾಠವ ಹೇಳುತಿರೆ
ಅಂದು ವಿಮಾನದಿ ಕೃಷ್ಣದ್ವೈಪಾಯನ ಪ
ರಂಧಾಮಕೈದಲು ನೋಡಿ ಕೈ ಮುಗಿದು ೧

ಎಷ್ಟು ದಿನವು ನಾವಿಲ್ಲಿರಬೇಕೆಂದು
ಶಿಷ್ಟ ಗುರುವರರು ಕೇಳಿದೊಡೆ
ಕೃಷ್ಣದ್ವೈಪಾಯನರೆರಡು ಬೆಳಗುಳ
ಗಟ್ಟಿಯಾಗಿ ಬೀಸಿ ತೋರಿಸಿ ಪೊರಟರು ೨

ನೆರೆದ ಶಿಷ್ಯರದರರ್ಥವೇನೆನುತ
ಗುರುಗಳನ್ನು ತಾವ್ ಕೇಳಿದೊಡೆ
ಎರೆಡು ವರ್ಷ ತಿಂಗಳು ದಿನವೆರಡೆರಡು
ಇರುವುದು ಧರೆಯೊಳಗೆಂದರು ರಾಯರು ೩

ಆದವಾನಿಗೆ ಗುರು ಸಂಚಾರ ಪೋಗಿರೆ
ಆ ದಿವಾನ ವೆಂಕಣ್ಣ ಬಲು
ಆದರಿಸಿದ ಬಳಿ ತಾ ನವಾಬನಿಂದ
ಮೋದದಿ ಕೊಡಿಸಿದ ಮಂಚಾಲೆಯನು ೪

ಹಿಂದೆ ಪ್ರಹ್ಲಾದರು ಯಾಗವ ರಚಿಸಿದ
ಸುಂದರ ಕ್ಷೇತ್ರವಿದೆಂಬುದನು
ತಂದು ಮನಕೆ ಗುರುರಾಯರೀ ಕ್ಷೇತ್ರವ
ನಂದು ಪಡೆದು ತಾವಿಲ್ಲಿಯೇ ನಿಂತರು ೫

ಉತ್ತಮ ನೀಲವರ್ಣದ ಶಿಲೆಯಪಳಿರಿಸಿ
ಕೆತ್ತಿಸಿ ವೃಂದಾವನತರಿಸಿ
ಕ್ಷೇತ್ರರಕ್ಷಣೆಯಗಷ್ಟ ದಿಕ್ಕುಗಳಲಿ ದೇವ
ಮೂರ್ತಿಗಳನು ಸ್ಥಾಪಿಸಿ ನಿಲಿಸಿದರು ೬

ವೃಂದಾವನದಲಿ ಸ್ಥಾಪಿಸಲೇಳ್ನೂರು
ಚಂದದ ಸಾಲಿಗ್ರಾಮಗಳ
ತಂದಿಟ್ಟರೆ ಸಿದ್ಧತೆಗಳು ಸಕಲವು
ಕುಂದಿಲ್ಲದಂದೆ ನಡೆದಿರಲಾಗಲೆ ೭

ಮುಂದಕೆ ತಮ್ಮ ಸಂಸ್ಥಾನವ ವಹಿಸಿ ಯೋ
ಗೀಂದ್ರರೆಂಬ ಪ್ರಿಯ ಶಿಷ್ಯರಿಗೆ

ಸಂದಿಪ ವಿರಹದಿ ನೊಂದಿದ ಶಿಷ್ಯರ
ವೃಂದವ ಬಲು ಸಂತೈಸಿದರಾಗಲೇ ೮

ನಲವತ್ತೇಳು ಸಂವತ್ಸರ ನಾಲ್ಕು ತಿಂ
ಗಳು ಇಪ್ಪತ್ತೊಂಭತ್ತು ದಿನಕಾಲ
ನಲವಿನಿಂದ ವೇದಾಂತ ಸಾಮ್ರಾಜ್ಯವ
ಸಲಹಿ ಸುಕೀರ್ತಿಯ ಗಳಿಸಿದ ಬಳಿಕ ೯

ಸಾವಿರದ್ಯೆನೂರು ತೊಂಭತ್ಮೂರನೆ
ಯಾ ವಿರೋಧಿ ಕ್ರತು ಸಂವತ್ಸರದ
ಶ್ರಾವಣ ಕೃಷ್ಣ ದ್ವಿತೀಯದ ಗುರುವಾರ
ದಾ ವಾಸರ ಮುಹೂರ್ತದಿ ಗುರುವರ ೧೦

ಹಸ್ತದಿ ಜಪಮಾಲೆ ಪಿಡಿದು ಯೋಗೀಂದ್ರರ
ಹಸ್ತಲಾಘವವ ಸ್ವೀಕರಿಸಿ
ಸ್ವಸ್ತಿವಾಚನಗಳ್ ವಿಪ್ರರು ಪೇಳುತಿರೆ
ಅರ್ಥಿಯಲಿ ವೃಂದಾವನವ ಪ್ರವೇಶಿಸಿ ೧೧

ಪದ್ಮಾಸನದಲಿ ಮಂಡಿಸಿ ಎದುರಲಿ
ಮುದ್ದುಪ್ರಾಣೇಶನ ನೋಡುತಲಿ
ಪದ್ಮನಾಭನ ಧ್ಯಾನದೊಳಿರೆ ಜಪಸರ
ಬಿದ್ದು ಬಿಡಲು ಮುಚ್ಚಳಿಕೆಯನಿಡಲು ೧೨

ನೆರೆದಿಹ ವಿಪ್ರರು ಜಯ ಜಯವೆನ್ನುತ
ಪರಿಪರಿ ರಾಯರ ಪೊಗಳಿದರು
ಕರಿಗಿರೀಶನ ಕರುಣ ಪಡೆದ ನಮ್ಮ
ಗುರುಸಾರ್ವಭೌಮನ ಸರಿಯಾರಿಹರು ೧೩

## ೩೩೭

ಏನೆಂದು ಬಣ್ಣಿಪೆನು–ಶ್ರೀಗುರುವರನ
ನಾನಾಮಹಿಮೆಗಳನು ಪ

ಸಾನುರಾಗದಿ ಸಕಲ ತೀರ್ಥಕ್ಷೇತ್ರವ ಚರಿಸಿ
ಶ್ರೀನಿವಾಸನ ದಯದಿ ದೀನರನುದ್ಧರಿಸಿದ ಅ.ಪ

ತೀರ್ಥಕ್ಷೇತ್ರದ ಮಹಿಮೆ ತೀರ್ಥಪ್ರಬಂಧದೊಳ್
ಕೀರ್ತಿಸಿ ಕವಿತಾ ಚಾತುರ್ಯವ ಪ್ರಕಟಿಸಿದ ೧

ಕುಂಡಲೀಗಿರಿಯನು ಮಂಡಿಯಿಂದಲೇರಿ ಉ
ದ್ದಂಡಗಂಡಕ ಶಿಲೆಯ ಹಾರ ಶ್ರೀಹರಿಗಿತ್ತ ೨

ಕುಂಭಕೋಣೆಯಲಿದ್ದ ಡಾಂಭಿಕ ಪಂಡಿತ
ಜಂಬೂಕಗಳ ಗೆದ್ದ ಕುಂಭಿಣೀಸುರ ಸಿಂಹ ೩

ಮಾಘಕಾವ್ಯವ ಮೀರ್ದ ಆಮೋದ ಸುಂದರವಾದ
ಶ್ಲಾಘ್ಯ ಶ್ರೀ ರುಕ್ಮಿಣೀಶ ವಿಜಯವೆಂದೆನಿಸಿದ ೪

ಘನ ಕಾವ್ಯವ ರಚಿಸಿ ಪುಣ್ಯ ಪತ್ತನದಿ ವಿ
ದ್ವನ್ಮಣಿಗಳಿಂದ ಮಾನ್ಯತೆ ಪಡೆದುದು ೫

ತುಂಗ ಕರ್ನಾಟಕ ನೃಪನ ಸಭೆಯೊಳು ಪ್ರ
ಸಂಗಾಭರಣವೆಂಬ ಬಿರುದು ಪಡೆದ ಖ್ಯಾತಿ ೬

ಕರಿಗಿರೀಶನ ಪಾದ ಸರಸಿಜ ಭೃಂಗ ಶ್ರೀ
ಗುರುವಾದಿರಾಜರ ಪರಿಪರಿ ಚರಿತೆಯಾ ೭

## ೩೩೮

ಗುರು ವಾದಿರಾಜರ ಸ್ಮರಣೆಯ ಮಾಡಿರೊ ಪ

ಗುರು ವಾದಿರಾಜರ ಸ್ಮರಣೆಯ ಮಾಡಲು
ದುರಿತ ಕಳೆದು ಮನಕೆ ಪರಮ ಹರುಷವೀವ ಅ.ಪ.

ಪೂರ್ಣಭೋಧರ ಮತ ವಾರಿನಿಧಿಗೆ ಸಂ
ಪೂರ್ಣ ಸುಧಾಕರ ಸುಗುಣ ಗಂಭೀರ
ಕ್ಷೋಣಿ ಸುರೋತ್ತಮ ಕ್ಷೋಣಿಪಾಲಕ ಮಾನ್ಯ
ಜ್ಞಾನಿವರೇಣ್ಯ ಹಯಾನನ ಪರಚರಣ ೧

ಮಾನಸದೊಳಗಿಹ ಹೀನಮತಿಯ ಕಳೆ
ದಾನಂದ ಕೊಡುವಂಥ ಜ್ಞಾನವ ಕರುಣಿಸಿ
ಪ್ರಾಣನಾಥ ಶ್ರೀ ಕರಿಗಿರೀಶನ ಪದ
ಧ್ಯಾನಿಪ ಸ್ಥಿರಮತಿ ತಾನಿತ್ತು ಪಾಲಿಪ ೨

## ೩೩೯

ಶರಣು ಶರಣು ವಾದಿರಾಜ ಶರಣ ಜನಕೆ ಕಲ್ಪ ಭೂಜ ಪ

ಧರಣಿ ಸುರ ವರಾದಿ ಪೂಜಿತ ಚರಣ ಪಂಕಜ ಭವ್ಯತೇಜ ಅ.ಪ

ಯೋಗಿವರ ವಾಗೀಶ ಕುವರ
ಬಾಗಿ ನಮಿಸಿ ಮುಗಿಯುವೆ ಕರವ
ಭೋಗ ರಾಗ ದೂರ ಧೀರ
ಭಾಗವತ ಕುಲಾಬ್ಜ ಭಾಸ್ಕರ ೧

ಸರಸ ಕವಿತಾ ಸಿರಿ ವಿಲಸಿತ
ಪರಿಪರಿ ಸದ್ಗ್ರಂಥ ರಚಿತ
ವರಕವೀಂದ್ರ ಕೀರ್ತಿಸಾಂದ್ರ
ಪರಮ ಕುಲಾಂಬುಧಿ ಚಂದ್ರ ೨

ಶ್ರೀಶ ಶ್ರೀ ಹಯಾಸ್ಯ ಚರಣ
ದಾಸ ಕವಿ ಜನಾವಳಿ ಭೂಷಣ
ಭಾಸುರಾಗ ಪಾಲಿಸು ಕರಿಗಿ
ರೀಶನ ಚರಣ ಕಮಲ ಚರಣ ೩

## ೩೪೦

ಶ್ರೀ ಚಂದ್ರಿಕಾಚಾರ್ಯ ಗುರುವೇ ಪ

ಯಾಚಿಪೆ ನಿನ್ನ ಶ್ರೀ ಚರಣ ಸೇವೆ ಅ.ಪ

ಶ್ರೀ ಪೂರ್ಣಪ್ರಜ್ಞಮತ ಜಲಧಿ ಚಂದ್ರ ಯತೀಂದ್ರ
ಭೂಪೂರ್ವ ಪ್ರಹ್ಲಾದ ಸಜ್ಜನಾಹ್ಲಾದ
ಗೋಪಾಲಕೃಷ್ಣ ಚರಣಾಂಬುರುಹ ಲೋಲ
ಶ್ರೀಪಾದರಾಜಪ್ರಿಯ ಬಾಲಸುಶೀಲ ೧

ಶ್ರೀ ಸಮೀರನ ಮತ ಸಾಧಿಸುವ ಸದ್ಗ್ರಂಥ
ರಾಶಿಯನು ರಚಿಸಿ ಸನ್ಮಾನ್ಯರೆನಿಸಿ
ದಾಸಕೂಟಕೆ ನೆಲೆಯಿತ್ತು ಪುರಂದರ
ದಾಸರನು ಕರುಣಿಸಿದೆ ಧೀರ ಉದಾರ ೨

ಕುಹುಯೋಗ ಪರಿಹಾರಗೈದ ಮಹಾಯೋಗಿವರ
ಕುಹಕ ವರ್ಜಿತ ಚಿತ್ತ ಶೋಭಿತ ಸುಖಾಂತ
ಅಹೋರಾತ್ರಿ ಕರಿಗಿರೀಶನ ಪಾದ ಧ್ಯಾನಿಪರ
ಸಹವಾಸವೆನಗಿತ್ತು ಸಲಹುವುದು ಸತತ ೩

## ೩೪೧

ಪರಮಹಂಸ ಪರಿವ್ರಾಜಕ ಗುರುವರ್ಯ । ಶಿರಬಾಗುವೆ ಆರ್ಯ ಪ

ಚರಣಕಮಲ ನೆರೆನಂಬಿಹೆ ನಾನಿನ್ನು । ಭಜಕರ ಸುರಧೇನು ಅ.ಪ

ಪುರುಷೋತ್ತಮ ಯತಿಕರ ಸರಸಿಜ ಜಾತ । ಜಗದೊಳಗೆ ಪುನೀತ
ಅರಿಷಡ್ವರ್ಗವ ದೂರಗೈದ ಧೀರ । ಶರಣರಿಗಾಧಾರ
ತರಣಿ ಸದೃಶ ಸುವಿರಾಜಿತ ಶುಭಗಾತ್ರ । ಪಾವನ ಚರಿತ್ರ
ನಿರುತ ನಿಮ್ಮ ಸಂಸ್ಮರಿಸುವ ನರಧನ್ಯ । ಭುವಿಯೊಳು ಸನ್ಮಾನ್ಯ ೧

ವ್ಯಾಸರಾಯ ಕರಪೂಜಿತ ಶ್ರೀ ಚರಣ । ನಿಗಮಾಗಮ ನಿಪುಣ
ಶ್ರೀ ಸಮೀರಮತ ಸ್ಥಾಪಕ ಧುರೀಣ । ಸುಜ್ಞಾನಿವರೇಣ್ಯ
ಭೂಸಿತ ಸದ್ಗುಣ ಸುಮಲಾಭರಣ । ಶರಣ ಸಂಜೀವನ
ಭಾಸುರ ಸೂರ್ಯಾಂಶಜ ಯತಿಕುಲರತ್ನ । ಭೂಸುರ ಸನ್ಮಾನ್ಯ ೨

ಯೋಗಿವರ್ಯ ಕರುಣಾಕರ ಗುಣನಿಲಯ । ಶುಭನಾಮಧೇಯ
ನಾಗಶಯನ ಶ್ರೀ ಕರಿಗಿರಿನಿಲಯನ್ನ । ಪೂಜಿಪ ಗುರುರನ್ನ
ಭಾಗವತೋತ್ತಮ ಭಾಸುರ ಶುಭ ಚರಿತ । ದೂರೀಕೃತದುರಿತ
ಬಾಗಿ ದೈನ್ಯದಲಿ ಬೇಡುವೆ ತವಚರಣ । ಭಕ್ತಿಯನುದಿನ ೩

## ೩೪೨

ನಾನಪರಾಧಿ ಶ್ರೀನಿಧಿ ದೇವ ಪ

ನಾನಪರಾಧಿ ನೀನದನೆಣಿಸದೆ
ದೀನವತ್ಸಲ ಎನ್ನ ಮಾನದಿಂದಲಿ ಕಾಯೊ ಅ.ಪ

ತನಯರಿಲ್ಲದೆ ಬಲು ಮನದೊಳು ಚಿಂತಿಸೆ
ಜನಪ ಪೇಳಿದ ವ್ರತವ ಅನುಸರಿಸುವೆನೆಂದು
ಮನದಿ ಸಂಕಲ್ಪಿಸೆ ವನಜನೇತ್ರನ ದಯದಿ
ತನಯಳು ಜನಿಸಲು ಧನಮದದಲಿ ಮರೆತೆ ೧

ಏನ ಪೇಳುವೆ ನಾನು ಧನದ ಮಹಿಮೆಯನ್ನು
ಹೀನ ಬುದ್ಧಿಯನಿತ್ತು ಹರಿಯ ಮರೆಸುವುದು
ದಾನವಾಂತಕ ಹರಿ ದೀನನಾಗಿಹೆನಯ್ಯ
ಸಾನುರಾಗದಿ ಸಲಹೊ ಸತ್ಯನಾರಾಯಣ ೨

ಮಂಗಳರೂಪ ಕೃಪಾಪಾಂಗದಿ ನೋಡೊ
ರಂಗ ಶ್ರೀ ಕರಿಗಿರಿಯನಿಲಯ ಶುಭಾಂಗ
ಗಂಗಾ ಜನಕನೆ ಗಜರಾಜವರನೆ
ಭಂಗ ಬಿಡಿಸಿ ಕಾಯೊ ಭಕ್ತವತ್ಸಲ ದೇವ ೩

## ೩೪೩

### ಉಗಾಭೋಗ

ಪರಮಪುರುಷ ಕೇಳು ಒರೆದ ಮಾತಿಗೆ ನಾನು
ನೆರೆ ತಪ್ಪುವನಲ್ಲ ವಂಚನೆ ಲೇಶವಿಲ್ಲ
ಉರುದೈವ ವ್ಯಾಪಾರಕ್ಕೇನ ಮಾಡಲಿ ನಾನು
ಸರ್ವವು ನಿನಗೆಂದು ಒಪ್ಪಿಸಿಹೆನಲ್ಲ
ನರಕವಾಸಕೆ ನಾನು ಅಂಜುವನಲ್ಲವು
ಮರಣಪಾಶಕೆಯಿನ್ನು ಅಂಜುವ ನಾನಲ್ಲ
ಸರ್ವಸ್ವ ಹೋದರೂ ಚಿಂತೆ ಎನಗಿಲ್ಲ
ಥರಥರ ಅಂಜುವೆ ನೊಂದೆ ವಿಷಯಕ್ಕೆ
ಅರಿಯಲು ಅನೃತಕ್ಕೆ ಅಂಜುವೆ ನಾನಿನ್ನು
ಸಿರಿ ಪರಾಕ್ರಮ ಶೌರ್ಯ ಇವುಗಳಿಂದಲಿ ಕೂಡಿ
ಗರುವಪಡುತ ನಾನು ಮದಾಂಧನಾಗಿದ್ದೆ

ಉರು ಶಿಕ್ಷೆ ಎನಗಿತ್ತು ಉದ್ಧಾರ ಮಾಡಿದೆ
ಕುರುಡಗೆ ನೇತ್ರವು ದೊರೆತಂತೆ ಆಯಿತು
ಪರಮ ಭಕ್ತನು ಆತನೆ ಪ್ರಹ್ಲಾದನು
ಪರಿ ಪರಿ ಪೀಡೆಗೆ ಗುರಿಯಾಗಿದ್ದರು ನಿನ್ನ
ಸ್ಮರಿಸಿ ತಾನುತ್ತಮ ಗತಿಯನ್ನು ಪಡೆದನು
ಸಿರಿಮದ ಕಳೆದೆನ್ನನುದ್ಧಾರ ಮಾಡಿದೆ
ಪರಮಪುರುಷ ನಿನಗೆ ಪ್ರಣಾಮ ಮಾಡುವೆ
ಕರಿಗಿರೀಶನೆ ಕರುಣಿ ಕಾಯಬೇಕೆನ್ನನು

## ೩೪೪

ಪೇಳಲೇನು ವಿಧಿಯ ಲೀಲೆಯ ಮಹಿಮೆ ಪ

ವ್ಯಾಳಶಯನನ ಸಂಕಲ್ಪದಂತಿಹುದು ಅ.ಪ.

ಮಂಗಳಾಂಗನ ಮೂರ್ತಿ ನೋಡುವ ಕಂಗಳು
ಅಂಗನೆಯರ ರೂಪ ನೋಡಲೆಳಸಿದವು ೧

ಶ್ರೀ ರಮಣನ ಕಥೆ ಕೇಳುವ ಕರ್ಣಗಳು
ವಾರನಾರಿಯರ ವಾರ್ತೆಗೆ ಸೋತವು ೨

ಮಂಥರಧರನ ನಿರ್ಮಾಲ್ಯವನೊಲ್ಲದೆ
ಸುಂದರಿಯರ ಮೈ ಗಂಧ ಬಯಸಿತು ಘ್ರಾಣ ೩

ಹರಿಯ ಪ್ರಸಾದವು ಭುಜಿಸದೆ ಜಿಹ್ವೆಯು
ಪರಮ ನಿಷಿದ್ಧ ಪಾನ ಭೋಜನ ಬಯಸಿತು ೪

ರಂಗನ ಭಕ್ತರ ಸಂಗವ ಬಿಟ್ಟು ಸ್ಪರ್ಶ
ಅಂಗನೆಯ ದೇಹಾಲಿಂಗನ ಬಯಸಿತು ೫

ಶ್ರೀನಿಕೇತನ ನಾಮ ನುಡಿಯುವ ನಾಲಿಗೆ
ದೀನ ಕಾಮಾತುರ ನುಡಿಯಲಿ ನಲಿಯಿತು ೬

ಕರಿಗಿರೀಶನ ಪಾದ ಸ್ಮರಣೆಯ ಬಿಟ್ಟಾ ಮನ
ತರುಣಿಯರು ಸದಾ ನೆನೆಸಿತು ಅಕಟಾ ೭

## ೩೪೫

### ಸೀಸಪದ್ಯ

ಪ್ರಳಯ ರುದ್ರನ ಕೋಪಕ್ಕೆಮ್ಮಡಿಯ ಕೋಪದಿಂ
ದ ಲಘು ಶಾಪವ ಮುನಿಯು ಕೊಟ್ಟರಂಜೆ
ಕಡುಕಷ್ಟ ಕೋಟಲೆಯು ದುಃಖ ದಾರಿದ್ರಗಳು
ಒಡನೊಡನೆ ಬಂದೊದಗೆ ನಡುಗೆ ನಾನು
ಹುಲಿ ಸಿಂಹ ಶರಭ ವೃಶ್ಚಿಕ ಸರ್ಪ ಮೊದಲಾದ
ಬಲು ಕ್ರೂರ ಪ್ರಾಣಿಗಳ ಬಾಧೆಗಂಜೆ
ಅಸಿಧಾರೆಗಂಜೆ ಇನ್ನಸು ಪೋಗುವುದಕಂಜೆ
ವಸುಧೀಶರಾಗ್ರಹಕೆ ಲವಲೇಶವಂಜೆ
ಉರಿಗಂಜೆ ಸೆರೆಗಂಜೆ ಹರಣದ ಭಯಕಂಜೆ
ಕರಿಗಿರೀಶನ ಕರುಣವೊಂದಿರಲು ಎನಗೆ
ಒರೆದ ವಚನಕೆ ಅನೃತ ಸಂಘಟಿಸಲದಕೆ
ನೆರೆ ಅಂಜುವೆನು ನಾನು ಇನ್ನೊಂದಕಂಜೆ

## ೩೪೬

ಸಿರಿನರಸಿಂಹನೆ ಕರಿಗಿರಿ ನಿಲಯನೆ
ಶಿರಬಾಗಿ ನಮಿಸುವೆ ಭಕ್ತಿಯಲಿ ಪ

ಕರುಣಾಸಾಗರ ನಿನ್ನ ಚರಣ ಕಮಲದಲಿ
ಸ್ಥಿರ ಸ್ಮರಣೆಯ ಕೊಟ್ಟು ಸಲಹೆನ್ನನು ಅ.ಪ.

ನೆಲೆಗೆ ನಿಲ್ಲದು ಮನ ಹಲವಕ್ಕೆ ಹರಿವುದು
ಸುಲಲಿತವಲ್ಲವು ಸಾಧನವು
ನಳಿನನಾಭನೆ ಎನ್ನ ಕುಲದೈವ ನಾರಸಿಂಹ
ಒಲಿದು ನೀನಾಗಿಯೆ ಸಲಹುವುದು ೧

ಅತ್ತಿತ್ತ ಓಡುವ ಚಿತ್ತವ ನಿಲಿಸುವ
ಶಕ್ತಿಯು ಎನಗಿಲ್ಲ ಲವಲೇಶವು ।
ಚಿತ್ತಜಪಿತ ಎನ್ನ ಚಿತ್ತದೊಳಗೆ ನಿಂತು
ಭಕ್ತಿಯ ಕರುಣಿಸೋ ತವ ಪಾದದಿ ೨

ನೆಲದ ಮೇಲಲೆವಾಗಯಲರುಣಿ ಗಮನವು
ಹಲವು ರೀತಿಯಲಿ ವಕ್ರವಲೆ
ಫಳಿಲನೆ ತನ್ನಯ ಬಿಲದೊಳು ಪೋಪಾಗ
ಸಲೆ ನೇರವಲ್ಲವೆ ಸಿರಿವರನೇ ೩

ಮನ ಬಲು ಮೈಲಿಗೆಯಾಗಿ ಹೃದಯ ಪಾ
ವನ ವಿಷಯಗಳಲದಲಿ ಬರಲಾರವು
ಘನಭಕ್ತಿರಸದಿಂದ ತೊಳೆದು ನಿರ್ಮಲಗೈದು
ಮನವ ನೀ ಮಡಿ ಮಾಡು ಘನಮಹಿಮ ೪

ಕಳೆಗಳೆ ಬೆಳೆದಿವೆ ಮನಕ್ಷೇತ್ರದೊಳಗೆಲ್ಲಾ
ಫಲ ಸಸ್ಯಗಳಲ್ಲಿ ಸ್ಥಳವಿಲ್ಲವು ।
ಕಳೆಗಳ ಕಳೆದು ಉತ್ತಮ ಫಲ ಕೊಡುವಂಥ
ಬೆಳೆಯ ನೀನು ಬೆಳಸಯ್ಯಾ ಕರಿಗಿರೀಶ ೫

## ೩೪೭

### ಉಗಾಭೋಗ

ಸುರರಾಜ ವಜ್ರಘಾತಕ್ಕಂಜುವ ನಾನಲ್ಲ
ಎರಡೊಂದು ನೇತ್ರನ ಶೂಲಕ್ಕಂಜುವನಲ್ಲ
ಮರಳಿ ಯಮನ ದಂಡಕ್ಕಂಜುವ ನಾನಲ್ಲ
ಉರಿವಾಗ್ನಿ ಸೂರ್ಯ ಸೋಮ ಅನಿಲ ಪವಿತ್ರ ಪರಾಸ್ತ್ರ
ಭರಕೆ ಲೇಶವು ನಾನು ಅಂಜುವನಲ್ಲವು
ಪರಮಪಾವನ ಬ್ರಹ್ಮ ಕುಲಾವಮಾನಕ್ಕೆ
ಪರಿಪರಿ ಅಂಜುವೆ ಥರಥರ ನಡುಗುವೆ
ಕರಿಗಿರೀಶನ ನಿಜಶರಣರಿಗಪಮಾನ
ನೆರೆ ಉಡಿಯಲಿ ಕಟ್ಟಿಕೊಂಡ ಕೆಂಡವು ದಿಟವು

## ೩೪೮

ದುರುಳ ಬುದ್ಧಿಯನು ತೋರಿಸಬೇಡವೊ ಪ

ನರವರರಿಗೆ ಇದು ಸರಿಯಲ್ಲವೋ ಕೇಳ್ ಅ.ಪ.

ತುಡುಗ ಬುದ್ಧಿಯಿದ ಕಡೆಗಾಲಕೆ ಸರಿ
ನುಡಿಗೆದುರಿಲ್ಲವೋ ನಿನಗಿಂದು
ಕಡು ಪತಿವ್ರತೆಯರು ಬಿಡುವ ನಯನಜಲ
ಉಡಿಯಲಿ ಕಟ್ಟಿದ ಉಜ್ವಲ ಶಿಖಿಯೊ ೧

ಧರ್ಮಪಥದಿ ಸಂಚರಿಸುವ ಸುಜನರ
ಮರ್ಮವ ಭೇಧಿಸೆ ಮಾತಿನಲಿ
ಒಮ್ಮೆ ಅವರು ಬಿಸಿರುಸಿರನು ಚಿಮ್ಮಿಸೆ
ಒಮ್ಮೆಗೆ ನಿನ್ನಯ ಕುಲಕ್ಷಯ ನಿಜವು ೨

ಮತ್ತನಾದ ನಿನಗೆತ್ತಣದೊ ಇನ್ನು
ಯುಕ್ತಾಯುಕ್ತ ವಿವೇಚನೆಯು
ಭಕ್ತವತ್ಸಲ ಶ್ರೀ ಕರಿಗಿರೀಶನ
ಚಿತ್ತ ಸತ್ಯವೆಂದು ತೊಳಿಯೊ ಮೂಢ ೩

## ೩೪೯

ಬಿಡೋ ಇನ್ನು ಬಿಡೋ ಇನ್ನು ಪ

ಕಡೆಗಾದರೂ ನಿನ್ನ ಹುಡುಗು ಬುದ್ಧಿಯನು ಅ.ಪ.

ಜೀರ್ಣವಾಯಿತು ದೇಹವು ನಿನಗೆ
ಜೀರ್ಣವಾಗಲಿಲ್ಲ ನೇಹವು ಕೊನೆಗೆ ೧

ಹೇಮವಸನ ವಾಹನ ಮೃಷ್ಟಾನ್ನಗ
ಳಾ ಮಹನೀಯನೊಲಿಸವೊ ಮೂಢ ೨

ಸ್ನಾನ ದಾನ ಅಧ್ಯಯನಾದಿಗಳಿಗೆ
ಶ್ರೀನಿವಾಸ ತಾನೊಲಿಯನೊ ಬರಿದೆ ೩

ತಾಳ ಮೇಳ ಸಂಗೀತಾದಿಗಳನು
ಕೇಳನು ಪ್ರೇಮದ ಭಾವವಿಲ್ಲದೊಡೆ ೪

ಚಿತ್ತ ಮಲಿನವಿದ್ದು ಸತ್ಕಾರವಗೈಯ್ಯೆ
ಆಪ್ತ ಕಾಮ ತಾ ತೃಪ್ತಿಯ ಪೊಂದನು ೫

ಶ್ರೀಧರ ತಾ ದಯದಿಂದೊಲಿದಲ್ಲದೆ
ಸಾಧನ ಮಾತ್ರಕ್ಕೆ ಒಲಿಯಲು ಸಾಧ್ಯವೆ ೬

ನಳಿನನಯನನಾಜ್ಞೆಯ ನೀ ಪಾಲಿಸೆ
ಒಲಿವನು ನಿಜವಿದು ನಲಿಯುತ ನಿನಗೆ ೭

ಮೃಡವಂದಿತ ಶ್ರೀ ಕರಿಗಿರೀಶನೊಳ್
ದೃಢ ಭಕ್ತಿಯನಿಡು ಬಿಡದೆ ಪೊರೆವನೊ ೮

## ೩೫೦

ಮೀರಲುಬಹುದೆ ದೈವ ಸಂಕಲ್ಪವ ಪ

ಮಾರಮಣನ ಘನ ಮನಕೆ ಬಂದುದನು ನಿ
ವಾರಿಸಿ ನಡೆಯಲಾ ಆರಿಗೆ ಸಾಧ್ಯವು ಅ.ಪ.

ಪುತ್ರರ ಬಯಸಲು ಮತ್ತೆ ವಂಧ್ಯಳು ಸತಿ
ವಿತ್ತ ಬಯಸೆ ಶುಕ್ಲ ವೃತ್ತಿಯೆ ಗತಿಯು ೧

ಆಲಯದೊಳು ಜನನ ಆಗಬೇಕೆಂದರೆ
ಕಾಲನಾಮಕನಿಚ್ಛೆ ಅನ್ಯತ್ರವಿಹುದು ೨

ಜನನ ಮರಣಗಳು ಜಗದೀಶನಾಧೀನ
ವನಜನಯನ ಶ್ರೀ ಕರಿಗಿರೀಶನ ಚಿತ್ತ ೩

## ೩೫೧

ಸರಸಿಜಾಸನ ಮೊದಲು ಸ್ತಂಭ ಪರ್ಯಂತವು
ಚರಚರಾತ್ಮಕ ಜಗವು ಎಲ್ಲವು ಪ

ಪರತರನಾದ ಯಾವಾತನಾಧೀನವೋ ಆ
ಹರಿಯೇ ಬಲವು ನಿನಗೆ ಎನಗೆ ಮತ್ತೆಲ್ಲರಿಗೆ ಅ.ಪ.

ಈಶ್ವರನಾತನು ಕಾಲ ಉರುಕ್ರತು
ಭಾಸುರತೇಜ ಓಜಸು ಸತ್ವನೊ ಬಲು ಶಕ್ತನೊ
ಸರ್ವಜಗತ್ಸೃಷ್ಟಿ ಸ್ಥಿತಿ ಲಯಕಾರನೊ
ಆ ಸರ್ವೇಶನ ಬಿಟ್ಟು ಬಲವಾವುದಿನ್ನಯ್ಯಾ ೧

ಆರು ವರ್ಗಗಳೆಂಬ ವೈರಿಗಳ್ ಕಳ್ಳರಂತೆ
ಸೇರಿಕೊಂಡಿಹರು ಶರೀರದೊಳು
ಗಾರು ಮಾಡುವರವರಗಲ್ಲದೆ ಧರೆಯಲ್ಲಿ
ಭೂರಿ ಜಯಿಸಿದೆನೆಂಬ ಗರ್ವ ಸಲ್ಲುವುದೇನೊ ೨

ನಿನ್ನ ಆಸುರೀಭಾವ ಇನ್ನಾದರೂ ಬಿಟ್ಟು
ಘನ್ನಮಹಿಮ ಕರಿಗಿರೀಶನೊಳ್ ಮನವ ।
ಚೆನ್ನಾಗಿ ಕಲಿಸಿ ನೀ ಸಮಚಿತ್ತನಾದೊಡೆ
ಇನ್ನು ನಿನಗೆ ವೈರಿಗಳು ಯಾರು ಇಹರಯ್ಯಾ ೩

## ೩೫೨*

ಅರಸಕೇಳಲೈ ಸರಸಿಯೊಳಗೆ ತಾ
ಸರಸವಾಡುತಾ ಕರಿವರನಿರೆ
ಪರಮ ಭೀಕರ ಪ್ರಬಲ ನಕ್ರವು
ಕರಿಯ ಕಾಲನು ಪಿಡಿದು ಸೆಳೆಯಿತು ೧

ಚಕಿತನಾಗುತ ಚತುರ ದ್ವಿಪವರ
ಮಕರಿ ವದನದಿಂ ಮುಕ್ತನಾಗಲು
ಸಕಲ ಸಾಹಸಗೈದನಕ್ಕಟ
ವಿಕಲವಾಯಿತಾ ಯತ್ನವೆಲ್ಲವು ೨

* ಗಜೇಂದ್ರನು ನಕ್ರಬಾಧೆಗೆ ಸಿಕ್ಕಿದ ಸಂದರ್ಭ

ನಕ್ರ ಸೆಳೆತವು ಪ್ರಬಲವಾಗಲು
ದಿಕ್ಕು ತೋರದೆ ಕೂಗಿಕೊಂಡನು
ಮಿಕ್ಕ ಗಜಗಳು ಕೂಡಿ ಬಿಡಿಸಲು
ಶಕ್ತಿಮೀರಿ ಸಾಹಸಗೈದುವು ೩

ಆನೆಗಳು ಒಂದೆಡೆ ಎಳೆಯಲು
ಆ ನೆಗಳು ಒಂದೆಡೆ ಎಳೆಯಲು
ಏನನೆಂಬೆ ಹೋರಾಟವೀ ಪರಿ
ಏನು ನಡೆದರೂ ವಿಫಲವಾಯಿತು ೪

ಹಿಂಡು ಬಳಗಗಳೆಲ್ಲ ನೋಡುತ
ದಂಡೆ ಮೇಲೆ ತಾವ್ ನಿಂತುಬಿಟ್ಟವು
ಜೊಂಡು ಹುಲ್ಲು ತಾ ಪಿಡಿದು ತನ್ನಯ
ಸೊಂಡಿಲಿಂದ ಶುಂಡಾಲ ಗೆದ್ದನು ೫

ನಕ್ರಬಾಧೆಯು ಬಿಡಿಸಲಾರಿಗೂ
ಶಕ್ಯವಾಗದೆ ಹೋಯಿತಕ್ಕಟ
ದಿಕ್ಕುಗೆಟ್ಟು ತಾ ದೈನ್ಯದಿಂದಲೇ
ದುಃಖಪಡುತ ಭೋರಿಟ್ಟು ಕೂಗಿದ ೬

ಉದಿಸಿತಾಗ ಸುಜ್ಞಾನವವನೊಳು
ಸುದತಿ ಮಕ್ಕಳು ಸಲಹರೆಂಬುದು
ಬದಲು ಬಯಸದ ಬಂಧು ಕರಿಗಿರಿ
ಸದನನೆಂದು ತಾನಂಬಿ ನೆನೆದನು ೭

## ೩೫೩*

ಎಲೆ ಮಹಾತ್ಮರೇ ನೀವು ರಾಜರ್ಷಿಗಳ ತೆರದಿ
ಬೆಳಗುವಿರಿ ನೋಡೆ ದೇವಕುವರರಂತಿಹಿರಿ
ಧೀರ ಗಂಭೀರತರ ಭಾವ ತೋರ್ಪುದು ಮುಖದಿ
ನಾರು ವಸ್ತ್ರವ ಧರಿಸಿ ತಿರುಗುವಿರಿ ವನದಿ ೧

ಕಂದರ್ಪನನು ಪೋಲ್ವ ಕಮನೀಯ ವಿಗ್ರಹರು
ಬಂದಿ ಹಿಂನಡೆಯಲಿ ವೈರಿ ನಿಗ್ರಹರು ।
ಪುಟಕ್ಕಿಟ್ಟ ಚಿನ್ನದಂತೆ ಕಾಂತಿರಂಜಿತರು
ಪಟುತರಂಗರು ಗಹನವಿಟದಿ ಪರಿವ್ರಾಜಕರು ೨

ಆಜಾನುಬಾಹುಗಳು ಆಜಾನು ಜಂಘಗಳು
ಆ ಜಟ ಮಂಡಲವು ರಾಜಿಸುತಲಿಹವು
ದೃಢವಾದ ನಿಮ್ಮಡಿಗಳಿಡುವ ಧ್ವನಿಗಳ ಕೇಳಿ
ಅಡವಿಯೊಡತನ ಪಡೆದ ಸಿಂಹಗಳು ನಡುಗುವುವು ೩

ಧರೆಗಿಳಿದು ಬಂದಿರ್ಪ ರವಿ ಚಂದ್ರರಂದದಲಿ
ನೆರೆ ಪ್ರಕಾಶಿಕರಾಗಿ ಕಂಗೊಳಿಸುತಿಹಿರಿ
ಗುರುತರದ ಕಾರ್ಯತತ್ಪರರಾಗಿ ಬಂದಿರುವ
ನರಭಾವ ತೋರುವುದು ಕರಿಗಿರೀಶನ ದಯದಿ ೪

## ೩೫೪**

ಏನು ಕರುಣವೊ ಕೃಷ್ಣ ಎಮ್ಮ ಮೇಲೆ ಪ

ನಾನಾಪತ್ತುಗಳ ಕಳೆದು ಸಲಹಿದೆಯೊ ಅಕಳಂಕ ಅ.ಪ.

---

* ರಾಮಲಕ್ಷ್ಮಣರನ್ನು ಆಂಜನೇಯನು ಮೊದಲಬಾರಿಗೆ ಭೇಟಿಮಾಡಿ ಮಾತನಾಡಿಸಿದ ಸಂದರ್ಭ

** ಧರ್ಮರಾಯ ಮಾಡಿದ ಪ್ರಾರ್ಥನೆ

ಕೌರವ ಕೊಟ್ಟ ಪರಿಪರಿಯ ಕಷ್ಟಗಳ
ಪರಿಹರಿಸಿ ನೀ ಕಾಯ್ದೆ ಪರಮ ಕರುಣಿ
ಅರಗಿನ ಮನೆಯಲಿ ಉರಿದುಪೋಗದ ತೆರದಿ
ಭರದಿಂದ ರಕ್ಷಿಸದೆ ಭೀಮನೊಳು ನೀನಿದ್ದು ೧

ಕಾನನದಿ ನಾವ್ ನಿದ್ರೆಗೈಯುತಿರೆ ಕಡುಘೋರ
ದಾನವ ಹಿಡಿಂಬಕನು ಕೊಲ್ಲ ಬರಲು
ಪ್ರಾಣಸುತ ನಮ್ಮ ಈ ಭೀಮನಿಗೆ ಬಲಕೊಟ್ಟು
ಹೀನಖಳನನು ಸೋಲಿಸಿ ಕಾಯ್ದೆ ಸ್ವಾಮಿ ೨

ಲೋಕಕಂಟಕನಾದ ಭೀಕರ ಬಕಾಸುರನ
ನೀ ಕೊಂದು ಈ ವೃಕೋದರನಲಿ ನಿಂದು
ಏಕಚಕ್ರಪುರದ ಲೋಕವನು ನೀ ಕಳೆದೆ
ಏಕಮೇವಾದ್ವಿತೀಯ ಶ್ರೀ ಕರಿಗಿರೀಶ ೩

## ೩೫೫*

ಏನು ಸಾಹಸವಂತ ಈ ನಮ್ಮ ಹನುಮಂತ ಪ

ವಾನರರೇ ನೀವ್ ಕೇಳಿ ಇವನೆಂಥ ಧೀಮಂತ ಅ.ಪ.

ಸಾಗರವ ದಾಟುವೊಡೆ ಸಾಧ್ಯವೇ ಪರರಿಗೆ
ಹೇಗೆ ಪೊಕ್ಕನೋ ಕಾಣೆ ದೈತ್ಯಪುರವ
ಹೋಗಿ ಪುನರಪಿ ಬಂದನೆಂತು ತಾ ಜೀವದಲಿ
ಬೀಗುತಿಹ ರಾವಣನ ಗರ್ವವನು ಮುರಿದಿಹನು ೧

ಭೂಮಿಸುತೆ ಸೀತೆಯ ಕ್ಷೇಮವಾರ್ತೆಯನೆನಗೆ
ನೇಮದಲಿ ತಂದಿತ್ತ ಕುಶಲಮತಿಯು ।

* ವಾನರರ ಎದುರಿಗೆ ಶ್ರೀರಾಮ ಮಾಡುವ ಆಂಜನೇಯ ಪ್ರಶಂಸೆ

ಸ್ವಾಮಿಕಾರ್ಯವನಿಂತು ಸಾಧಿಸಿದ
ಈ ಮಹಾವೀರನಿಗೆ ಸಮರಾರು ಧರೆಯೊಳಗೆ ೨

ಮಿತಿಯಿಲ್ಲದುಪಕಾರ ಮಾಡಿರ್ಪನಿವಗಿನ್ನು
ಪ್ರತಿಫಲವ ನಾನೇನು ಕೊಡಬಲ್ಲೆನು ।
ಪ್ರತಿಯಿಲ್ಲದೆನ್ನ ಆಲಿಂಗನವನೀವೆ ಶ್ರೀ
ಪತಿ ಕರಿಗಿರೀಶನ ಪರಮಭಕ್ತನು ಈತ ೩

## ೩೫೬*

ಏಳು ನೀ ಭೋಜನಕೆ ಯದುಕುಲೋತ್ತುಂಗ
ಪೇಳಬೇಕೆ ಎನಗೆ ಕುರುವಂಶ ಸಿಂಗ
ಉಪಚಾರನುಡಿ ಸಾಕು ಕಪಟತನತರವೆ
ನಿಪುಣ ನಿನ್ನೊಳು ಕಪಟ ನಿಲ್ಲಲಳವೆ
ಕಾಲ ಮೀರುತಲಿಹುದು ತಡವ್ಯಾಕೆ ಇನ್ನು
ತಾಳು ಬಂದಿಹ ಕಾರ್ಯಪೂರ್ಣವಾಗಲಿ ಮುನ್ನು
ಬಂಧು ಭಾವವು ನಿನ್ನನಾಧರಿಸೆ ಕಾರಣವು
ಸಂದೇಹವೇನದಕೆ ಚೆನ್ನಾಗಿ ತಿಳಿದಿಹೆವು
ಮುಚ್ಚುಮರೆ ಸಾಕು ನಿನ್ನಿಚ್ಚೆ ತಿಳಿಸುವುದು
ಬಿಚ್ಚಿ ಪೇಳ್ದೊಡೆ ಹರುಷ ಕೊಚ್ಚಿಹೋಗುವುದು
ಪಾರಣೆಯ ಮಾಡದಿಹ ಕಾರಣವದೇನು
ಕ್ರೂರ ಕರ್ಮಿಗಳಲಿ ಆರೋಗಿಸೆನು ನಾನು
ಮತ್ತೆಲ್ಲಿ ಭುಂಜಿಸುವೆ ಮೃಷ್ಟಾನ್ನ ಬಿಟ್ಟು
ಭಕ್ತ ವಿದುರನಿಗಾನು ಅತಿಥಿ ತಿಳಿ ಗುಟ್ಟು
ಮುಂಚೆ ತಿಳಿಯನೆ ನಿನ್ನ ವಂಚನೆಯ ವ್ಯಾಪಾರ
ಕೊಂಚ ನಿನ್ನೊಳಗಿಲ್ಲಿ ಕುರುಕುಲಾಂಗಾರ
ಸ್ಥಿರಬುದ್ಧಿ ನಿನಗಿಹುದು ಪಾಂಡವರ ಹಿತದಿ
ಕರಿಗಿರೀಶನ ಭಕ್ತರವರಾದ ಕತದಿ

---

* ಕೃಷ್ಣ ದುರ್ಯೋಧನರ ಸಂವಾದ

## ೩೫೭*

ಕನ್ಯಾರತ್ನವನಿತ್ತನು ಹರಿಗೆ ಸತ್ರಾಜಿತರಾಯನು ಪ

ಧನ್ಯನು ತಾನೆಂದೆನ್ನುತ ಯದುಕುಲರನ್ನ ಸುಗುಣ
ಸಂಪನ್ನಗೆ ಹರುಷದಿ ಅ.ಪ.

ಕಮಲಾಸನ ಸನ್ನುತ ಚರಣನಿಗೆ ಕಮನೀಯ ಸ್ವರೂಪಗೆ
ಕಮಲಾರಮಣಗೆ ಸ್ವರತನಿಗೆ ಕಾಮಿತ ಫಲದಾತಗೆ
ಸುಮಬಾಣನ ಪಿತ ಸುಂದರಗೆ ಸುಮದಳನೇತ್ರನಿಗೆ
ನಮಿಪ ಜನರ ಸುರದ್ರುಮನೆಂದೆನಿಸುವ
ಅಮಿತ ಮಹಿಮಯುತಸಮವಿರಹಿತನಿಗೆ ೧

ಬೃಂದಾರಕ ಬೃಂದ ಸುವಂದಿತಗೆ ಶ್ರೀ ಗೋವಿಂದಗೆ
ಬೃಂದಾವನ ವಿಹರಣ ವಿಭವಗೆ ವಿಶ್ವಂಭರನಿಗೆ
ಮಂದಾಕಿನಿ ಜನಕಗೆ ಮಾಧವಗೆ ಮರಕತಶ್ಯಾಮನಿಗೆ
ಮಂದರಧರ ಮುಚುಕುಂದವರದ ಪೂ
ರ್ಣೇಂದು ವದನಗುಣಸಾಂದ್ರ ಮುಕುಂದಗೆ ೨

ವರಲೀಲಾ ಮಾನುಷ ವೇಷನಿಗೆ ವದನಾಂಬುಜದಲಿ
ಸರಸಿಜ ಜಾಂಡವ ತೋರಿಪಗೆ ಸಾರಸನಾಭ
ಪರಮಪಾವನ ಚರಿತಗೆ ಪುರುಷೋತ್ತಮನಿಗೆ
ಗರುಡಗಮನ ಶ್ರೀ ಕರಿಗಿರೀಶ ಯದು
ವರಕುಲಮಣಿ ಮುರಹರನಿಗೆ ಮುದದಲಿ ೩

---

* ಕೃಷ್ಣ ಸತ್ಯಭಾಮೆಯರ ವಿವಾಹ

## ೩೫೮*

ಕುಶಲವರೆ ಲಾಲಿಸಿರಿ ಕಥೆಯನೆಲ್ಲವ ಪೇಳ್ವೆ
ಕುಶಲಮತಿಗಳೇ ನಿಮ್ಮ ಕೌತುಕವು ಸಹಜವಲೆ ೧

ಬಿಸರುಹಾಕ್ಷನ ಚರಿತೆ ಚಿತ್ರತರಮಹುದಲ್ತೆ
ಉಸುರುವೆನು ಪೂರ್ವ ವೃತ್ತಾಂತವನು ನಾ ಮೊದಲೆ ೨

ಅಸುರರುಪಟಳದಿಂದ ವಸುಧೆ ಭಾರವು ಹೆಚ್ಚೆ
ಬಿಸಜಭವಮುಖ ಸುರರ ಮೊರೆ ಕೇಳಿ ಮನ ಮೆಚ್ಚೆ ೩

ಬಿಸಜನೇತ್ರನು ತಾನು ದಶರಥನ ಸುತನೆನಿಸಿ
ವಸುಮತಿಯಲುದಿಸಿ ಸಜ್ಜನರ ಸಂತಸಗೊಳಿಸಿ ೪

ಹಸುಳೆತನದಲಿ ಅಸುರೆ ತಾಟಕಿಯ ಸಂಹರಿಸಿ
ಕುಶಿಕಸುತನಧ್ವರವ ಕಡು ರಕ್ಷಣೆಯ ಮಾಡಿ ೫

ಅಶಮವಾಗಿದ್ದಹಲ್ಯೆಯ ತಾನುದ್ಧರಿಸಿ
ಅಸಮಾಕ್ಷಚಾಪವನು ಲೀಲೆಯಲಿ ತುಂಡರಿಸಿ ೬

ವಸುಮತಿಸುತೆ ಸೀತೆ ಕರ ಪದ್ಮವನು ಗ್ರಹಿಸಿ
ಎಸೆವೆರಡು ರೂಪದಲಿ ಘನಲೀಲೆ ಪ್ರಕಟಿಸಿ ೭

ಕುಶಲದಿಂ ಯುವರಾಜ ಪಟ್ಟಕ್ಕೆ ಸನ್ನಾಹ
ವೆಸೆದಿರಲು ವಿಧಿಲೀಲೆಯೇನೆಂಬನಾಹ ೮

ದಶರಥನ ಕಿರುಮಡದಿ ಪಡೆದ ವರಕನುವಾಗಿ
ಅಸಮ ಸತ್ಯಾತ್ಮಕನು ಸತಿ ಅನುಜ ಸಹಿತನಾಗಿ ೯

* ವಾಲ್ಮೀಕಿ ಕುಶಲವರಿಗೆ ಹೇಳಿದ ರಾಮಾಯಣದ ಕಥಾಭಾಗ

ವಸುಮತಿಯೊಳವತರಿಸಿ ಬಂದ ಕಾರ್ಯವ ನೆನೆದು
ಅಸಮ ನಾಟಕ ಸೂತ್ರಧಾರಿ ಅಡವಿಗೆ ನಡೆದು ೧೦

ಎಸೆವ ಗಂಗೆಯ ದಾಟಿ ಗುಹನನ ಧನ್ಯನಗೈದು
ಋಷಿ ಭರದ್ವಾಜರಿಂ ಸತ್ಕಾರವನು ಪಡೆದು ೧೧

ವಸುಮತೀಧರ ಚಿತ್ರಕೂಟದಲಿ ನಿಂತಿರಲು
ಅಸಮ ಭಕ್ತವರೇಣ್ಯ ಭರತ ತಾನೈತರಲು ೧೨

ಬಿಸಜಾಂಘ್ರಿ ಸಂಪೂತ ವರ ಪಾದುಕೆಗಳನಿತ್ತು
ಕುಶಲಮತಿ ತಾನವನ ಕಳುಹಿ ಯೋಚಿಸಿ ಮತ್ತು ೧೩

ಪೆಸರಾಂತ ದಂಡಕಾ ವನ ಪ್ರವೇಶವ ಮಾಡಿ
ಅಸುರರನೇಕರು ಅಂತಕನ ಬಳಿದೂಡಿ ೧೪

ಋಷಿವರ್ಯ ಶರಭಂಗಗೀಕ್ಷಣದಿ ಸುಗತಿಯನು
ಹಸನಾಗಿ ಕರುಣಿಸಿದ ಬಳಿಕ ಕುಂಭೋದ್ಭವನು ೧೫

ಒಸಗೆಯಿಂದಿತ್ತ ದಿವ್ಯಾಸ್ತ್ರಂಗಳ ಸಂಗ್ರಹಿಸಿ
ಪಸರಿಸಿಹ ವಿಲಸಿತದ ಪಂಚವಟಿಯಲಿ ನೆಲಸಿ ೧೬

ಒಸಗೆಯಿಂದಿರೆ ಬಂದ ಶೂರ್ಪನಖಿಗತಿಭಂಗ
ವೆಸಗಿ ಸೋದರನಿಂದ ಶೋಭಿಸೆ ಶುಭಾಂಗ ೧೭

ದಶಕಂಠ ಕಳುಹಿಸಿದ ಮಾಯಾ ಮೃಗಾಕಾರ
ದಸುರ ಮಾರೀಚನಂ ಸಂಹರಿಸಿ ರಘುವೀರ ೧೮

ಅಸಮ ಸೋದರ ಸಹಿತ ಆಶ್ರಮಕ್ಕೈತಂದು
ದೆಸೆದೆಸೆಯೊಳರಸೆ ತನ್ನರಸಿ ಕಾಣದಿರಲು ೧೯

ಹುಸಿವೇಷದಿಂ ಬಂದ ಖಳ ಕುಲಾಗ್ರಣಿಯಿಂದ
ಶಶಿಮುಖಿಯು ಹಗರಣವಾಗಿರಲು ನಿತ್ಯಾನಂದ ೨೦

ದೆಸೆಗೆಟ್ಟವನ ಪರಿಯಲತಿಶಯದಿ ಶೋಕಿಸುತ
ದೆಸೆದೆಸೆಯೊಳರಸುತ್ತಾ ಬಸವಳಿದು ತಾ ಬರುತ ೨೧

ಎಸೆವವರ ಋಷ್ಯಮೂಕಮತಂಗಾಶ್ರಮದಿ
ಬಿಸಜಾಪ್ತಸುತನ ಕಂಡವನೊಡನೆ ತಾ ಮುದದಿ ೨೨

ಉಸುರಿ ವಾಲಿಯ ವಧೆಗೈವೆನೆಂದಭಯವನು
ಎಸೆವ ವಿಲಸಿತ ಮಹಿಮ ಕರಿಗಿರೀಶನು ತಾನು ೨೩

## ೩೫೯*

ಜಲನಿಧಿಯ ಮಧ್ಯದಿಂ ಜಗದ ಜನನಿಯು ಜನಿಸೆ
ಪೊಳೆವೊ ರತ್ನದ ಪೀಠ ದಿವಿಜಪತಿಯೊಪ್ಪಿಸಿದ
ಆ ಮಹಾನದಿಗಳಂ ಮಾನುಷಾಕೃತಿ ತಾಳಿ
ಹೇಮ ಕುಂಭಗಳಿಂದ ನಿರ್ಮಲೋದಕವೀಯೆ
ಧರಣಿತಾನಭಿಷೇಕ ವಸ್ತುಗಳನೊಪ್ಪಿಸಲು
ವರ ಗೋವುಗಳು ಪಂಚಗವ್ಯಗಳನರ್ಪಿಸಲು
ಘನ ವಸಂತನು ಪುಷ್ಪಫಲಗಳನು ತಂದೀಯೆ
ಮುನಿವರರು ಶ್ರೀ ಲಕ್ಷ್ಮಿಗಭಿಷೇಕ ನಡೆಸಿದರು
ಗಂಧರ್ವರೆಲ್ಲ ಶುಭಗಾಯನವ ಮಾಡುತಿರೆ
ಸುಂದರಾಪ್ಸರ ಸ್ತ್ರೀಯರಂದು ನರ್ತನಗೈಯೆ
ಮೇಘಗಳು ವರ ಪಟಹ ಪಣವ ಗೋಮುಖ ಶಂಖ
ಶ್ಲಾಘ್ಯತರ ಮೃದಂಗ ವೇಣುವೀಣಾದಿ
ಶ್ರೇಷ್ಠರೀತಿಯ ವಾದ್ಯಗಳ ತಾವು ನುಡಿಸುತಿರೆ
ಅಷ್ಟದಿಗ್ಗಜ ಪೂರ್ಣ ಕಲಶೋದಕವತಂದು
ಧರಣಿ ಸುರವರರು ಶ್ರುತಿಮಂತ್ರ ಪಠಿಸುತಿರೆ
ವರಲಕ್ಷ್ಮಿಗಭಿಷೇಕ ಹರುಷದಿಂ ಗೈದುವುದು
ಶರಧಿರಾಜನು ಶಾತಕುಂಭಮಯ ವಸ್ತ್ರವನು
ವರುಣದೇವನು ದಿವ್ಯ ವೈಜಯಂತಿಯ ಮಾಲೆ

* ಲಕ್ಷ್ಮೀದೇವಿ ಆವಿರ್ಭೂತಳಾದ ಸಂದರ್ಭ

ವಿಶ್ವಕರ್ಮನು ವಿವಿಧ ಚಿತ್ರ ಭೂಷಣಗಳನು
ವಿಶ್ವಾಸದಿಂ ಅಜನರಾಣಿಯೊಂದ್ಹಾರವನು
ಸರಸಿಜಾಸನ ತಾನು ಸರಸಿಜವನೊಂದನು
ಉರಗಗಳು ಕುಂಡಲದ್ವಯನರ್ಪಿಸಲಾಗ
ಶ್ರೀ ಲಕ್ಷ್ಮೀ ಭ್ರಮರ ಝುಂಕಾರಯುತ ನೈದಿಲೆಯ
ಮಾಲೆಯನು ಪಿಡಿದು ತಾನಾಲೋಕಿಸಿದಳಮರ
ಸಂದಣಿಯಲಂದು ತನಗನುರೂಪ ವರನನ್ನು
ಮಂದಮತಿಗಳ ಮರುಳುಗೊಳಿಪ ಮಾಯಾವಿನಿಯು
ಕರಿಗಿರೀಶ ಬಳಿಯನರಘಳಿಗೆ ಬಿಟ್ಟಿರದ
ಸಿರಿದೇವಿ ತಾ ಸುರರೊಳರಸಿದಳು ಪತಿಯ

## ೩೬೦*

### ಸೀಸಪದ್ಯ

ಧರಣಿ ಮೊರೆಯನು ಕೇಳಿ ಸರಸಿಜಾಸನ ಸಕಲ
ಸುರರ ಸಹಿತದಿ ಶರಧಿಶಯನಗರುಹೆ
ವಸುದೇವ ದೇವಕಿ ಸುತನೆನಿಸಿ ಅಜನಯ್ಯ
ವಸುಮತಿಯಲವತರಿಸಿ ಲೀಲೆಯಿಂದ
ಧರಣಿ ಕಂಟಕರಾದ ದುರುಳ ದೈತ್ಯರ ಸದೆದು
ಪರಿಪಾಲಿಸಿದ ಸಾಧು ಸುಜನರನ್ನು
ನಿಜಭಕ್ತ ಪಾಂಡವರ ನೆಂಟನೆಂದೆನಿಸಿ ಭೂ
ಭುಜ ಸುಯೋಧನ ಮುಖ್ಯ ದುರುಳರನ್ನು
ಸದೆಬಡಿಸಿದಾ ಬಳಿಕ ಮದದಿ ಕೊಬ್ಬಿದ
ಯದು ಬಳಗವನು ವಿಪ್ರಶಾಪದಿಂದ ಕೊಲಿಸಿ
ಪದುಮಸಂಭವಜನಕ ಕರಿಗಿರೀಶನು ತನ್ನ
ಸದನಕ್ಕೈದಿದ ಸರ್ವವ್ಯಾಪ್ತ ಸರ್ವೇಶ

---

* ಕೃಷ್ಣಾವತಾರ

## ೩೬೧*

ಪರಮ ಸಾಹಸವಂತ ಧೀಮಂತ ಹನುಮಂತ ಪ

ಸರಸರನೆ ತಾ ಬೆಳೆದ ತಾ ಮುಗಿಲ ಪರ್ಯಂತ ಅ.ಪ.

ಇಳೆಯಿಂದ ನಭವ ಪರಿಯಂತವೇಕಾಕೃತಿಯು
ಬೆಳಗುತಿರೆ ನೋಡಲತಿ ಚೋದ್ಯವು
ವಿಲಸಿತದ ವಿಂಧ್ಯಗಿರಿಯಂತೆ ಶೋಭಿಸಿತು
ಫಲಗುಣಾಗ್ರಜ ನೋಡಿ ಬೆರಗಾಗುತಿರಲು ೧

ಪಿಂಗಾಕ್ಷಿಗಳು ದಿಕ್ತಟಂಗಳನು ಬೆಳಗುತ್ತ
ಕಂಗೊಳಿಸುತಿರ್ದುದಾ ಸಮಯದಿ
ಶೃಂಗಾರ ಕಾಂತಿಯಿಂ ತುಂಗವಿಕ್ರಮನ ಉ
ತ್ತುಂಗ ದೇಹವು ದಿವ್ಯರಂಗು ಒಡೆದೆಸೆಯೆ ೨

ಶರಧಿಶತಯೋಜನ ನೆರೆದಾಂಟಿದಾ ದೇಹ
ಅರಿಭಯಂಕರ ದೇಹ ಗುರುತರದ ದೇಹ
ಕರಿಗಿರೀಶನ ಚರಣ ಸರಸೀರುಹ ದ್ವಂದ್ವ
ಪರಿಚರ್ಯಕ್ಕನುವಾದ ಪರಮದೇಹವಿದೆನಲು ೩

## ೩೬೨**

ಪಾದುಕೆಗಳ ದಯಪಾಲಿಸು ಪರಮ
ಪಾವನ ಮಹಿಮ ಸುದೇವ ಲಲಾಮ ಪ

ನೀ ದಯದಿಂ ತವಪಾದ ಪಯೋಜಗ
ಳಾದರದಲಿ ಕೊಡು ಹೇ ದಯಧಾಮ ಅ.ಪ.

---

* ಭೀಮನು ಆಂಜನೇಯನ ಉನ್ನತಾಕಾರವನ್ನು ಕಂಡ ಸಂದರ್ಭ

** ಭರತನು ಶ್ರೀರಾಮನ ಪಾದುಕೆಗಳನ್ನು ಬೇಡುವ ಸಂದರ್ಭ

ಅಜನವ್ಯಯನಪ್ರಾಕೃತ ಮಹಿಮನು
ಅಜನಪಿತನು ತನ್ನಿಚ್ಛೆಯೊಳು
ಅಜಸುತ ದಶರಥ ಸುತನೆಂದೆನಿಸಿದ
ತ್ರಿಜಗ ನೋಡೆ ಆಶ್ಚರ್ಯದೊಳು ೧

ತುಂಗಮಹಿಮ ತವ ಮಂಗಳಕರ ಚರ
ಣಂಗಳು ಈ ತ್ರಿಜಗಂಗಳ ಪಾಲಿಪುವು
ಅಂಗಜಕೋಟಿ ಶುಭಾಂಗನೆ ತವಪದ
ಭೃಂಗನೆನಿಸಿ ಕೃಪಾಪಾಂಗದಿ ಈಕ್ಷಿಸೊ
ಮಂಗಳಕರ ರಘುಪುಂಗವ ಕರಿಗಿರಿ
ರಂಗ ನೃಸಿಂಹ ಸೀತಾಂಗನೆಯರಸ ೨

## ೩೬೩*

ಬಂದ ಗೋವಿಂದ ವಾರಣೇಂದ್ರನ ಬಳಿಗಾಗ
ಸಿಂಧುಶಯನ ಕೃಪ ಸಿಂಧು ವೈಕುಂಠದಿಂದ ಪ

ಇಂದಿರೆಯೊಡನೇನೊಂದನೂ ನುಡಿಯದೆ
ನಿಂದು ಕಾದಿಹ ವಿಹಗೇಂದ್ರನ ನೋಡದೆ
ಒಂದೇ ಸಡಗರದಿಂದೋಡುತೆ ನಾ
ಗೇಂದ್ರಶಯನ ನಾಗೇಂದ್ರನ ಪೊರೆಯಲು ೧

ಬಂಗಾರ ಮಕುಟೋತ್ತಮಾಂಗದಿ ಶೋಭಿಸೆ
ಶೃಂಗಾರ ಫಣಿಯೊಳು ಮಂಗಳಕರ ತಿಲಕ
ಕಂಗಳ ಕಾಂತಿ ತ್ರಿಜಗಂಗಳ ಬೆಳಗಲು
ಹಿಂಗದೆ ಶಂಖ ಚಕ್ರಾಬ್ಜಂಗಳು ಕರದಲ್ಲಿ ೨

---

* ಗಜೇಂದ್ರ ಮೋಕ್ಷಕ್ಕೆ ಹರಿಯ ಆಗಮನ

ಅಂಗಜನಯ್ಯ ಶುಭಾಂಗ ಅಮರ ತ
ರಂಗಿಣಿ ಪಿತ ಭವ ಭಂಗ ಸುರಕುಲೋ
ತ್ತುಂಗ ರಂಗ ಉತ್ತುಂಗ ಮಹಿಮ ಮಾ
ತಂಗ ಗಿರಿಯ ನರಸಿಂಗನು ಬೇಗದಿ ೩

## ೩೬೪*

ಬಂದಾನು ಬಂದಾನು ಪ

ಬಂದನಾಗ ಗೋವಿಂದ ಯದುಕುಲಾ
ನಂದ ಮುಕುಂದನು ಮಂದಹಾಸದಲಿ ಅ.ಪ.

ಬೀದಿ ಬೀದಿಯೊಳು ಬಲು ಶೃಂಗಾರ
ಬಗೆ ಬಗೆ ತೋರಣದಿಂದಲಂಕಾರ
ಕಾದುನಿಂತಿಹ ಜನ ಪರಿವಾರ
ಮೋದದಿ ಮಾಡುವ ಜಯ ಜಯಕಾರ
ಮೇದಿನಿ ಸುರರಾಮ ಮಂತ್ರದ ಉಚ್ಚಾರ
ಸೌಧಗಳಲ್ಲಿಹ ಸ್ತ್ರೀಯರಪಾರ
ಸಾಧರದಿಂದೀಕ್ಷಿಸೆ ಜನನಿ ಕರವು
ಮೋದವೆ ಬೀರುತ ಯಾದವ ಕುಲಮಣಿ ೧

ಸುಂದರಿಯರು ನಲವಿಂದ ನಿಂದಿಹರು
ಗಂಧ ಪರಿಮಳದ ಜಲವೆರಚಿಹರು
ಅಂದದರಳ ಪುಷ್ಪಗಳ ವರ್ಷಿಪರು
ಕುಂದಣದಾರತಿಗಳ ಪಿಡಿದಿಹರು
ವಂದಿಮಾಗಧರು ಪೊಗಳುತಿಹರು
ಚಂದದಿ ಮಣಿಮಯ ಸ್ಯಂದನದಲಿ ಅರ
ವಿಂದ ನಯನ ಬಲು ಸುಂದರಾಗನು ೨

---

* ಮಧುರೆಗೆ ಕೃಷ್ಣನ ಆಗಮನ

ಬಂಗಾರದ ರಥವೇರಿ ಬರುತಿಹನು
ಕಂಗಳಿಗುತ್ಸವ ತಾ ತರುತಿಹನು
ಮಂಗಳಕರ ತಿಲಕವನಿಟ್ಟಿಹನು
ಬಂಗಾರದ ಮಕುಟ ಧರಿಸಿಹನು
ಶೃಂಗಾರದ ಶಿಸ್ತಲಿ ಶೋಭಿಪನು
ಅಂಗಜಕೋಟಿ ನಿಭಾಂಗನಾಗಿಹನು
ಮಂಗಳಾಂಗ ಶ್ರೀರಂಗ ಕರಿಗಿರಿ ನೃ
ಸಿಂಗನು ಕರುಣಾಪಾಂಗವ ಬೀರುತ ೩

## ೩೬೫*

ಬಂದಾ ಸುಂದರವದನ ಮಂದಹಾಸದಿ ರಘು
ನಂದನ ಧನು ಬಳಿಗೆ ಪ

ವಂದಿಸಿ ಕೌಶಿಕಗೆ ತಂದೆಯ ನೆನೆದು ಆ
ನಂದ ಮನದಲಿ ಮುಂದೆ ಮುಂದಕೆ ನಡೆದು
ಚಂದದಿ ಬರುತಿಹ ಅಂದನೋಡಿ ಮುನಿ
ವೃಂದ ಮನದೊಳಾನಂದವ ಪೊಂದುತ
ಇಂದಿರೇಶನಿವನೆಂದು ತಿಳಿದು ಭೂ
ನಂದನೆ ಇವನವಳೆವಂದು ಪೇಳುತಿರೆ ಅ.ಪ.

ಸಿಂಧುಶಯನ ಭಜಕ ಮಂದಾರ ಮುನಿಜನ
ವೃಂದ ಕುಮುದ ಚಂದ್ರ ಮಂದಜಾಸನ ವಂದ್ಯ
ಸಿಂಧುಸುತಾಲೋಲ ಸಿಂಧೂರ ಪರಿಪಾಲ
ಸಿಂಧೂರ ಗಮನದಿ ಸಿಂಧೂ ಗಂಭೀರ ಬರೆ
ಇಂದುವದನೆಯರು ಚಂದವ ನೋಡುತ
ಇಂದೀವಗೇ ಜಯವೆಂದು ನುಡಿಯುತಿರೆ
ಇಂದುಧರನ ಧನು ಬಂಧನ ಮಾಡಲು
ಇಂದಿರೇಶ ಶ್ರೀ ಕರಿಗಿರಿ ಮಂದಿರ ೧

* ಸೀತಾ ಕಲ್ಯಾಣದ ಸಂದರ್ಭ

## ೩೬೬*

ಮಾತನಾಡಿಸೋ ತಮ್ಮ ಮೃದುವಚನದಿ ಪ

ಈತನನು ನೀನೀಗ ಸ್ನೇಹಭಾವದಲಿ ಅ.ಪ.

ಕಪಿರಾಜ ಸುಗ್ರೀವ ಸಚಿವ ಶೇಖರನೀತ
ವಿಪುಲಮತಿ ಸಂಯುತನು ವ್ಯವಹಾರ ಚತುರ
ಅಪಶಬ್ದವಿನಿತಾದರಿಲ್ಲವೀತನ ಮುಖದಿ
ಸುಪವಿತ್ರದಾಕಾರ ಶೋಭಿತ ಸುಲಕ್ಷಣನು ೧

ನಾಲ್ಕು ವೇದಾಧ್ಯಯನ ಮಾಡಿದವನಲ್ಲದೊಡೆ
ನಾಲಿಗೆಯೊಳೀರೀತಿ ನುಡಿಯಲಳವೆ
ವ್ಯಾಕರಣ ಶಾಸ್ತ್ರದಲಿ ಪಾಂಡಿತ್ಯದಿವಗಿನ್ನು
ಸಾಕಲ್ಯವಿಲ್ಲದೊಡೆ ವಾಕು ಈ ಪರಿಬಹುದೇ ೨

ಮುಖನೇತ್ರ ಭ್ರೂಮುಖ್ಯ ಅಂಗಚೇಷ್ಟೆಗಳಿಲ್ಲ
ಸುಖ ಮಧ್ಯಸ್ಥಾಯಿಯಲಿ–ಮಾತುಮಿತವು
ಅಕಳಂಕ ಶ್ರೀ ಕರಿಗಿರೀಶನ ಪದಕಿಂಕರನು
ಸಕಲಲಕ್ಷಣಯುಕ್ತನಿವನತುಳ ಶಕ್ತ ೩

## ೩೬೭**

ಮಾಣು ಮಾಧವ ಮಾಯ ಜಾಲಗಳ್
ಜಾಣ ನೀನೆಲ್ಲೈ ಮಧುರ ನುಡಿಯೊಳು
ಮಾನವಳಿದ ಮೇಲ್ ಪ್ರಾಣವೇತಕೆ
ಕಾಣಬಂದಿತು ನಿನ್ನ ಕಪಟವು ೧

---

* ಆಂಜನೇಯನ ಗುಣಾತಿಶಯಗಳನ್ನು ಶ್ರೀರಾಮ ಲಕ್ಷ್ಮಣನಿಗೆ ಪರಿಚಯಿಸುವ ಸಂದರ್ಭ
** ಸತ್ಯಭಾಮೆಯು ಕೃಷ್ಣನಲ್ಲಿ ನಟಿಸಿದ ಕಪಟ ಕಲಹ

ಶೋಕ ಕಾರಣವರಿಯದಂತೆ ನೀ
ನೇಕೆ ಪೇಳುವೆ ಬರಿದೆ ಎನ್ನನು
ಸಾಕು ಸಾಕು ಈ ಸರಸವಾಕ್ಕುಗಳ್
ಶೋಕವಹ್ನಿಗೆ ಆಜ್ಯ ಸುರಿವರೆ ೨

ಭಾಮೆ ಕೃಷ್ಣನ ಪ್ರೇಮ ಪುತ್ಥಳಿ
ಸಾಮ್ಯರಹಿತವೀ ಸ್ನೇಹವೆನ್ನುತ
ಭೂಮಿಯೊಳ್ ಜನ ಪೊಗಳುತ್ತಿದ್ದರು
ಈ ಮಹಾಭ್ರಮೆ ಪೋಯಿತೀಗಲೆ ೩

ಚಾರುನುಡಿಗಳಾಪಾರವೆನ್ನೊಳು
ಸಾರ ಪ್ರೇಮವು ರುಕ್ಮಿಣಿಯೊಳು
ಪಾರಿಜಾತದ ಪುಷ್ಪವವಳಿಗೆ
ನೀರಸೋಕ್ತಿಗಳೆನ್ನ ಪಾಲಿಗೆ ೪

ಅಮರ ಮುನಿಪನು ನಿನ್ನ ಸಮುಖದೊಳ್
ಅಮಿತವಾಗಿ ತಾ ಸ್ತುತಿಸೆ ಭೈಷ್ಮಿಯ
ಕುಮತಿಯಿಂದ ತಾನೆನ್ನ ತೆಗಳಲು
ಅಮಮಯೆಂದೆಯಾ ಅಪ್ರಮೇಯನೆ ೫

ಕೊರಳೊಳು ಧರಿಸಿದ ಕುಸುಮ ಮಾಲೆಯು
ಉರಗನಾದೊಡೆ ಮಾಳ್ಪುದೇನು
ಶರದ ಚಂದ್ರನ ಕಿರಣ ತಪಿಪೊಡೆ
ಹಿರಿದು ಕರ್ಮವ ಫಲವಿದಲ್ಲವೇ ೬

ಕರಿಗಿರೀಶನ ಚಿತ್ತವೀಪರಿ
ಇರಲು ಸುಮ್ಮನೆ ಕೊರಗಲೇತಕೆ
ಸರುವ ಸಂಗವ ತೊರೆದು ತಪದೊಳು
ನಿರತಳಾಗುವೆ ನೀರಜಾಕ್ಷ ಕೇಳ್ ೭

## ೩೬೮*

ಯಾರೆಂದು ತಿಳಿದೆಯೋ ಈತನ ನೀನು ಪ

ಯಾರೆಂದು ತಿಳಿದಿಹೆ ಯದುಕುಲೋತ್ತಮನ ನೀ
ಪೋರ ಮಾತುಗಳನು ಸಾಕುಮಾಡೆಲೋ ಮೂಢ ಅ.ಪ.

ಪಶುಪಾಲನಿವನೆನುತ ಜರಿದೊಡೇನಾಯ್ತು
ಪಶುಪತಿ ವಿನುತನೀತ
ಬಿಸಜ ಸಂಭವನಿತ್ತ ವರದ ಬಲುಮೆಯಿಂದ
ವಸುಧೆ ಕಂಟಕನಾದ ಅಸುರ ಹಿರಣ್ಯಕನ
ಬಸುರ ನಖದಲಿ ಬಗೆದು ಸವರಿದ
ಅಸುರರಿಪು ಶ್ರೀಕರಿಗಿರೀಶನ
ದಶಶಿರಾಂತಕ ದಶರಥಾತ್ಮಜ
ಅಸಮ ಮಹಿಮನ ಅಪ್ರಮೇಯನ ೧

## ೩೬೯**

ರಘುವೀರನ ಕಂಡನು ಕಪಿವೀರ ಕಲಿಕಲ್ಮಷದೂರ ಪ

ಅಘವರ್ಜಿತ ಪನ್ನಗಶಯನನೆಂದು
ಬಗೆದು ಮನದಿ ಕರಮುಗಿದನು ದೂರದಿ ಅ.ಪ.

ಶಿರಭಾಗದಿ ಮೆರೆವ ಜಟಾಮಕುಟ । ಚಿಕುರಾಳಿಯಿಂದ
ಪರಿಶೋಭಿಪ ಸುಂದರ ಲಲಾಟ । ಕಮಲಾಕ್ಷಗಳಲಿ

---

* ಭೀಷ್ಮರು ಶಿಶುಪಾಲನಿಗೆ ವಿವರಿಸಿದ ಶ್ರೀಕೃಷ್ಣನ ಹಿರಿಮೆ
** ಹನುಮಂತ ಶ್ರೀರಾಮನನ್ನು ಕಂಡ ಸಂದರ್ಭ

ಕರುಣಾರಸಭರಿತ ಶುಭನೋಟ । ನಾಸಿಕ ಬಲು ಮಾಟ
ಸ್ಮರಲಾವಣ್ಯ ಧಿಕ್ಕರಿಸುವ ಸುಂದರ
ನರರೂಪಾನ್ವಿತ ಶರಧಿ ಗಂಭೀರನ ೧

ಆಜಾನುಬಾಹುಗಳತಿ ಪ್ರಶಸ್ತ । ಸುರಚಾಪದಂತೆ
ರಾಜಿಪ ಧನುವ ಧರಿಸಿದ ಹಸ್ತ । ವಿಶಾಲ ವಕ್ಷಕೆ
ಈ ಜಗದೊಳಗುಪಮೇಯದೆತ್ತ । ದೋಷನಿರಸ್ತ
ಮೂಜಗದೊಳಗತಿ ಸೋಜಿಗನೆನಿಪ ಸು
ತೇಜದಿ ರಾಜಿಪ ರಾಜಕುಮಾರನ ೨

ಸುಂದರ ತ್ರಿವಳಿಗೊಪ್ಪುವ ಉದರ । ನೆರೆ ಗಂಭೀರ
ಚಂದದಿ ಶೋಭಿಪ ನಾಭಿಕುಹರ । ಚೀರಾಂಬರಧರ
ಬಂಧುರ ಕಟಿತಟ ಬಲು ರುಚಿರ । ನೋಳ್ಪರ ಚಿತ್ತಹರ
ಕುಂದಿಲ್ಲದ ಪದದ್ವಂದ್ವ ಸುಶೋಭಿತ
ಸುಂದರಾಂಗ ಶ್ರೀ ಕರಿಗಿರೀಶನ ೩

## ೩೭೦

ರಾಮ ರಮಾರಮ ರಾಮ ಶ್ರೀರಾಮ ಪ

ರಾಮ ಸೀತಾರಾಮ ರಾಮ ಜಯರಾಮ ಅ.ಪ.

ಶ್ರೀ ರಘುವಂಶ ಲಲಾಮನೆ ರಾಮ
ತಾರಕ ಮಂಗಳ ರಾಮನೆ ರಾಮ
ನೀರದ ನಿರ್ಮಲ ಶ್ಯಾಮನೆ ರಾಮ
ಸಾರಸಲೋಚನ ಸೌಮ್ಯನೆ ರಾಮ ೧

ಕೌಸಲ್ಯದೇವಿ ಕುಮಾರಕ ರಾಮ
ಕೋಸಲ ದೇಶಾನಂದಕ ರಾಮ
ಆಸುರೀ ತಾಟಕ ಶಿಕ್ಷಕ ರಾಮ
ಕೌಶಿಕ ಯಜ್ಞ ಸಂರಕ್ಷಕ ರಾಮ ೨

ಮುನಿಪತಿ ಶಾಪ ವಿಮೋಚಕ ರಾಮ
ಅನಲಾಕ್ಷ ಕಾರ್ಮುಕ ಭಂಜಕ ರಾಮ
ಜನಕ ಸುತಾನಂದ ವರ್ಧಕ ರಾಮ
ಅನುಪಮ ಲೀಲಾದ್ಯೋತಕ ರಾಮ ೩

ಸತ್ಯಪರಾಕ್ರಮ ಸಾತ್ವಿಕ ರಾಮ
ಪಿತೃವಾಕ್ಯ ಪರಿಪಾಲಕ ರಾಮ
ಉತ್ತಮ ಚರಿತಾದರ್ಶಕ ರಾಮ
ಚಿತ್ರಕೂಟಾದ್ರಿ ನಿವಾಸಕ ರಾಮ ೪

ಕಾಕುತ್ಥವಂಶ ಸುಧಾರಕ ರಾಮ
ಲೋಕೇಶ ಲೋಕ ಮನೋಹರ ರಾಮ
ಶ್ರೀಕರಾಶ್ರಿತ ಜನ ಮಂದಾರ ರಾಮ
ಶ್ರೀ ಕರಿಗಿರೀಶ ಸುಂದರ ರಾಮ ೫

## ೩೭೧*

ಲಾಲಿಸಿ ರಘುವರನ ಚರಿತೆಯ ಸಾರ
ಪೇಳುವೆ ಸುಖನಾಥನ ಪ

ಶ್ರೀ ಲಲಾಮನು ಸುರರ ಮೊರೆಯನು
ಕೇಳಿ ಧರಣಿಯ ಭಾರ ಹರಿಸಲು
ಲೀಲೆಯಲು ದಶರಥ ನೃಪಾಲನ
ಬಾಲನೆನಿಸುತ ಅವತರಿಸಿದನು ಅ.ಪ.

---

* ರಾಮಾಯಣ ಕಥಾ ಸಾರ

ಕುಶಿಸುತನ ಯಜ್ಞವ ರಕ್ಷಿಸಿ ಪಥದಿ
ಋಷಿ ಪತ್ನಿಯ ಶಿಲಾರೂಪವ ಬಿಡಿಸಿದ ದೇವ
ಪಶುಪತಿಯ ಕೋದಂಡ ಖಂಡಿಸಿ
ಶಶಿವದನೆ ಜಾನಕಿಯ ಕರವನು
ಕುಶಲದಲಿ ಪರಿಗ್ರಹಿಸಿ ಲೀಲೆಯ
ನಸಮ ಭಾರ್ಗವನೊಡನೆ ತೋರಿದ ೧

ತಂದೆ ವಾಕ್ಯವ ಪಾಲಿಸೆ ತಾ ಧರಣಿಗೆ
ಬಂದ ಕಾರ್ಯವ ಸಲ್ಲಿಸೆ ಋಷಿಗಳಾಸೆ
ತಂದು ತಾ ಮನಕಂಡು ವನಕೆ
ಬಂದು ಸತಿ ಸೋದರರ ಸಹಿತದಿ
ಮುಂದೆ ಗಂಗೆಯ ದಾಟಿ ಭರದ್ವಾಜ
ನಿಂದ ಸತ್ಕಾರವನು ಕೊಂಡನು ೨

ಚಿತ್ರಕೂಟದಲಿರಲು ವಿನಯದಿ ಬಂದು
ಭಕ್ತ ಭರತನು ಬೇಡಲು ಪಾದುಕೆಯಿತು
ಮತ್ತೆ ದಂಡಕವನ ಪ್ರವೇಶಿಸಿ
ದೈತ್ಯರನು ಸಂಹರಿಸಿ ಶರಭಂಗ
ಗಿತ್ತು ಮುಕ್ತಿಯ ಕುಂಭಸಂಭವ
ನಿತ್ತ ದಿವ್ಯಾಸ್ತ್ರಗಳ ಪಡೆದನು ೩

ವರಪಂಚವಟಿಯೊಳಗೆ ಶೂರ್ಪನಖಿಯು
ದುರುಳ ಬುದ್ಧಿಯೊಳು ಬರೆ ಕಿವಿಮೂಗ ಕೊಯ್ಸಿ
ಹರಿಣರೂಪದಿ ಬಂದ ದೈತ್ಯನ
ಹರಣಗೈದಾಶ್ರಮಕೆ ತಿರುಗಲು ।
ಧರಣಿಸುತೆಯನು ಕಾಣದೆಲೆ ತಾ
ನರರ ಪರಿಯಲಿ ಹಂಬಲಿಸಿದನು ೪

ವನಜಾಕ್ಷಿ ವೈದೇಹಿಯ ಪುಡುಕುತ ಪಂಪಾ
ಸನಿಹಕ್ಕೈತಂದು ವಾಲಿಯ ಸಂಹರಿಸ್ಯವನ

ಅನುಜ ಸುಗ್ರೀವನಿಗೆ ಹರುಷದಿ
ವಿನುತ ವಾನರ ರಾಜ್ಯದೊಡೆತನ
ವನು ಕರುಣಿಸಿದ ಬಳಿಕ ಜಾನಕಿ
ಯನು ಹುಡುಕೆ ಕಳುಹಿದನು ಕಪಿಗಳ ೫

ಸ್ವಾಮಿಯ ಸ್ತುತಿಗೈಯುತ ಶ್ರೀ ಹನುಮಂತ
ಆ ಮಹೋದದಿಯ ದಾಟುತ ಲಂಕೆಯ ಪೊಕ್ಕು
ಭೂಮಿಜಾತೆಯ ಕಂಡು ರಾಮನ
ಕ್ಷೇಮ ವಾರ್ತೆಯ ತಿಳುಹಿ ಬಹುಜನ
ತಾಮಸರ ಸದೆಬಡಿದು ರಾವಣ
ನಾ ಮಹಾ ನಗರಿಯನು ದಹಿಸಿದ ೬

ಮರಳಿ ರಾಮನ ಬಳಿಗೆ ಬೇಗದಿ ಬಂದು
ಮರುತ ಸುತನು ರಾಮಗೆ ಸೀತೆಯ ಕ್ಷೇಮ
ವರುಹಿ ಚೂಡಾಮಣಿಯ ನೀಡಲು
ಕರದಿ ಕೈಕೊಂಡದನು ನೋಡುತ
ನರರ ಪರಿಯಲಿ ಹರುಷಬಾಷ್ಪವ
ಸುರಿಸಿದನು ಶ್ರೀ ಕರಿಗಿರೀಶನು ೭

## ೩೭೨*

ಸಾರಸ ನಯನ ಶ್ರೀರಾಮಚಂದ್ರನ ಚರಿತೆ
ಸಾರ ಪೇಳುವೆ ಕೇಳಿ ಸಾರ ಹೃದಯ ಶ್ರೀ ಪ

ಸಾರಸ ಭವ ಮುಖರರ ಮೊರೆಯ ಕೇಳಿ
ಧಾರುಣಿಯೊಳಗವತಾರ ಮಾಡಿದನಮ್ಮಾ ಅ.ಪ.

---

* ಸಂಕ್ಷಿಪ್ತ ರಾಮಾಯಣ

ದಶರಥ ಸುತನೆನಿಸಿ ವಸುಧೆಯೊಳವತರಿಸಿ
ಕುಶಿಕಸುತನ ಯಜ್ಞವ ನೆರೆಪಾಲಿಸಿ
ಅಶಮವಾಗಿದ್ದ ಅಹಲ್ಯೆಯ ಶಾಪ ಪರಿಹರಿಸಿ
ವಸುಧೀಶ ಜನಕನಾಸ್ಥಾನ ಪ್ರವೇಶಿಸಿ
ಪಶುಪತಿಯ ಕೋದಂಡ ಖಂಡಿಸಿ
ಶಶಿವದನೆ ಜಾನಕಿಯನೊಲಿಸಿ
ಅಸಮ ಭಾರ್ಗವನೊಡನೆ ಸರಸವ
ನೆಸಗಿ ಜಗದೊಳು ಲೀಲೆ ತೋರಿದ ೧

ಜನಕನಾಜ್ಞೆಯ ತಾಳಿ ಜನಕ ಸುತೆಯ ಸಹಿತ
ಅನುಜನೊಡನೆ ಹೊರಟು ವನವಾಸಕೆ
ಘನಭಕ್ತಿ ಭರಿತ ಶ್ರೀ ಭರತಗೆ ಪಾದುಕೆ
ನೀನು ಕರುಣಿಸಿ ಮುಂದೆ ವನದಂಡಕವ ಪೊಕ್ಕು
ಅನುಜ ದುರುಳ ವಿರಾಧಮುಖರನು
ಹನನಗೈದಾ ಬಳಿಕ ಶರಭಂಗ
ಮುನಿಗೆ ಸದ್ಗತಿಯಿತ್ತಗಸ್ತ್ಯನ
ವಿನುತ ಅಸ್ತ್ರಗಳನು ಪಡೆದನಾ ೨

ಪಂಚವಟಿಯೊಳಗೆ ಸಂಚುಗೈಯುತ ಬಂದ
ಕಾಂಚನಮೃಗವನು ಪಂಚಕಗೊಳಿಸಿ
ಕುಂಚಿತ ಮತಿಯ ದ್ವಿಪಂಚಶಿರನು ಬರಲು
ವಂಚನೆಯಿಂದಪರಿಹರಿಸಲು ಸೀತೆಯ
ಸಂಚುಕಾಣದೆ ವನವನದೊಳು
ಸಂಚರಿಸುತಲಿ ಶೋಕ ತೋರುತ
ಪಂಚಶರಹತನಂತೆ ಬಳಲುತ
ಪಂಚಶರ ಪಿತ ಬಂದ ಪಂಪೆಗೆ ೩

ಮಾರುತಸುತನ ವಿನಯಭರಿತ ವಾಕ್ಯಕೆ ಮೆಚ್ಚಿ
ತರಣಿಸುತನ ಕೂಡೆ ಸಖ್ಯವ ಬೆಳೆಸಿ
ದುರಿತವಗ್ಗೈದ ವಾಲಿಯ ನಿಗ್ರಹಿಸಿ ಕಪಿ
ವರ ಸುಗ್ರೀವಗೆ ರಾಜ್ಯಕರುಣಿಸಿದಾ ಬಳಿಕ
ಪರಮ ವಜ್ರಶರೀರಿ ಪವನಜ
ಶರಧಿಯ ಲಂಘಿಸಿ ಧರಣಿತನಯಳಿ
ಗರುಹಿ ಕುಶಲವ ಮುದ್ರಿಕೆಯನಿತ್ತು
ಉರುಹಿ ಲಂಕೆಯ ಬರಲು ಒಲಿದನು ೪

ಭಕ್ತ ವಿಭೀಷಣನಿಗೆ ಇತ್ತು ಅಭಯವನು
ಮೊತ್ತವಾನರ ಸಹಿತ ಶರಧಿ ಬಂಧಿಸಿ ದಾಟಿ
ಹತ್ತು ತಲೆಯವನ ಪುರವ ಪ್ರವೇಶಿಸಿ
ದೈತ್ಯಶೂರರನ್ನೆಲ್ಲ ಮೃತ್ಯು ವಶವ ಮಾಡಿ
ಮತ್ತೆ ಕುಂಭಕರ್ಣೇಂದ್ರಜಿತ್ ಮುಖ
ದೈತ್ಯರನು ಸಂಹರಿಸಿ ರಣದೊಳು
ಶತ್ರು ಭಯಂಕರನಾಗಿ ಮೆರೆದನು
ಸ್ತುತ್ಯ ಮಹಿಮ ಶ್ರೀ ಕರಿಗಿರೀಶನು ೫

## ೩೭೩*

ಸಾರಿದ ಸಿರಿವರ ಸಡಗರದಿಂದಲಿ ಕೌರವಪುರಕೆ ಪ

ಧೀರ ಪಾಂಡವರ ಕೋರಿಕೆ ಸಲ್ಲಿಸಲು
ಕಾರಣಾತ್ಮಕನು ಸಾರಸ ನಯನನು ಅ.ಪ.

ಪ್ರಾತರಾಹ್ನೀಕವ ತಾ ತೀರಿಸಿ ವರ ಪೀತ ವಸನ ಧರಿಸಿ
ವೀತರಾಗ ಸಂಪ್ರೀತಿಯಲಿ ಫಾಲದಿ ತಾ ತಿಲಕವ ಧರಿಸಿ

* ಕೃಷ್ಣ ಸಂಧಾನಕ್ಕಾಗಿ ಕೌರವನಲ್ಲಿಗೆ ಬಂದ ಸಂದರ್ಭ

ಖ್ಯಾತ ಮಣಿಮಯೋಪೇತ ಹೇಮ
ಮಕುಟೋತ್ತಮಾಂಗದಿ ಧರಿಸಿ
ಜ್ಯೋತಿರ್ಮಯಗತಿ ಪ್ರೀತಿಯಿಲಿ ತರುಣಿರಾ
ರುತಿ ಬೆಳಗಲು ತಾ ಸುಮುಹೂರ್ತದಿ ೧

ಅಂಡಜಾಧಿಪನು ಪ್ರಕಾಂಡ ಪೀಠನುದ್ದಂಡರಥವ ತರಿಸಿ
ಚಂಡಗದಾ ಕೋದಂಡಾದ್ಯಾಯುಧ ಬಂಡಿಗೆಯೊಳಗಿರಿಸಿ
ಮಂಡಿಸಿದನು ಬ್ರಹ್ಮಾಂಡದೊಡೆಯ
ಮಾರ್ತಾಂಡನಂತೆ ಮೆರೆಸಿ
ಹಿಂಡುಬಳಗಗಳ ಕಂಡಾದರಿಸುತ
ಪಾಂಡುಸುತರ ಬೀಳ್ಕೊಂಡು ಭರದಲಿ ೨

ಅಕಳಂಕನು ತಾ ಶಕುನವ ನೋಡಿ ಬಲು
ಸುಖದಿ ಪ್ರಯಾಣ ಬೆಳಸಿ
ಪ್ರಕಟ ಪಥದಿ ಮುನಿನಿಕರಂಗಳ ಮನವಿಕಸಿತಗೊಳಿಸಿ
ಶುಕಪಿಕಾದಿ ಖಗಪಿಕರಂಗಳರವ ಸುಖವ ಮನದಿ ನಿಲಿಸಿ
ಸಕಲಾಂತರ್ಗತ ಕರಿಗಿರೀಶ ತಾ ಯುಕುತಿಯಿಂದ
ಸಂಧಾನವ ನಡೆಸಲು ೩

## ೩೭೪*

ಹರಿಯೆ ನಿನ್ನಯ ಗುಣ ಸರಸಿಜ ಭವ ಮುಖ್ಯ
ಸುರಗಣ ಮುನಿನಿಕರ ಸಿದ್ಧ ಪರಿವಾರವು ೧

ಸರಿತು ಪ್ರವಾಹದಂತೆ ವಾಗ್ವೈಖರಿಯಿಂದ
ನಿರುತ ತೃಪ್ತಿಪಡಿಸಲಾರರು ಇನ್ನು ೨

ಉರು ಉಗ್ರಜಾತಿ ಅಸುರ ಕುಲದಿ ಪುಟ್ಟಿದ ನಾನು
ನೆರೆ ತುತಿಸಿ ತೃಪ್ತಿಪಡಿಸಲಾಪೆನೆ ನಿನ್ನ ೩

---

* ಪ್ರಹ್ಲಾದನು ನರಹರಿಯನ್ನು ಸ್ತುತಿಸಿದ್ದು

ಆದೊಡೆ ಕುಲ ರೂಪ ವಯಸ್ಸು ವಿದ್ಯೆಗೆ ನೀನು
ಮೋದಪಡುವನಲ್ಲ ಭಕ್ತಿಯೊಂದಕೆ ನಲಿವೆ ೪

ಕರಿರಾಜನೇ ಸಾಕ್ಷಿ ಕರುಣಾಮಯನೇ ನಿನ
ಗಿರುವುದೇ ವೈಷಮ್ಯ ? ಭಕ್ತಗೆ ವಶ ನೀನು ೫

ಅರವಿಂದನಾಭ ನಿನ್ನ ಚರಣಾರವಿಂದವನು
ನಿರುತ ಭಜಿಸುವ ಉತ್ತಮನೆನಿಸುವ ೬

ಸರುವ ಸ್ವತಂತ್ರ ಪೂರ್ಣಕಾಮ ನಿನ್ನನು ನಾವು
ಹಿರಿದಾಗಿ ಆರಾಧಿಸಿ ತೃಪ್ತಿಪಡಿಸುವುದೇನೊ ೭

ನಾವು ಮಾಡುವ ಕರ್ಮಸಾಧನದಿಂದ ನಿನಗೆ
ಯಾವ ಫಲವೂ ಇಲ್ಲ ! ಫಲವೆಲ್ಲ ನಮಗಯ್ಯಾ ೮

ಬಿಂಬವನಲಂಕರಿಸೆ ಕನ್ನಡಿಯೊಳಗೆ ಪ್ರತಿ
ಬಿಂಬಕೆ ಅಲಂಕಾರ ಕಾಣುವ ಪರಿಯಲಿ ೯

ಕರುಣಾಸಾಗರ ನಮ್ಮ ಕರಿಗಿರೀಶನೆ ಸ್ವಾಮಿ
ತರಳನ ಮೊರೆಯನು ಲಾಲಿಸಿ ಪಾಲಿಸೊ ೧೦

ನಮ್ಮ ಸಾಧನೆಗಾಗಿ ನಿನ್ನ ಆರಾಧಿಪೆವು
ಬೊಮ್ಮನಯ್ಯನೆ ನಿನ್ನ ಅನುಗ್ರಹದಿಂದಲಿ ೧೧

ಬ್ರಹ್ಮಾದಿ ಸುರರೆಲ್ಲ ನಿನ್ನ ಸೇವಕರಯ್ಯಾ
ಹಮ್ಮು ಮತ್ಯಾತಕಯ್ಯಾ ನಮ್ಮಂಥವರಿಗೆಲ್ಲ ೧೨

ನಿನ್ನ ಕೋಪಕೆ ಅಂಜಿ ನಡುಗದವರುಂಟೆ
ಮನ್ನಿಸಿ ಕೋಪವ ಉಪಶಮ ಮಾಡೋ ಸ್ವಾಮಿ ೧೩

ನಿನ್ನ ಈ ಉಗ್ರರೂಪ ಧ್ಯಾನವು ಜನರಿಗೆ
ಘನ ಭಯವ ಕಳೆಯೆ ಸಾಧನವಾಗಲಿ ೧೪

ದಿಗಿಲು ಪುಟ್ಟಿಸುವಂಥ ಈ ನಿನ್ನ ಮುಖ ಜಿಹ್ವೆ
ಮಿಗೆ ಜ್ವಲಿಸುವ ನೇತ್ರ ಭೃಕುಟಿ ಕರಾಳ ದಂಷ್ಟ್ರ ೧೫

ಕೊರಳಲ್ಲಿ ಧರಿಸಿಹ ಕರುಳ ಮಾಲಿಕೆ ರಕ್ತ
ಬೆರದ ಕೇಸರ ಮತ್ತೆ ನಿಗುರಿದ ಕರ್ಣಗಳು ೧೬

ಲೋಕ ಭಯಂಕರವಾಗಿವೆ ಆಂದೊಡೆ
ಶ್ರೀಕರ ನಿನ್ನ ಕೃಪೆಯಲಿ ನಾನವಕೆ ೧೭

ಅಂಜುವನಲ್ಲ ಕೇಳು ಕಂಜನಾಭನೆಯಿನ್ನು
ಅಂಜುವೆನೊಂದಕೆ ಸಂಸಾರ ಚಕ್ರಕೆ ೧೮

ತೊಳಲಿಸುವುದು ಜನ ದುಃಖದಿ ಸಂಸಾರ
ಬಲು ಪರಿಯಲಿ ಅದು ದುಃಖದಿ ಸಾಗರ ೧೯

ಇಷ್ಟವಾದದ್ದು ಕೊಡದೆ ಇಷ್ಟವಿಲ್ಲದ್ದುಣಿಸಿ
ಕಷ್ಟವಪಡಿಸುವುದು ಭ್ರಷ್ಟವಾದೀ ಭವ ೨೦

ಸಂಸಾರ ಸಾಗರ ದಾಟಿಸೋ ಮಹಾಮಹಿಮ
ಸಂಶಯವಿಲ್ಲದೆ ಸೇರಿಸೋ ನಿನ್ನ ಬಳಿ ೨೧

ಕರುಣಾಸಾಗರ ನಮ್ಮ ಕರಿಗಿರೀಶನೆ ಸ್ವಾಮಿ
ತರಳನ ಮೊರೆಯನು ಲಾಲಿಸಿ ಪಾಲಿಸೊ ೨೨
( ಪ್ರಹ್ಲಾದ ನರಹರಿಯನ್ನು ಸ್ತುತಿಸಿದ್ದು )

ಅನಿಲಜ – ವಾಯುಪುತ್ರನಾದ ಹನುಮಂತ
ಅನುರೂಪ – ಅನುಗುಣವಾದ
ಅನೃತ – ಸುಳ್ಳು
ಅನ್ಯಥಾಜ್ಞಾನಿ – ಹರಿಪಾರಮ್ಯವನ್ನು ಒಪ್ಪಿಕೊಳ್ಳದ ವಿಪರೀತ ಮತಿ
ಅಪವರ್ಗ – ಮೋಕ್ಷ
ಅಪಸ್ಮಾರ – ಮೂರ್ಛೆರೋಗ
ಅಪ್ರಮೇಯ – ಅಳತೆಗೆ ಸಿಗದವನು
ಅಪ್ರಾಕೃತ – ಜ್ಞಾನಿ
ಅಮರತರಂಗಿಣಿ–ದೇವನದಿಯಾದ ಗಂಗೆ
ಅಮರತರಂಗಿಣಿ ಪಿತ – ಶ್ರೀಹರಿ
ಅಮಿತಮತಿ – ಮಿತಿಯಿಲ್ಲದ ಜ್ಞಾನವುಳ್ಳ ಶ್ರೀಹರಿ, ಪೂರ್ಣಪ್ರಜ್ಞರಾದ ಮಧ್ವಾಚಾರ್ಯರು
ಅಮುಕುತ – ಅಮುಕ್ತ
ಅಮೃತಾಂಶು – ಚಂದ್ರ
ಅಮೃತರೂಪ – ಚಿರಂಜೀವಿ
ಅರುಣಾಂಭೋರುಹ – ಕೆಂದಾವರೆ
ಅಲವಬೋಧ – ಮಧ್ವಾಚಾರ್ಯ
ಅವಗಾಹ್ಯ – ಚನ್ನಾಗಿ ತಿಳಿಯುವುದು
ಅವಲಿ – ಅವಲಕ್ಕಿ
ಅವಶ – ವಶವಿಲ್ಲದ, ಸ್ವತಂತ್ರ
ಅವಸರ – ಕಾರ್ಯ
ಅವ್ಯಯ – ನಾಶರಹಿತನಾದವನು
ಅಶನ – ಆಹಾರ
ಅಸಮಾಕ್ಷಚಾಪ– ಶಿವಧನಸ್ಸು
ಅಸಿ – ಕತ್ತಿ
ಅಸು – ಪ್ರಾಣ
ಅಸುನಾಥ – ವಾಯುದೇವರು
ಅಸುನಾಥಸುತ – ಹನುಮಂತ
ಅಳಿ – ದುಂಬಿ
ಆಂಧೋಳಿಕ – ಪಲ್ಲಕ್ಕಿ
ಆಕಾಶಾಭಿಮಾನಿ–ಗಣೇಶ
ಆಖು – ಇಲಿ
ಆಜ್ಯ – ತುಪ್ಪ
ಆತುಮ – ಆತ್ಮ
ಆದಿಮೂಲ – ಎಲ್ಲರಿಗೂ ಮೊದಲಿಗನ
ಆನತರು – ಆಪತ್ತಿಗೆ ಗುರಿಯಾದ
ಆಯ – ಆಯತ, ಉಚಿತವಾದ ರೀತಿ
ಆರುಮಹಿಷಿಯರು –ಕೃಷ್ಣನ ಆರುಮಂದಿ ರಾಣಿಯರು ಜಾಂಬವತಿ, ಕಾಳಿಂದಿ, ಭದ್ರಾ, ನೀಲಾ, ಮಿತ್ರವಿಂದಾ, ಲಕ್ಷಣಾ
ಆರೆ – ಚಕ್ರ
ಆಸುರೀಭಾವ – ರಾಕ್ಷಸ ಪ್ರವೃತ್ತಿ
ಇಂಗಡಲು – ಸಮುದ್ರ
ಇಂಗಡಲುಸುತೆ– ಲಕ್ಷ್ಮೀದೇವಿ
ಇಂಗಿತಜ್ಞ – ಬೇರೆಯವರ ಮನಸ್ಸಿನ ಆಶಯಗಳನ್ನು ಅರಿತವನು.
ಇಂಬಿಡು – ಆಶ್ರಯಕೊಡು
ಇಂಬು – ಆಶ್ರಯ

ಇಕ್ಷು - ಕಬ್ಬು
ಇಕ್ಷುಚಾಪ - ಮನ್ಮಥ
ಇನಸುತ - ಸುಗ್ರೀವ
ಈತಿಬಾಧೆ - ರೋಗಬಾಧೆ
ಈರೇಳುಧರೆ - ಹದಿನಾಲ್ಕು ಲೋಕ
ಉತ್ತುಂಗ - ಎತ್ತರವಾದ, ಶ್ರೇಷ್ಠ
ಉದಧಿ - ಸಮುದ್ರ
ಉನ್ಮೂಲ - ಬುಡಸಹಿತ ಕೀಳುವುದು
ಉಪೇಕ್ಷಿಸು - ನಿರ್ಲಕ್ಷಿಸು
ಉಬ್ಬಸ - ಸಂಕಟ
ಉರ - ಎದೆ
ಉರಗ - ಸರ್ಪ
ಉರಗಶಿಖರ - ಸರ್ಪಗಿರಿ, ತಿರುಮಲೆ
ಉರ್ವಿಕರು - ಭೂಮಿಯ ಮೇಲಿನ ಜನ
ಉರ್ವೀಶ - ರಾಜ
ಊಚುನೀಚ - ಊಂಚನೀಚ, ಮೇಲಿಂದ ಕೆಳಗಿನವರೆಗೆ
ಋಜುಮನ - ಸ್ಥಿರವಾದ ಮನಸ್ಸು
ಎತ್ತನಿಸು - ಯತ್ನಿಸು
ಎರವಾಗು - ದೂರವಾಗು
ಎರಡೊಂದು ನೇತ್ರ- ಮುಕ್ಕಣ್ಣ, ಶಿವ
ಎಲರುಣಿ - ಸರ್ಪ
ಎಲರುಣಿ ಪರ್ವತ- ಶೇಷಾದ್ರಿ, ತಿರುಮಲೆ
ಎಳೆಗಂದಿ - ಎಳೆಯಕರು

ಏಕಭಕ್ತಿ - ಹರಿಸರ್ವೋತ್ತಮನೆಂಬ ಏಕೋಪಾಸನೆಯ ಭಕ್ತಿ
ಏಣಾಂಕ - ಚಂದ್ರ
ಒರ್ಕುಡಿತೆ - ಒಂದು ಬೊಗಸೆ
ಒಪ್ಪಿಡಿ - ಒಂದು ಹಿಡಿ
ಓಜ - ಗುರು
ಓಲೆಗಾರ - ಅಂಚೆಯ ಆಳು
ಕಂತು - ಮನ್ಮಥ
ಕಂತುವೈರಿ - ಶಿವ
ಕಂತುಹರ - ಶಿವ
ಕಂತುಹರಧನು - ಶಿವಧನಸ್ಸು
ಕಂಜನೇತ್ರ - ಕಮಲನೇತ್ರ, ವಿಷ್ಣು,
ಕಂದರ - ಕೊರಳು
ಕಂದುಕೊರಳ - ಶಿವ
ಕಾಂಚನ ನಯನ - ಹಿರಣ್ಯಾಕ್ಷ
ಕಿಂಕರ - ಸೇವಕ
ಕುಂಚಿತಮತಿ - ಕೀಳು ಮನಸ್ಸಿನವನು
ಕುಂಡಲ - ಸರ್ಪ
ಕುಂಡಲಗಿರಿ - ಸರ್ಪಗಿರಿ, ತಿರುಪತಿ
ಕುಂದಣ - ಬಂಗಾರ
ಕುಂದರ - ವಿಷ್ಣು
ಕುಂದು - ನ್ಯೂನತೆ
ಕುಂಭಜ - ಅಗಸ್ತ್ಯ
ಕುಂಭಸಂಭವ - ಅಗಸ್ತ್ಯ
ಕುಂಭಿನಿ - ಭೂಮಿ
ಕಟಾಕ್ಷ - ದೃಷ್ಟಿ
ಕಟಿ - ಸೊಂಟ
ಕಣೆ - ಬಾಣ

ಕಥ – ಕಾರಣ
ಕದಿರು – ಕಿರಣ
ಕದ್ರುಜ – ಸರ್ಪ
ಕದ್ರುಜಧಾರಿ – ಶಿವ
ಕಪಟ – ಸುಳ್ಳು, ಮೋಸ
ಕಪ್ಪ – ರಾಜರಿಗೆ ಕೊಡಬೇಕಾದ ತೆರಿಗೆ
ಕಪಾಲ – ತಲೆಬುರುಡೆ
ಕಮಠ – ಆಮೆ
ಕಮನೀಯ – ಮನೋಹರ
ಕಮಲಜಾಂಡ – ಬ್ರಹ್ಮಾಂಡ
ಕಮಲಮಾರ್ಗಣ – ಮನ್ಮಥ
ಕಮಲಮಾರ್ಗಣ ಪಿತ – ಶ್ರೀಹರಿ
ಕಮಲಸಖ – ಸೂರ್ಯ
ಕಮಲಾಲಯೆ – ಲಕ್ಷ್ಮೀದೇವಿ
ಕರಜ – ಶಿಷ್ಯ
ಕರುಣಾಪಾಂಗ – ಕರುಣಾದೃಷ್ಟಿ
ಕಲಾಪ – ಗುಂಪು, ಸಮೂಹ
ಕಲಿಮಲ – ಕಲಿಯುಗದ ನಿಮಿತ ಬಂದ ಪಾಪವೆಂಬ ಕಶ್ಮಲ
ಕಲುಶನಾಶಿನಿ – ಪಾಪನಾಶಿನಿ
ಕಲ್ಮಶದೂರ – ದೋಷದೂರ
ಕವಲುಮತಿ – ಭಿನ್ನಮನಸ್ಸು
ಕವಿ – ಶುಕ್ರಗ್ರಹ, ವಿದ್ವಾಂಸ, ಪಿತೃ, ಕೃಷ್ಣ ವಿಷಯವಾದ ಕಾವ್ಯ ಬರೆದವನು, ದೈತ್ಯರ ಗುರು
ಕಳತ್ರ – ಪತ್ನಿ
ಕಾಕುಜನ – ಕೆಟ್ಟಜನ
ಕಾಕುತ್ಸ್ಥ – ಕಕುತ್ಸ್ಥವಂಶದಲ್ಲಿ ಜನಿಸಿದ ಶ್ರೀರಾಮ
ಕಾಕೋದರ – ಸರ್ಪ
ಕಾಕೋದರ ಗಿರಿ– ಸರ್ಪಗಿರಿ, ತಿರುಪತಿ
ಕಾಕೋದರ ಗಿರಿವಾಸ – ಶ್ರೀನಿವಾಸ
ಕಾಟಿ – ಜೋಳದ ಅಥವಾ ರಾಗಿಯ ಗಂಜಿ ಅನ್ನ, ಅಂಬಲಿ
ಕಾಮದ – ಬಯಸಿದ್ದನ್ನು ನೀಡುವವನು
ಕಾರಣಾತ್ಮಕ – ಸೃಷ್ಟಿ, ಸ್ಥಿತಿ, ಲಯಗಳಿಗೆ ಕಾರಣನಾದವನು
ಕಾಸಾರ – ಕೊಳ
ಕಾಸುವೀಸ – ಅಲ್ಪವಾದ ಹಣ
ಕಾಸ್ತಾರ – ಕುದುರೆ ಸವಾರ
ಕಿತವ – ಸುಳ್ಳುಗಾರ
ಕಿರಾತ – ಬೇಡ
ಕಿರೀಟಿ – ಅರ್ಜುನ
ಕಿರೀಟಿಸಖ – ಕೃಷ್ಣ
ಕೀಚಕಾರಿ – ಭೀಮ
ಕುಕ್ಷಿ – ಹೊಟ್ಟೆ
ಕುಕ್ಷಿಭರಣ – ಉದರ ಪೋಷಣೆ
ಕುಜ – ವೃಕ್ಷ, ಕೆಟ್ಟಬುದ್ಧಿ
ಕುತುಬಕಾಲ – ಮಧ್ಯಾಹ್ನ
ಕುತ್ಸಿತ ಜನ – ದೂಷಕರು, ನಿಂದಕರು
ಕುಪಥ – ಕೆಟ್ಟದಾರಿ

ಕೃಪಣ – ದೀನ
ಕುರುಡನಣುಗ – ದುರ್ಯೋಧನ
ಕುಶಿಕಸುತ – ವಿಶ್ವಾಮಿತ್ರ
ಕುಸುಮಪೀಠ – ಬ್ರಹ್ಮ
ಕೃತಾಂತ – ಯಮ
ಕೃಪಣ ವತ್ಸಲೆ – ಬಡವರಲ್ಲಿ ವಾತ್ಸಲ್ಯವುಳ್ಳವಳು
ಕೈವಲ್ಯ – ಮೋಕ್ಷ
ಕೊಂಡೆಯ – ಚಾಡಿಮಾತು
ಕೊರಮ –ಕೊರಚ ಎಂಬ ಜಾತಿ, ಕೋತಿ ಆಡಿಸುವ, ಕಣಿ ಹೇಳುವ ಜನ
ಕೊಳ್ಳ – ಕೊಳ್ಳೆ ಹೊಡೆಯುವವನು
ಕೋವಿದ – ವಿದ್ವಾಂಸ
ಕೋಕನ – ಕೆಂದಾವರೆ
ಕೌಶಿಕ – ವಿಶ್ವಾಮಿತ್ರ
ಕೌಸ್ತುಭ – ವಿಷ್ಣು ಧರಿಸುವ ಒಂದು ರತ್ನ
ಕ್ರೋಢ – ವರಾಹ
ಕ್ರೋಢಾಲಯ – ವರಾಹಕ್ಷೇತ್ರ
ಕ್ಲೇಶ – ಕಷ್ಟ
ಕ್ವಚಿತು – ಸ್ವಲ್ಪ
ಕ್ಷೋಣಿ – ಭೂಮಿ
ಕ್ಷೋಣಿಪಾಲ – ರಾಜ
ಖಂಡಪರಶು – ಶಿವ
ಖಗಪತಿ – ಪಕ್ಷಿರಾಜ
ಖಟ್ವಾಂಗ – ತಲೆಬುರುಡೆಯ ತುದಿಯನ್ನುಳ್ಳ ಶಿವನ ಗದೆ
ಖತಿ – ಕೋಪ
ಖರೆ – ಸತ್ಯ
ಖಾತಿ – ಖತಿ, ಕೋಪ
ಖಾದ್ರವೇಯ – ಖದ್ರುವಿನ ಮಗನಾದ ಸರ್ಪರಾಜ
ಖುಲ್ಲ – ನೀಚ
ಖೇಟ – ಪಕ್ಷಿ
ಖೇಟಕ – ಗುರಾಣಿ
ಖೇಟವಾಹನ – ಪಕ್ಷಿವಾಹನನಾದ ಶ್ರೀಹರಿ
ಖೇದ – ದುಃಖ
ಖೋಡಿಗುಣ – ದುರುಳತನ, ಕೆಟ್ಟಬುದ್ಧಿ.
ಗಂಗಾಜನಕ – ವಿಷ್ಣು
ಗಂಧವಾಹ – ವಾಯು
ಗಗನಮಣಿ – ಸೂರ್ಯ
ಗತಿ – ದಾರಿ, ಮೋಕ್ಷ
ಗತಿದರ್ಶಕ –ಮಾರ್ಗದರ್ಶಕ
ಗತಿದಾಯಕ – ಮೋಕ್ಷದಾಯಕ
ಗರಳ – ವಿಷ
ಗರುವ – ಶ್ರೇಷ್ಠ
ಗಳ – ಕೊರಳು
ಗಾಡಿ – ಸುಂದರ
ಗಾಡಿಕಾರ – ಸೊಗಸುಗಾರ, ಚೆಲುವ
ಗಾತ್ರ – ಶರೀರ
ಗಾರು – ಹಿಂಸೆ
ಗೀರ್ವಾಣಮುನಿ–ನಾರದ
ಗುಣ – ತತ್ವ
ಗುಣಪೂರ್ಣ – ಜ್ಞಾನ ಆನಂದ ಗುಣಗಳಿಂದ ತೃಪ್ತನಾದವನು

ಗುಲ್ಮ - ಗಡ್ಡೆರೋಗ
ಗುಹಪಿತ - ಶಿವ
ಗುಹಪಿತಸಖ - ವಿಷ್ಣು
ಗೋಜು - ತೊಂದರೆ
ಗೌರಾಂಗ - ಹೊಂಬಣ್ಣದ ದೇಹಕಾಂತಿಯವನು
ಘಾಸಿ - ಕಷ್ಟ, ವಿಘ್ನ
ಚಂಡಿಕೆ - ಜುಟ್ಟು
ಚಂದ್ರಿಕಾಚಾರ್ಯರು–ವ್ಯಾಸರಾಜರು
ಚಾರುಮತಿ - ಹರಿಯ ಗುಣರೂಪಗಳ ಶ್ರೇಷ್ಠವಾದ ಜ್ಞಾನವುಳ್ಳ, ಲಕ್ಷ್ಮೀದೇವಿ
ಚಿಂತಾರತ್ನ - ಚಿಂತಾಮಣಿ
ಚಿಕುರ - ತಲೆಗೂದಲು
ಚಿತ್ಸುಖ - ಮನಃಶಾಂತಿ, ಆನಂದ
ಚಿರಾಂಬರ - ನಾರುವಸ್ತ್ರ
ಚೂತ - ಮಾವು
ಚೇರವಸನ - ನಾರುಬಟ್ಟೆ
ಚೇಲ - ವಸ್ತ್ರ
ಚೈದ್ಯರಾಜ - ಶಿಶುಪಾಲ
ಚೋದ್ಯ - ಆಶ್ಚರ್ಯ
ಚ್ಯುತ - ನಾಶ
ಚ್ಯುತರಹಿತಪ್ರೇಕ್ಷ–ಮಧ್ವಾಚಾರ್ಯರ ಗುರುಗಳಾದ ಅಚ್ಯುತ ಪ್ರೇಕ್ಷರು
ಜಂಘೆ - ತೊಡೆ
ಜಗದಸು - ಜಗತ್ಪ್ರಾಣ
ಜಡಜಭವ - ಬ್ರಹ್ಮ
ಜಡಜಮಿತ್ರಸೂನ - ಸೂರ್ಯನ ಪುತ್ರನಾದ ಶನಿದೇವರು
ಜಾಯೆ - ಪತ್ನಿ
ಜರೆಯಸುತ - ಜರಾಸಂಧ
ಜಿತ - ಗೆಲ್ಲಲ್ಪಟ್ಟ
ಜಿಷ್ಣು - ಇಂದ್ರ, ಅರ್ಜುನ
ಜಿಹ್ವೆ - ನಾಲಿಗೆ
ಡಿಂಗರಿಗ - ಸೇವಕ
ಡಿಂಬ - ಶರೀರ
ಡಾಣೆ - ದೊಣ್ಣೆ
ತಂದ್ರ - ಆಯಾಸ
ತುಂಗ - ಎತ್ತರ
ತುಂಗ ಕರ್ನಾಟನೃಪ–ಕೃಷ್ಣದೇವರಾಯ
ತುಂಬಿತ್ವ - ಪೂರ್ಣತ್ವ
ತುಂಬಿತ್ವಕ್ಕರಸ - ಪೂರ್ಣತೆಗೆ ಅರಸನಾದ ಶ್ರೀಹರಿ
ತತ್ಪುರುಷ - ಪರಮಾತ್ಮ, ಶಿವನ ಪಂಚಮುಖಗಳಲ್ಲಿ ಒಂದು
ತರಣ - ದಾಟುವಿಕೆ
ತರಣಿ - ಸೂರ್ಯ
ತರಣಿಕುಮಾರ - ಸೂರ್ಯಪುತ್ರನಾದ ಶನೇಶ್ವರ, ಸುಗ್ರೀವ, ಕರ್ಣ
ತರಣಿಮುಣಗ - ಸೂರ್ಯಾಸ್ತದವರೆಗೂ
ತರಣಿಸುತ - ಸುಗ್ರೀವ
ತಲ್ಪ - ಹಾಸಿಗೆ

ತಾಗುಬಾಗು – ತಗ್ಗಿಬಗ್ಗಿ ನಡೆ
ತಾರಕ – ರಕ್ಷಕ
ತಾರೊಡಲು – ಕೃಷ್ಣದೇಹ
ತಿಳಿಮತಿ – ನಿರ್ಮಲ ಮನಸ್ಸು
ತುತಿ – ಸ್ತುತಿ
ತುತಿಸು – ಸ್ತುತಿಸು
ತುತ್ತು ಮೂರಾಗಿಸು– ಕಬಳಿಸು, ನುಂಗು
ತುರಗಗ್ರೀವ – ಹಯವದನ ದೇವರು
ತುರು – ಹಸು
ತುರುಗಾಹೆ ಬೆಸನ – ದನಕಾಯುವ ಕೆಲಸ
ತುಷ್ಟ – ತೃಪ್ತ, ಆನಂದ
ತುಷ್ಟಿ – ತೃಪ್ತಿ, ಆನಂದ
ತುಷ್ಟಿಪೂರ್ಣ – ಪೂರ್ಣಾನಂದ
ತೃತೀಶರು – ದೇವತೆಗಳು
ತೆತ್ತೀಸ – ಮೂವತ್ಮೂರು
ತೊಂಡ – ಆಳು, ಸೇವಕ
ತೋಯಜ – ಕಮಲ
ತೋಯುಜಾಸನ–ಬ್ರಹ್ಮ
ತೋಯಜಾಸನಾಂಡ–ಬ್ರಹ್ಮಾಂಡ
ತ್ರ್ಯಧೀಶ – ತ್ರಿಲೋಕನಾಥ
ತ್ರಾಣ – ಶಕ್ತಿ
ತ್ರುಟಿ – ಕ್ಷಣಕಾಲ
ತ್ರಿಗುಣಕಾರ್ಯ – ಸೃಷ್ಟಿ ಸ್ಥಿತಿ ಸಂಹಾರ ಕಾರ್ಯ
ತ್ರಿಗುಣಧಾಮ – ಶ್ವೇತದ್ವೀಪ, ಅನಂತಾಸನ, ವೈಕುಂಠದಲ್ಲಿ ವಾಸಿಸುವವನು
ತ್ರಿಗುಣರಹಿತ – ಸತ್ವ ರಜ ತಮೋಗುಣ ರಹಿತ
ತ್ರಿದಶತರು – ದೇವವೃಕ್ಷ, ಕಲ್ಪವೃಕ್ಷ
ತ್ರಿದಶರು – ದೇವತೆಗಳು
ತ್ರಿವಳಿ – ಹೊಟ್ಟೆಯ ಮೇಲಿನ ಮೂರು ಗೆರೆಗಳು
ತ್ರಿವಿಧರೂಪ – ಬ್ರಹ್ಮ, ವಿಷ್ಣು, ಶಿವ
ದಂತಿ – ಆನೆ
ದಂತಿಪುರ – ಹಸ್ತಿನಾವತಿ
ದಂತಿವದನ – ಗಣಪತಿ
ದಂತಿವರದ – ಶ್ರೀಹರಿ
ದಡಿಗ – ಗಟ್ಟಿಗ, ದಾಂಡಿಗ
ದಣುವಿಕೆ – ಆಯಾಸ
ದಮ್ಮಡಿ – ಬಿಡಿಗಾಸು
ದರವಿ – ದರ್ವಿ, ಸೌಟು
ದರ್ವಿ – ಸೌಟು
ದಲ್ಲಣ – ನಾಶಮಾಡುವವನು
ದಶಮತಿ – ಪೂರ್ಣಪ್ರಜ್ಞ
ದಾವಾಗ್ನಿ – ಕಾಳ್ಗಿಚ್ಚು
ದುರಿತ – ಪಾಪ
ದುರ್ಭಾವ – ಗರಿಕೆ
ದೇವತರು – ಕಲ್ಪವೃಕ್ಷ
ದೇಶಿಕ – ಗುರು
ದ್ವಿಪಂಚಶಿರ – ದಶಮುಖನಾದ ರಾವಣ
ದ್ವಿಪವರ – ಗಜರಾಜ
ಧವಳ – ಬಿಳುಪಾದ
ಧಾವತೆ – ತವಕ, ಆಯಾಸ

ಧುರ – ರಣರಂಗ
ಧೇನುವತ್ಸ – ಎಳೆಗರು
ಧ್ವಾಂತ – ಕತ್ತಲು, ನರಕ
ನಕ್ರ – ಮೊಸಳೆ
ನಗ – ಪರ್ವತ
ನಗಧರ – ಪರ್ವತವನ್ನು ಧರಿಸಿದವನು, ಕೃಷ್ಣ
ನತಿಸು – ನಮಸ್ಕರಿಸು
ನರ – ಅರ್ಜುನ
ನರಸೂತ – ಅರ್ಜುನನ ಸಾರಥಿಯಾದ ಶ್ರೀಕೃಷ್ಣ
ನಳಿನಭವ – ಬ್ರಹ್ಮ
ನಳಿನಭವಾಂಡ – ಬ್ರಹ್ಮಾಂಡ
ನಾಕ – ಸ್ವರ್ಗ
ನಾಕನಿಲಯರು – ದೇವತೆಗಳು
ನಾಗ – ಸರ್ಪ, ಆನೆ
ನಾಗತಲ್ಪ – ಹಾವಿನ ಹಾಸಿಗೆ
ನಾಗೇಂದ್ರ – ಗಜರಾಜ, ಆದಿಶೇಷ
ನಾಟು – ನೆಡು
ನಾಲ್ಮೊಗ – ಬ್ರಹ್ಮ
ನಾಸ್ತಿಕ – ದೇವರು ಮತ್ತು ವೇದಗಳನ್ನು ನಂಬದ ನಿರೀಶ್ವರವಾದಿ
ನಿಖಿಲವ್ಯಾಪ್ತ – ಜಗತ್ತಿನ ಒಳಗೂ ಹೊರಗೂ ವ್ಯಾಪಿಸಿರುವವನು
ನಿಗಮ – ವೇದ
ನಿಟಿಲ – ಹಣೆ
ನಿಟಿಲಾಕ್ಷ – ಹಣೆಯಲ್ಲಿ ಕಣ್ಣುಳ್ಳವನು, ಶಿವ
ನಿತ್ಯಮುಕ್ತಳು – ಲಕ್ಷ್ಮೀದೇವಿ
ನಿತ್ಯರಲಿ ನಿತ್ಯ – ದೇವತೆಗಳ ಮನಸ್ಸಿನಲ್ಲಿ ನೆಲೆಸಿರುವ ಶ್ರೀಹರಿ
ನಿತ್ಯರು – ದೇವತೆಗಳು
ನಿತ್ಯವಸ್ತು – ಸನಾತನವಾದ, ನಾಶರರಹಿತವಾದ
ನಿತ್ಯಸುಖ – ಶಾಶ್ವತ ಸುಖ
ನಿರಯ – ನರಕ
ನಿರತಿಶಯ – ತನಗಿಂತ ಅತಿಶಯರಾದವರು ಇಲ್ಲದವನು
ನಿರ್ದೋಷ – ಅಜ್ಞಾನ ದುಃಖಾದಿ ದೋಷರಹಿತನಾದ ಶ್ರೀಹರಿ
ನಿರ್ಧೂಮ – ಸುಡುವುದು
ನಿರವಧಿಕ – ತನಗಿಂತ ಶ್ರೇಷ್ಠರಿಲ್ಲದವನು
ನಿರ್ವಾಹ – ಆದಾರ, ಆಶ್ರಯ
ನಿರುಪಾನಂದಾತ್ಮ – ಉಪಮೆಯಿಲ್ಲದ ಆನಂದಾತಿ ಸುಖಗಳನ್ನು ಅನುಭವಿಸುವವನು.
ನೀರದ – ಮೋಡ
ನೀರಧಿ – ಸಮುದ್ರ
ನೋಂತ – ವ್ರತಮಾಡಿ ಸಂಪಾದಿಸಿದ

ನ್ಯಾವಳ – ಒಂದು ಕಂಠಾಭರಣ, ಸರ
ಪಂಕ – ಕೆಸರು
ಪಂಡಿತ – ಬುಧಗ್ರಹ
ಪಂಚಶರ – ಮನ್ಮಥ
ಪಂಚಶರ ಪಿತ – ಶ್ರೀಹರಿ
ಪಂಚಾನನ – ಸಿಂಹ
ಪಕ್ಷಿದೇವ – ಶ್ರೀಹರಿ
ಪಕ್ಷಿಪತಿ – ಗರುಡ
ಪಕ್ಷಿಪತಿ ಸತಿ – ಗರುಡನ ಪತ್ನಿಯಾದ ಸೌಪರ್ಣಿಕ
ಪಟುತರ – ಸಮರ್ಥ
ಪತಿಕರಿಸು – ದಯೆತೋರು
ಪತಿತ – ಪಾಪಿ
ಪತಿತ ಪಾವನ – ಪಾಪಿಗಳನ್ನು ಉದ್ಧಾರ ಮಾಡುವವನು
ಪರ – ಜಗತ್ತಿನಿಂದ ಭಿನ್ನವಾದ ಶ್ರೀಹರಿ
ಪರತತ್ವ – ಮೋಕ್ಷ
ಪರಭಕ್ತಿ – ಹರಿಭಕ್ತಿ
ಪರಮ – ಶ್ರೇಷ್ಠ
ಪರಮೇಷ್ಠಿ – ಬ್ರಹ್ಮ
ಪರವಸ್ತು = ಪರಮಾತ್ಮ
ಪರಶುಧರ = ಪರಶುರಾಮ
ಪರಾತ್ಪರ = ಬ್ರಹ್ಮರುದ್ರಾದಿಗಳಿಗಿಂತ ಶ್ರೇಷ್ಠನಾದವನು
ಪರಾವರಿ = ಲಕ್ಷ್ಮಿ
ಪರಾವರೇಶ = ಲಕ್ಷ್ಮೀಶ
ಪರಾಸ್ತ್ರ = ದಿವ್ಯಾಸ್ತ್ರ
ಪರಿಭ್ರಮಣ – ತಿರುಗುವುದು
ಪರ್ವತೇಶನಣುಗಿ – ಪಾರ್ವತಿ
ಪವನ ಸಖ – ಇಂದ್ರ
ಪಶುಪತಿ ಧನು– ಶಿವಧನಸ್ಸು ಪಶುಪತಿಯ
ಕೋದಂಡ – ಶಿವಧನಸ್ಸು
ಪಾಟು – ಪಾಡು
ಪಾಣಿ – ಯೋಗ್ಯ ವ್ಯಕ್ತಿ
ಪಾಮರ – ತಿಳುವಳಿಕೆ ಇಲ್ಲದವನು
ಪಾರಣೆ – ಉಪವಾಸದ ನಂತರದ ಊಟ
ಪಾವಿನ ಶರ – ಸರ್ಪಾಸ್ತ್ರ
ಪಾವುಡ – ವಸ್ತ್ರ
ಪಿಂಗಾಕ್ಷಿ – ಕಂದುಬಣ್ಣದ ಕಣ್ಣುಗಳು
ಪುಟತರ – ಶ್ರೇಷ್ಠ
ಪುಣ್ಯನದಿ – ಗಂಗಾನದಿ
ಪುಣ್ಯಪಟ್ಟಣ – ಪೂನಾ
ಪುವರ್ಗ – ಪುರುಷನಾಮಕ ಶ್ರೀಹರಿಯ ಭಕ್ತವರ್ಗ
ಪುಷ್ಕರ – ತಾವರೆ
ಪೂತ – ಪವಿತ್ರ
ಪೂರ್ಣಪ್ರಜ್ಞ – ಮಧ್ವಾಚಾರ್ಯ
ಪೊಡಮಡು – ನಮಸ್ಕರಿಸು
ಪೊರ್ವದೇವರು–ಶ್ರೀಹರಿಯನ್ನು ಹೊರುವ ಗರುಡ
ಪೋರ – ಬಾಲಕ
ಪ್ರಚುರ – ಆಧಿಕ್ಯ, ಹೆಚ್ಚಳ

ಪ್ರಣತಾರ್ಥಿಹರ – ಶರಣಾಗತ ಭಕ್ತರ ಕಷ್ಟಗಳ ನಿವಾರಕ

ಪ್ರಣತಪಾಲಕ – ಶರಣಾಗತರಕ್ಷಕ

ಪ್ರಣತಿ – ನಮಸ್ಕಾರ

ಪ್ರಣಿತ – ನಮಸ್ಕರಿಸಿದ

ಪ್ರಣೀತ – ಉಕ್ತ

ಪ್ರಥಮಾಂಗ – ವಾಯುದೇವರು

ಪ್ರಧ್ವಂಸ – ಸಂಪೂರ್ಣನಾಶ

ಪ್ರಬುದ್ಧ – ಜ್ಞಾನಿ

ಪ್ರಭವ – ಮೂಲಕಾರಣ

ಪ್ರಾಜ್ಞ – ವಿದ್ವಾಂಸ

ಪ್ರಾಣಪ್ರಭ – ಜೀವದ ಒಡೆಯ

ಪ್ರಾಣಾವಿಷ್ಟ – ಶಕ್ತಿ ಮತ್ತು ಆವೇಶದಿಂದ ಕೂಡಿದ

ಪ್ರೇಷ್ಠತಮ – ಪ್ರಿಯತಮ

ಫಣಿಸತಿ – ಶೇಷದೇವರ ಪತ್ನಿಯಾದ ವಾರುಣಿ

ಫಲಬೇಧ – ಕರ್ಮಾನುಸಾರ ದೊರೆಯುವ ಫಲದಲ್ಲಿ ವ್ಯತ್ಯಾಸ

ಫಲುಗುಣಾಗ್ರಜ – ಭೀಮ

ಫಾಲ – ಹಣೆ

ಪ್ರಾಣಸುತ – ವಾಯುಸುತ

ಬಂಡು – ದಂಗೆ, ಬಂಡಾಯ

ಬಡಿವಾರ – ಬಡಾಯಿ

ಬತ್ತೀಸರಾಗ – ಮುವ್ವತ್ತೆರಡು ರಾಗಗಳು

ಬದರಿವಾಸ – ವೇದವ್ಯಾಸ

ಬಧಿರ – ಕಿವುಡ

ಬನ್ನಬಡಿಸು – ಕಷ್ಟಪಡಿಸು

ಬಾದರಾಯಣ – ವೇದವ್ಯಾಸ

ಬಿನುಗು – ಕ್ಷುದ್ರ, ಅಲ್ಪವಾದ

ಬಿಸಜ – ಬ್ರಹ್ಮ

ಬಿಸಜ ಪದ ಪದವಿ – ಬ್ರಹ್ಮಪದವಿ

ಬಿಸಜಾಪ್ತ – ಸೂರ್ಯ

ಬಿಸಜಾಪ್ತಸುತ – ಸುಗ್ರೀವ

ಬಿಸಜಾಪ್ತಸುತಾಗ್ರಜ – ವಾಲಿ

ಬೀತುದು – ನಷ್ಟವಾದುದು

ಬೀಯ – ವ್ಯಯ

ಬುಧ – ವಿದ್ವಾಂಸ, ಜ್ಞಾನಿ

ಬೃಂದ – ವೃಂದ, ಸಮೂಹ

ಬೃಂದಾರಕ – ದೇವತೆ

ಬೃಂದಾರಕೇಂದ್ರ – ದೇವೇಂದ್ರ

ಬೈತಿಡು – ಬಚ್ಚಿಡು

ಬೋವ – ಸಾರಥಿ

ಭಗ್ನದಂತ – ವಿನಾಯಕ

ಭವತಾರಕ – ಸಂಸಾರಬಂಧನದಿಂದ ಪಾರುಮಾಡುವವನು

ಭವಮೂಲ – ಜನ್ಮಾಂತರ

ಭಾನುಮತಿ – ಪ್ರಕಾಶಮಾನವಾದ ಜ್ಞಾನವುಳ್ಳ ಲಕ್ಷ್ಮೀದೇವಿ

ಭಾರಕರ್ತ – ಸೃಷ್ಟಿಸ್ಥಿತಿಲಯಗಳ ಭಾರ ನಿರ್ವಹಿಸುವವನು

ಭಾವ – ಮನಸ್ಸು, ಜ್ಞಾನ, ಜೀವ

ಭಾವಜ – ಮನ್ಮಥ
ಭಾವಜಾದಿ ಷಡ್ವರ್ಗ– ಕಾಮಾದಿ ಆರುವರ್ಗಗಳು
ಭಾವಧಾರಕ – ಸೃಷ್ಟಿಸ್ಥಿತಿಲಯಗಳನ್ನು ನಿರ್ವಹಿಸುವ ಕಾರ್ಯ ಹೊತ್ತವನು
ಭಾವಸೂತ್ರ – ಜೀವನಸೂತ್ರ, ಭಕ್ತಿಸೂತ್ರ
ಭಿನ್ನಜ್ಞಾನ – ಅಪೂರ್ಣಜ್ಞಾನ
ಭಿನ್ನಭಾವ – ಹರಿಸರ್ವೋತ್ತಮ ಜ್ಞಾನಕ್ಕಿಂತ ಬೇರೆಯಾದ ಜ್ಞಾನ
ಭಿಷಜೋತ್ತಮ – ಪರಿಣತ ವೈದ್ಯ
ಭುಕ್ತಿ – ಸರ್ವಸಾರಭೋಕ್ತನಾದ ಶ್ರೀಹರಿ
ಭುಜಗ – ಭುಜಕಿರೀಟ, ಭುಜ ಕೀರ್ತಿ, ಸರ್ಪ
ಭುಜಗಾಸ್ತ್ರ – ಸರ್ಪಾಸ್ತ್ರ
ಭುಜಗೇಂದ್ರ – ಆದಿಶೇಷ
ಭೂಮಿಕಳ್ಳ – ಹಿರಣ್ಯಾಕ್ಷ
ಭೂಮಿಭುಜದಲ್ಲಣ– ಕ್ಷತ್ರಿಯ ರಾಜರನ್ನು ನಾಶಮಾಡಿದ ಪರಶುರಾಮ
ಭೃತ್ಯ – ಸೇವಕ
ಭೈಷ್ಮಿ – ಭೀಷ್ಮಕರಾಜನ ಮಗಳಾದ ರುಕ್ಮಿಣಿ
ಭೋಗಬಲೆ – ಸುಖದ ಬಂಧನ
ಬೋವಿಧ – ಬಹುವಿಧ
ಭ್ರಂಷ – ಹಾಳು

ಮಂದಜ – ತಾವರೆ
ಮಂದಜಾಸನ – ಬ್ರಹ್ಮ
ಮಂದಜಾಸನ ಪಿತ– ಶ್ರೀಹರಿ
ಮಂದಾಕಿನಿ – ಗಂಗೆ
ಮಂದಾಕಿನಿ ಪಿತ–ಗಂಗಾಜನಕನಾದ ಶ್ರೀಹರಿ
ಮಂದಾರ – ಕಲ್ಪವೃಕ್ಷ
ಮುಂಡಾಡು – ಮುದ್ದಾಡು
ಮಕರಿ – ಮೊಸಳೆ
ಮಖ – ಯಜ್ಞ
ಮಡುಹು – ಕೊಲ್ಲು
ಮದಡ – ಮೂರ್ಖ
ಮನುಜ ಮೃಗೇಂದ್ರ– ನರಮೃಗ ಸ್ವರೂಪಿಯಾದ ನರಸಿಂಹ
ಮರಕಟಿ – ಮರಕುಟಿಕ ಹಕ್ಕಿ
ಮರಕತ – ನವರತ್ನಗಳಲ್ಲಿ ಒಂದು
ಮರ್ವು – ಮರೆವು, ಅಜ್ಞಾತ
ಮಹಾಭಾಗ – ಅತಿಶಯವಾದ ಭಾಗ್ಯ ಸಮುದಾಯವುಳ್ಳವನು
ಮಾತರಿಶ್ವ – ವಾಯುದೇವರು
ಮಾತುಲಾಂತಕ– ಸೋದರಮಾವನನ್ನು ಕೊಂದ ಶ್ರೀಕೃಷ್ಣ
ಮಾಯಸೆರೆ – ಹುಟ್ಟುಸಾವುಗಳ ಬಂಧನ
ಮಾಯೆ – ಲಕ್ಷ್ಮೀದೇವಿ
ಮಾರ – ಮನ್ಮಥ
ಮಾರಜನಕ – ವಿಷ್ಣು
ಮಾರ್ಗಣ – ಬಾಣ

ಮಾರ್ತಾಂಡ – ಸೂರ್ಯ
ಮಿಥ್ಯಾಜ್ಞಾನಿ – ನಿಶ್ಚಯ ಜ್ಞಾನವಿಲ್ಲದವನು
ಮಿಥ್ಯೆ – ಸುಳ್ಳು
ಮೀನಾಂಕ – ಮನ್ಮಥ
ಮುಕುತ – ಮುಕ್ತ
ಮುದ – ಆನಂದ
ಮುದ್ಗರ – ಗದೆ
ಮೃಡ – ಶಿವ
ಮೆಚ್ಚುಗೊಡು – ಬಹುಮಾನ ನೀಡು
ಮೇಧಿನಿ – ಭೂಮಿ
ಮೋಚಕ – ಬಿಡುಗಡೆ ಮಾಡುವವನು
ಮೋದ – ಆನಂದ
ಮೋದತೀರ್ಥರು ಆನಂದತೀರ್ಥರು
ಮೊರಡುತುರು – ಒದೆಯುವ ಹಸು
ಯಟ್ಟ – ಎಟ್ಟ, ಹಠಮಾರಿ, ಮೊಂಡ
ರಹದೂರ – ರಜೋಗುಣದಿಂದ ದೂರವಾದ
ರಥಾಂಗ – ಚಕ್ರ
ರಥಾಂಗಪಾಣಿ – ಶ್ರೀಹರಿ
ರದನ – ಹಲ್ಲು
ರಾಕೇಂದು – ಪೂರ್ಣಚಂದ್ರ
ರಾಕೇಂದುಕುಲ – ಚಂದ್ರವಂಶ
ರಾಹುತ – ಕುದುರೆಸವಾರ
ರುಕ್ಮ – ಬಂಗಾರ
ರುಕ್ಮಗರ್ಭ – ಹಿರಣ್ಯಗರ್ಭನಾದ ಬ್ರಹ್ಮ
ರುಜುಜ್ಞಾನ – ಸ್ಥಿರವಾದ ಜ್ಞಾನ
ರುಜೆ – ರೋಗ
ರೂಪ – ಸ್ವಭಾವ, ಸೌಂದರ್ಯ, ಅವತಾರ ರೂಪ
ಲಲಾಟ ಹಣೆ
ಲೋಕಮೋಹಕ – ಮನ್ಮಥ
ಲೋಕಮೋಹಕನಯ್ಯ – ಶ್ರೀಹರಿ
ವಂದ್ಯೆ – ಬಂಜೆ
ವಣಿಜ – ವ್ಯಾಪಾರಿ
ವದ್ಯ – ಬೇಡವಾದುದು
ವನಧಿ – ಸಮುದ್ರ
ವನಮೂಲ – ಕಾಡುಹೂಗಳಿಂದ ಮಾಡಿದ ಹಾರ.
ವನರುಹ – ತಾವರೆ
ವನರುಹ ಸಂಭವ – ಬ್ರಹ್ಮ
ವನರುಹ ಸಂಭವ ತಾತ – ಶ್ರೀಹರಿ
ವರ್ಧನ – ಹೆಚ್ಚಿವಿಕೆ, ಬೆಳವಣಿಗೆ
ವಲ್ಕಲ – ನಾರುಬಟ್ಟೆ
ವಸನ – ವಸ್ತ್ರ
ವಸುಧಾಸುತೆ – ಸೀತೆ
ವಸುಧಾಸುತಾ ರಮಣ – ಶ್ರೀರಾಮ
ವಸುಧೆ – ಭೂಮಿ
ವಾಜಿವದನ – ಹಯವದನ
ವಾತ ಭುಗ್ಭೂಷ – ಹಾವನ್ನು ಆಭರಣವನ್ನಾಗಿ ಉಳ್ಳವ, ಶಿವ
ವಾರಣ – ಆನೆ
ವಾರಣೇಂದ್ರ – ಗಜರಾಜ
ವಾರನಾರಿ – ವೇಶ್ಯೆ
ವಾಲ – ಬಾಲ

ವಾಸರ – ದಿನ
ವಾಸಿಪಂಥ – ಸೆಣಸಾಟ, ಸ್ಪರ್ಧೆ
ವಿದಾರಕ – ನಾಶಮಾಡುವವನು
ವಿಧು – ಚಂದ್ರ
ವಿಪದ – ವಿಪತ್ತು
ವಿಪುಲಮತಿ – ವಿಶಾಲಮನಸ್ಸು
ವಿರಜ – ನಿರ್ವಿಕಾರವಾದ
ವಿಶ್ವಂಭರ – ಜಗತ್ತನ್ನು ದೇಹದಲ್ಲಿ ಧರಿಸಿರುವವನು
ವಿಷಧಿ – ಸಮುದ್ರ
ವಿಷಮಗತಿ – ದುರ್ಮಾಗ
ವಿಸ್ಮೃತಿ – ವಿಸ್ಮರಣೆ
ವಿಹಗೇಂದ್ರ – ಗರುಡ
ವೀತಿಹೋತ್ರ – ಅಗ್ನಿ
ವೃತ್ತಿ – ವ್ಯಾಪಾರ, ಸ್ವಭಾವ
ವೃಷಭಾದ್ರಿಪ – ಶಿವ
ವೃಷ್ಣಿ – ಯಾದವವಂಶ
ವೃಷ್ಣೀಶ – ಯಾದವ ವಂಶದ ಒಡೆಯ ಶ್ರೀಹರಿ
ವೇದಪೀಠ = ಬ್ರಹ್ಮ
ವೈಕಲ್ಯ = ಕಳವಳ
ವೈಷಿಕ = ವಿಷಯಕ್ಕೆ ಸಂಬಂಧಿಸಿದ
ವ್ಯಾಳ = ಸರ್ಪ
ವ್ಯಾಳಶಾಹಿ = ಸರ್ಪಶಯನನಾದ ಶ್ರೀಹರಿ
ವ್ರಜ = ಸಮೂಹ
ವ್ರಾತ = ಸಮೂಹ
ಶುಂಡಾಲ = ಆನೆ

ಶಕ್ರ = ಇಂದ್ರ
ಶಫರ = ಮೀನು
ಶಫರಾಕ್ಷಿ = ಮೀನಾಕ್ಷಿ
ಶರಭಂಗ = ಗೌತಮ ವಂಶದ ಒಬ್ಬ ಋಷಿ
ಶರ್ಮ = ಆನಂದ
ಶರ್ವ = ಶಿವ
ಶರ್ವದೇವ = ರುದ್ರ
ಶರ್ವದೇವನಮ್ಮ=ರುದ್ರನ ಅಜ್ಜಿಯಾದ ಲಕ್ಷ್ಮೀದೇವಿ
ಶಾತಕುಂಭ = ಚಿನ್ನ
ಶುಕಬಿಂಬ = ಶುಕಮುನಿಗೆ ಪ್ರತ್ಯಕ್ಷನಾದವನು
ಶುಕ್ಲವೃತ್ತಿ = ಭಿಕ್ಷಾಟನೆ
ಶುಕ್ಲಾಂಬರ = ಬಿಳಿಯವಸ್ತ್ರ
ಶೌರಿದಿನ = ಹರಿದಿನ, ಏಕಾದಶಿ
ಶ್ರವಿಸು = ಶ್ರಮಿಸು
ಶ್ರೀಕಂಠಚಾಪ – ಶಿವಧನುಸ್ಸು
ಶ್ರೀಕಾಂತನಾತ್ಮಜ–ಬ್ರಹ್ಮ, ಮನ್ಮಥ
ಶ್ರೀ ಸಹೋದರ– ಲಕ್ಷ್ಮೀದೇವಿಯ ಸಹೋದರನಾದ ಚಂದ್ರ
ಶ್ರುತಿಧರ್ಮ – ವೇದಧರ್ಮ
ಶ್ರುತಿನಾಥ – ವೇದಗಳಿಗೆ ಒಡೆಯನಾದ ಶ್ರೀಹರಿ
ಸಂತಾರಕ – ಸಂಕಟಗಳಿಂದ ಪಾರುಮಾಡುವವನು.
ಸಂದಣಿ – ಗುಂಪು
ಸಂಮೊಗ ಸಮ್ಮುಖ, ಸಾನಿಧ್ಯ

ಸಂಸೃತಿ – ಸಂಸಾರ
ಸಖ – ಗೆಳೆಯ
ಸತ್ಕೃತಿ – ಒಳ್ಳೆಯ ಕೆಲಸ
ಸತ್ಯಸಂಕಲ್ಪ – ತನ್ನ ಇಚ್ಛೆಯಂತೆ ಕೊಡುವ ಶಕ್ತಿಯುಳ್ಳವನು
ಸಥೆ – ಆತ್ಮೀಯತೆ, ಸಲುಗೆ
ಸದಯ – ದಯವುಳ್ಳವನು
ಸನ್ನುತ – ಹೊಗಳಲ್ಪಟ್ಟವನು
ಸಪ್ತೆರಡುಭಕ್ತಿ – ನವವಿಧಭಕ್ತಿ
ಸಮವಿರಹಿತ – ತನಗೆ ಸಮರಾದವರು ಇಲ್ಲದವನು
ಸಮಾಧಿಕ ಶೂನ್ಯ –ತನಗೆ ಸಮಾನರೂ ಅಧಿಕರೂ ಇಲ್ಲದ ಶ್ರೀಹರಿ
ಸರಮೆಯರಸ – ಸರಮೆಯ ಪತಿಯಾದ ವಿಭೀಷಣ
ಸರಸಿಜಭವ ಕಪಾಲ– ಬ್ರಹ್ಮಕಪಾಲ
ಸರ್ವಾಸುನಿಲಯ – ಸರ್ವರ ಆತ್ಮಗಳಲ್ಲೂ ನೆಲೆಸಿರುವ ಭಗವಂತ
ಸಾಂದ್ರ – ಸಮುದ್ರ
ಸಾಕಲ್ಯ – ಪೂರ್ಣತೆ
ಸಾಮನಿಗಮ – ಸಾಮವೇದ
ಸಾಯಕ – ಬಾಣ
ಸಾಯುಜ್ಯ – ಮೋಕ್ಷ
ಸಾರಗ – ಒಂದು ಆಯುಧ
ಸಾರಭೋಕ್ತ – ಸರ್ವವಿಷಯಗಳಲ್ಲೂ ಶ್ರೇಷ್ಠವಾದ್ದನ್ನು ಮಾತ್ರ ಸ್ವೀಕರಿಸುವ ಶ್ರೀಹರಿ
ಸಾರಸಾಪ್ತಕುಲ – ಸೂರ್ಯವಂಶ
ಸಿಂಧುಸುತೆ – ಲಕ್ಷ್ಮೀದೇವಿ
ಸಿರಿಕಂಠ – ಶ್ರೀಕಂಠ
ಸಿರಿಮದ – ಧನಮದ
ಸುಗತಿ – ಮೋಕ್ಷ
ಸುಗಮ – ಸುಲಭವಾಗಿ ತಿಳಿಯುವ
ಸುದತಿ – ಸುಂದರಿ
ಸುಪ್ತಿ – ನಿದ್ರೆ
ಸುಮಶರ – ಮನ್ಮಥ
ಸುಮಶರ ಜನಕ–ಶ್ರೀಹರಿ
ಸುರಗಂಗೋದಿತ ಚರಣ– ದೇವಗಂಗೆಯನ್ನು ಸೃಷ್ಟಿಸಿದ ಪಾದವುಳ್ಳವನು
ಸುರರಾಜ – ಇಂದ್ರ
ಸೂನು – ಮಗ
ಸೂರಿ – ಜ್ಞಾನಿ
ಸ್ತವನ – ಸ್ತುತಿ
ಸ್ಮೃತಿ – ಸ್ಮರಣೆ
ಸ್ಯಂದನ – ರಥ
ಸ್ವರತ – ತನಗೆ ತಾನೇ ಆನಂದಾನುಭವ ಪಡೆಯುವವನು
ಸ್ವಾಂತ –ಮನಸ್ಸು
ಸ್ವಾರಾಧ್ಯರು – ತಮ್ಮನ್ನು ತಾವೇ ಪೂಜಿಸಿಕೊಳ್ಳುವವರು
ಹಗರಣ – ಕೆಲಸಕ್ಕೆ ಬಾರದ ಮಾತು
ಹದುಳ – ಆರೋಗ್ಯ

ಹನನ – ನಾಶ

ಹಮ್ಮು – ಗರ್ವ

ಹಯಾಸ್ಯ – ಹಯವದನ

ಹರಿ – ಸಿಂಹ, ಕಪಿ

ಹರಿವರರು = ಕಪಿಶ್ರೇಷ್ಠರು

ಹಾಟಕ = ಚಿನ್ನ

ಹಾರುವ = ಬ್ರಾಹ್ಮಣ

ಹೀರವರ್ಣರು = ಸ್ವರ್ಣವರ್ಣತೀರ್ಥರು

ಹುಯ್ಲು = ಗದ್ದಲ

ಹೆಡತಲೆ = ಹಿಂದಲೆ

ಹೆದ್ದೈವ = ಹಿರಿಯದೈವ, ಸರ್ವೋತ್ತಮನಾದ ಶ್ರೀಹರಿ

# ಅನುಬಂಧ–೨

## ಟಿಪ್ಪಣಿಗಳು

### ಕೀರ್ತನೆ–೧

**ಅ.ಪ. : ಆಕಾಶಾಭಿಮಾನಿ:** ಪಂಚಭೂತಗಳಲ್ಲಿ ಒಂದಾದ ಆಕಾಶಕ್ಕೆ ಅಭಿಮಾನಿ ದೇವತೆಯಾದ ಗಣೇಶನನ್ನು ಗಗನಾಭಿಮಾನಿ, ಖೇಶ ಇತ್ಯಾದಿ ಹೆಸರುಗಳಿಂದ ಕರೆಯುತ್ತಾರೆ.

ನಭೋಭಿಮಾನಿ ವಿಘ್ನೇಶೋವಿಷ್ಣೋರ್ಮಾಂಸಾಶ್ರಿತಃ ಸದಾ।

ಅಂತಿರಿಕ್ಷಭಿಮಾನೀ ಚ ತತೂನುನುದರೇ ಸ್ಥಿತಾ ॥

ಎಂದು ಬೃಹದಾರಣ್ಯಕ ಉಪನಿಷತ್ತಿನಲ್ಲಿ ಗಣೇಶನನ್ನು ನಭೋಭಿಮಾನಿ ಅಂತರಿಕ್ಷಾಭಿಮಾನಿ, ಆಕಾಶತತ್ವಕ್ಕೆ ಅಧಿದೇವತೆ ಎನ್ನಲಾಗಿದೆ. "ಆಕಾಶನಾಮೋ ವಿಘ್ನೇಶೋ" ಎಂಬ ಅರ್ಥದಲ್ಲಿ ವಿನಾಯಕನನ್ನೇ ಆಕಾಶ ಎಂದು ಕರೆಯುತ್ತಾರೆ.

### ಕೀರ್ತನೆ–೩

**ನುಡಿ–೪ : ತ್ರಿಧಾಮನಿಲಯನೆ :** ಶ್ರೀಹರಿಯನ್ನು ತ್ರಿಧಾಮನಿಲಯ ಎನ್ನುತ್ತಾರೆ. ಶ್ವೇತದ್ವೀಪ, ಅನಂತಾಸನ, ವೈಕುಂಠ ಇವು ಮೂರು ಹರಿಯ ವಾಸಸ್ಥಾನಗಳು. ತ್ರಿದಿವ, ತ್ರಿಪದ, ತ್ರಿಪಾತ್, ತ್ರಿಪುಷ್ಯ–ಈಪದಗಳೂ ಕೂಡ ಶ್ರೀಹರಿಯು ಈ ಮೂರು ಲೋಕಗಳಲ್ಲಿ ವಾಸಿಸುತ್ತಾನೆ ಎಂಬುದನ್ನು ಸೂಚಿಸುತ್ತವೆ.

### ಕೀರ್ತನೆ–೫

**ನುಡಿ–೪ : ಕುಬುಜೆ ಗಂಧವ ಬೇಡುವ :** ಯಾದವರ ಅರಸನಾದ ಕಂಸನ ದಾಸಿ ಕುಬ್ಜೆ. ರಾಜನಿಗೆ ಪ್ರತಿನಿತ್ಯ ಪರಿಮಳಭರಿತವಾದ ಚಂದನವನ್ನು ತಂದುಕೊಡುವುದು ಅವಳ ಕೆಲಸ. ಅವಳ ಗೂನುಬೆನ್ನು ಅವಳ ದೇಹದ ಸೌಂದರ್ಯ ಮತ್ತು ಆಕಾರಗಳನ್ನು

ವಿರೂಪಗೊಳಿಸಿತ್ತು. ಕೃಷ್ಣ ಮಥುರೆಗೆ ಬಂದಾಗ ಅರಮನೆಯ ದಾರಿಯಲ್ಲಿ ಕುಬ್ಜೆ ಚಂದನವನ್ನು ತೆಗೆದುಕೊಂಡು ಹೋಗುತ್ತಿದ್ದಳು. ಕೃಷ್ಣ ಬಲವಂತವಾಗಿ ಅವಳನ್ನು ಅಡ್ಡಗಟ್ಟಿ ಚಂದನವನ್ನು ತೆಗೆದುಕೊಂಡು ತನ್ನ ಮೈಗೆ ಪೂಸಿಕೊಂಡ. ಅವಳ ಗೂನು ಬೆನ್ನನ್ನು ತೊಲಗಿಸಿ ಅವಳು ದಿವ್ಯಸುಂದರಿಯಾಗುವಂತೆ ಮಾಡಿದ.

## ಕೀರ್ತನೆ-೯

**ನುಡಿ-೧ : ನಾರಿ ಸತ್ಯಭಾಮೆ ಹರಿ ನಿನ್ನ ದಾನಮಾಡೆ:** ಸತ್ಯಭಾಮೆ ಕೃಷ್ಣನ ಅಷ್ಟಮಹಿಷಿಯರಲ್ಲಿ ಒಬ್ಬಳು. ತಾನು ಮಾಡಿದ ವ್ರತವೊಂದರ ಫಲಪ್ರಾಪ್ತಿಗಾಗಿ ಅವಳು ಕೃಷ್ಣನನ್ನೇ ನಾರದರಿಗೆ ದಾನಮಾಡಿದಳು. ಕೃಷ್ಣನ ತೂಕದ ಬಂಗಾರವನ್ನು ನಾರದರಿಗೆ ಒಪ್ಪಿಸಿ, ಕೃಷ್ಣನ್ನು ಹಿಂದಕ್ಕೆ ಪಡೆಯಲು ಕೃಷ್ಣತುಲಾಭಾರವನ್ನು ಏರ್ಪಡಿಸಿದಳು. ಅರಮನೆಯ ಆಭರಣಗಳ ತೂಕ ಕೃಷ್ಣನ ತೂಕಕ್ಕೆ ಸರಿಬರಲಿಲ್ಲ. ರುಕ್ಮಿಣಿ ಭಕ್ತಿಯಿಂದ ಒಂದು ತುಳಸಿದಳವನ್ನು ಅರ್ಪಿಸಿ ಪತಿಯನ್ನು ಹಿಂದಕ್ಕೆ ಪಡೆದಳು. ಐಶ್ವರ್ಯ ಮತ್ತು ಭಕ್ತಿ ಇವುಗಳಲ್ಲಿ ಭಕ್ತಿಯ ತೂಕವೇ ದೊಡ್ಡದು ಎಂಬುದನ್ನು ಸಾಂಕೇತಿಕವಾಗಿ ನಿರೂಪಿಸಿರುವ ಕಥೆಯಿದು.

## ಕೀರ್ತನೆ-೧೪

**ನುಡಿ-೧ : ಮಾತರಿಶ್ವ :** ವಾಯುದೇವರನ್ನು, ವಾಯುದೇವರ ಅವತಾರ ರೂಪಗಳನ್ನು ಮಾತರಿಶ್ವ ಎನ್ನುತ್ತಾರೆ. ಜೀವರ ದೇಹಗಳಲ್ಲಿ ನೆಲಸಿ, ದೇಹ ಇಂದ್ರಿಯಗಳಿಗೆ ಪ್ರೇರಕನಾದ್ದರಿಂದ ವಾಯುದೇವರಿಗೆ ಮಾತರಿಶ್ವ ಎಂದು ಹೆಸರು. "ಮಾತರ"ಎಂಬ ಪದಕ್ಕೆ ಜ್ಞಾನ ಎಂಬ ಅರ್ಥವೂ ಇದೆ. ಜ್ಞಾನಿಯಾದ ವಾಯುದೇವರನ್ನು ಮಾತರಿಶ್ವ ಎನ್ನುತ್ತಾರೆ. "ಮಾತರಿ"ಎಂದರೆ ವೇದಗಳು ಎಂದು ಅರ್ಥ. ವೇದಗಳ ವಿಚಾರವಾಗಿ ಪೂರ್ಣಜ್ಞಾನವುಳ್ಳ ವಾಯುದೇವರೇ ಮಾತರರಿಶ್ವ.

## ಕೀರ್ತನೆ-೨೧

ಇದು ವೆಂಕಟರಾಯದಾಸರ ಸ್ತುತಿಪದ. ಪ್ರಸನ್ನವೆಂಕಟವಿಠಲ ಅಂಕಿತದ ಕುಂಭಕೋಣದ ವೆಂಕಟದಾಸರು(೧೭೮೦-೧೮೫೫) ವಿಜಯರಾಮಚಂದ್ರವಿಠಲರ ಗುರುಗಳು.

## ಕೀರ್ತನೆ-೨೨

**ಅ.ಪ. : ಕಷ್ಟಪಡಿಸಲಿಬೇಡ ಇಷ್ಟ ಕೃಷ್ಣಾರ್ಯನೆ:** ಇಲ್ಲಿ ಕೃಷ್ಣಾರ್ಯ ಎಂದು ಉಲ್ಲೇಖಿತರಾಗಿರುವ ಗುರುಗಳು ಇಭರಾಮಪುರದ ಕೃಷ್ಣಾರ್ಯರು(೧೭೮೩-೧೮೮೯). ರಾಘವೇಂದ್ರ ಸ್ವಾಮಿಗಳ ಭಕ್ತರಾಗಿ, ಪಂಚಮುಖಿ ಪ್ರಾಣದೇವರ ಉಪಾಸಕರಾಗಿದ್ದ

ಕೃಷ್ಣಚಾರ್ಯರು ಸಿದ್ಧಪುರುಷರೆಂದೇ ಪ್ರಖ್ಯಾತರಾಗಿದ್ದರು. ಜನರು ಇವರನ್ನು "ಅಪ್ಪಾವು" ಎಂದು ಭಕ್ತಿಯಿಂದ ಕರೆಯುತ್ತಿದ್ದರು. ಆನೇಕ ಹರಿದಾಸರು ಮತ್ತು ಪಂಡಿತರು ಇವರ ಶಿಷ್ಯರಾಗಿದ್ದರು. ವಿಜಯರಾಮಚಂದ್ರವಿಠಲ ಮತ್ತು ಜಯೇಶವಿಠಲರು ಅಪ್ಪಾವ್ರ ಅನುಗ್ರಹವನ್ನು ಹಲವು ರೀತಿಯಲ್ಲಿ ಸ್ಮರಿಸಿದ್ದಾರೆ.

## ಕೀರ್ತನೆ–೨೯

**ನುಡಿ–೮ : ಕವಿಗಳಿಗನ್ನ ಕೊಟ್ಟವನಲ್ಲ** : ಶ್ರಾದ್ಧಾದಿ ಪಿತೃಕಾರ್ಯಗಳಲ್ಲಿ ಪಿತೃಗಳಿಗೆ ಸಮರ್ಪಿಸುವ ಭೋಜನಕ್ಕೆ 'ಕವ್ಯ'ಎಂದು ಹೆಸರು. ಈ ಕವ್ಯವನ್ನು ಸ್ವೀಕರಿಸುವ ಪಿತೃಗಳೇ ಕವಿಗಳು. ದೇವ, ಋಷಿ, ಪಿತೃಗಳನ್ನು ಪ್ರತಿನಿಧಿಸುವ ಶುಚಿರ್ಭೂತರು, ನೀತಿಪರರು, ಬ್ರಹ್ಮವಾದಿಗಳು ಆದ ವಿದ್ವಾಂಸರನ್ನು 'ಕವಿ'ಗಳು ಎನ್ನುತ್ತಾರೆ. ಇಂಥ ಬ್ರಹ್ಮವಾದಿಗಳಿಗೆ ಸಂಕಲ್ಪಪೂರ್ವಕವಾಗಿ ಭೋಜನಾದಿಗಳನ್ನು ಮಾಡಿಸುವುದು ತನ್ಮೂಲಕ ಪಿತೃಗಳನ್ನು ತೃಪ್ತಿಪಡಿಸುವುದು 'ಕವಿಗಳಿಗನ್ನ ಕೊಡು'ಎಂಬ ಮಾತಿನ ಅರ್ಥ.

## ಕೀರ್ತನೆ–೩೫

**ಪಲ್ಲವಿ : ಅಂಬೆಗಳಸುತ** : ಕೃಷ್ಣ ದೇವಕಿಯ ಗರ್ಭದಲ್ಲಿ ಜನಿಸಿದವನು ಆದರೆ ನಂದಗೋಕುಲದಲ್ಲಿ ಶಿಶುವಾಗಿ ಬೆಳೆದು ಯಶೋಧೆಯ ಪ್ರೀತಿವಾತ್ಸಲ್ಯಗಳ ಸವಿ ಅನುಭವಿಸಿದವನು. ಈ ಇಬ್ಬರು ತಾಯಂದಿರ ಒಬ್ಬನೇ ಮಗನಾದ್ದರಿಂದ ಅವನು ಅಂಬೆಗಳ ಸುತ.

**ನುಡಿ–೧ : ಚರ್ಮದಿಂದೇಳು ಹೊದ್ದಿಕೆ** : ಶರೀರಗತ ಸಪ್ತಧಾತುಗಳು

**ಒಂಭತ್ತು ರಂಧ್ರ** : ಶರೀರದ ನವದ್ವಾರಗಳು.

**ನುಡಿ–೫ : ಅಷ್ಟಆನೆ ಒಳಗಿಟ್ಟುಕೊಂಡಿಹುದು** : ದೇಹದಲ್ಲಿರುವ ಅಷ್ಟಮದಗಳು. **ಬೆಟ್ಟ ಆರು** : ಅರಿಷಡ್ವರ್ಗಗಳು

## ಕೀರ್ತನೆ–೪೧

**ನುಡಿ–೪ : ತೃಣಕೆ ಕೈವಲ್ಲೀವ ತ್ರ್ಯಧೀಶ** : ತ್ರ್ಯಧೀಶ ಎಂದರೆ ಸ್ವರ್ಗ, ಭೂಮಿ, ಪಾತಾಳಗಳ ಒಡೆಯನಾದ ತ್ರಿಲೋಕನಾಥ ಅಥವಾ ದೇವ, ಪಿತೃ, ಮಾನವ ಈ ಮೂರು ವರ್ಗಗಳಿಗೂ ಅಧಿಪತಿಯಾದ ಶ್ರೀಹರಿ. ತಾನು ತ್ರಿಲೋಕಪತಿಯಾದರೂ ಅಧಿಕಾರದ ಮದವಿಲ್ಲದೆ ತೃಣಕೆ ಸಮಾನರಾದ ಹುಲು ಮನುಜರಿಗೂ ಮೋಕ್ಷವನ್ನು ಕೊಡಬಲ್ಲವನು.

## ಕೀರ್ತನೆ–೪೩

**ನುಡಿ–೧ : ಎನ್ನೊಡನೆ ಹುಟ್ಟಿದ ಹರಿಯೆ :** ಸೃಷ್ಟಿಯ ಪ್ರಾರಂಭದಿಂದ ಇಲ್ಲಿಯವರೆಗೂ ಶ್ರೀಹರಿ ಧರಿಸಿದ ಅನೇಕ ಅವತಾರಗಳು ಮನುಷ್ಯರ ಸಖ್ಯದಲ್ಲೇ ಆಗಿವೆ. ಅವನು "ಅನಂತಗುಣವನಧಿ" ಆದರೂ ಲೋಕ ಮರ್ಯಾದೆಯನ್ನು ಅನುಸರಿಸಿ ಮಾನವರಂತೆಯೇ ನಟಿಸುತ್ತಾನೆ. ಆದ್ದರಿಂದಲೇ ಹರಿಗೂ ನಮಗೂ ಅಂತರವಿದ್ದರೂ ಮಾನವ ಬಾಂಧವ್ಯದ ಆತ್ಮೀಯತೆ ಇದೆ.

## ಕೀರ್ತನೆ–೪೪

**ನುಡಿ–೧ : ಪಾದದಿ ನದಿಯನು ಪೆತ್ತ :** ವಾಮನಾವತಾರದ ಶ್ರೀಹರಿ ತ್ರಿವಿಕ್ರಮನಾಗಿ ಬೆಳೆದು ಆಕಾಶವನ್ನು ತನ್ನ ಪಾದದಿಂದ ಅಳೆದ. ಸ್ವರ್ಗದ ದೇವತೆಗಳು ಆಪಾದಕ್ಕೆ ಅಭಿಷೇಕ ಮಾಡಿದರು. ಆ ಪಾದಜಲವೇ ಗಂಗೆಯಾಯಿತು. ಆದ್ದರಿಂದ ಗಂಗೆ "ವಿಷ್ಣುಪಾದೋದ್ಭವೆ" ಎನಿಸಿಕೊಂಡಳು. ಶ್ರೀಹರಿ ಗಂಗಾಜನಕನೆಂದು ಪ್ರಸಿದ್ಧನಾದ.

## ಕೀರ್ತನೆ–೪೬

**ನುಡಿ–೧ : ಕಣ್ಣಿನಾ ಕರಿರಟ್ಟು...... :** ಕಪ್ಪು ಬಣ್ಣದ ಒರಟು ಬಟ್ಟೆಯನ್ನು ದೃಷ್ಟಿಗೆ ಅಡ್ಡಬರುವಂತೆ ಕಟ್ಟಿಕೊಂಡರೆ ಹೊರಗಿನ ವಸ್ತುಗಳನ್ನು ನೋಡಲು ಸಾಧ್ಯವಿಲ್ಲ. ಹೀಗೆಯೇ ಅಂತರಂಗದಲ್ಲಿರುವ ಶ್ರೀಹರಿಯನ್ನು ಒಳಗಣ್ಣಿಂದ ನೋಡಲು ಅಜ್ಞಾನದ ಕಪ್ಪು ಬಟ್ಟೆ ಅಡ್ಡಿಯಾಗಿದೆ. ಇದನ್ನು ನಿವಾರಿಸಿ ಶುಭ್ರದೃಷ್ಟಿ ನೀಡುವಂತೆ ದಾಸರು ಪ್ರಾರ್ಥಿಸುತ್ತಾರೆ.

## ಕೀರ್ತನೆ–೪೭

**ನುಡಿ–೧ : ನಿನ್ನ ಕ್ರಿಯ ಗುಣರೂಪ ತೋರಿ ಎನಗೆ :** ಕ್ರಿಯ ಎಂದರೆ ಸೃಷ್ಟಿ, ಸ್ಥಿತಿ ಲಯಗಳನ್ನು ನಿರ್ವಹಿಸುವ ಶ್ರೀ ಹರಿಯ ಕಾರ್ಯಸಾಮರ್ಥ್ಯ. ಗುಣ ಎಂದರೆ ತತ್ವಗಳು ಎಂದು ಅರ್ಥ. ಶ್ರೀ ಹರಿಯು ಸತ್ವ, ಜ್ಞಾನ, ಆನಂದಾದಿ ಗುಣಗಳಿಂದ ಪೂರ್ಣನಾದ್ದರಿಂದ ಅವನು "ಗುಣಮಯ" ಆನಂದಾದಿ ಸರ್ವಕಲ್ಯಾಣಗುಣಗಳನ್ನೇ ಅನುಭವಿಸುವುದರಿಂದ ಅವನು ಗುಣಭೋಕ್ತೃ. ರೂಪ ಎಂದರೆ ಆಕಾರ, ಸೌಂದರ್ಯ ಎಂಬುದು ಸಾಮಾನ್ಯ ಅರ್ಥ. ಇಲ್ಲಿ ಹರಿಯ ಮತ್ಸ್ಯಾದಿ ಅವತಾರಗಳಲ್ಲಿ ದಶರೂಪಿ. ನಾರಾಯಣಾದಿ ಅವತಾರಗಳಲ್ಲಿ ಶತರೂಪಿ. ವಿಶ್ವಾದಿ ಅವತಾರಗಳಲ್ಲಿ ಸಹಸ್ರರೂಪಿ. ಅಜಿತಾದಿ ಅವತಾರಗಳಲ್ಲಿ ಅನಂತರೂಪಿ. ಆದ್ದರಿಂದ ಶ್ರೀಹರಿ ಅನಂತಗುಣ ಕ್ರಿಯಾರೂಪಿ ಎನಿಸಿಕೊಳ್ಳುತ್ತಾನೆ.

**ನುಡಿ–೨ : ಸ್ಮೃತಿ ಜ್ಞಾನ.....ಜೀವಕರ್ಮವ ಮಾಳ್ಪೆ :** ನಮ್ಮ ಚಿಂತನೆ, ಜ್ಞಾನೇಂದ್ರಿಯಗಳು, ಮನಸ್ಸು, ಬುದ್ಧಿ, ಪಂಚಭೂತಗಳು, ತ್ರಿಕರಣಗಳು, ಸಪ್ತಧಾತುಗಳು,

ಪಂಚಕೋಶಗಳು ಮತ್ತು ಚತುರ್ವಿಂಶತಿ ತತ್ವಗಳಲ್ಲೂ ವ್ಯಾಪಕನಾದ ಶ್ರೀಹರಿ ಸತಿಸಹಿತನಾಗಿ ವಾಯುದೇವರಲ್ಲಿ ನೆಲಸಿ ಆತನ ಮೂಲಕ ಲೋಕ ವ್ಯಾಪಾರ ಮಾಡಿಸುತ್ತಾನೆ.

**ನುಡಿ–೩ : ಚತುರದಶ ಲೋಕದಲಿ.....ನೋಳ್ಪರ್‍ಯೆ ಮಹಚಿತ್ರ :** ೧೪ ಲೋಕಗಳ ಸಮಸ್ತ ಜೀವಿಗಳಲ್ಲೂ ವ್ಯಾಪ್ತನಾದ ಪ್ರದ್ಯುಮ್ನರೂಪಿ ಪರಮಾತ್ಮನ ಲೀಲೆಯನ್ನು ಬ್ರಹ್ಮರುದ್ರಾದಿ ದೇವತೆಗಳೆಲ್ಲಾ ಭಕ್ತಿಯಿಂದ ವೀಕ್ಷಿಸುತ್ತಾರೆ.

**ನುಡಿ–೭ : ವಿಶ್ವತೈಜಸಮೂರ್ತಿ :** ಜಾಗೃತ್ ಸ್ವಪ್ನ, ಸುಷುಪ್ತಿ ಈ ಮೂರು ಅವಸ್ಥೆಗಳಲ್ಲಿ ವಿಶ್ವ ತೈಜಸಮೂರ್ತಿ ನಾಮಕ ಪರಮಾತ್ಮ ಶರೀರದಲ್ಲಿ ನೆಲೆಸಿದ್ದು ಚೈತನ್ಯವನ್ನು ಪ್ರೇರಿಸುತ್ತಾನೆ. ವಿಶ್ವನಾಮಕ ಪರಮಾತ್ಮ ಕಣ್ಣಿನಲ್ಲಿ ಸ್ಥಿತನಾಗಿ ಜಾಗ್ರದಾವಸ್ಥೆಗೆ ಪ್ರೇರಕನಾಗಿರುತ್ತಾನೆ. ಜಾಗೃತವಾಸ್ಥೆಯ ಅನುಭವವನ್ನೂ ಪಡೆಯುತ್ತಾನೆ. ಪ್ರಾಜ್ಞನಾಮಕ ಪರಮಾತ್ಮ ಹೃದಯದಲ್ಲಿದ್ದು ನಿದ್ರೆಗೆ ಪ್ರೇರಿಸುತ್ತಾನೆ. ಸ್ವಪ್ನಗಳಿಲ್ಲದ ಅತ್ಯಂತ ಗಹನವಾದ ನಿದ್ರಾವಸ್ಥೆಯೆ ಪ್ರಜ್ಞಾವಸ್ಥೆ. ತೈಜಸ ನಾಮಕ ಪರಮಾತ್ಮ ಕಂಠದಲ್ಲಿದ್ದು ಎಚ್ಚರವೂ ಅಲ್ಲದ ನಿದ್ರೆಯೂ ಅಲ್ಲದ ಸ್ವಪ್ನಾವಸ್ಥೆಗೆ ಪ್ರೇರಕನಾಗಿರುತ್ತಾನೆ.

## ಕೀರ್ತನೆ–೪೮

**ಪಲ್ಲವಿ : ಕವಿವರರ ಕವನದಲಿ ಕವಿ ಕವಿದು ಪೊಳೆವ.... :** ಕವಿಗಳ ಕಾವ್ಯಗಳಲ್ಲಿ ಉಜ್ವಲವಾಗಿ ಚಿತ್ರಿತವಾಗಿರುವ ಶ್ರೀಹರಿಯ ಮಹಿಮೆಯ ಚಿತ್ರಣ ಈ ಕೀರ್ತನೆಯ ವಸ್ತುವೆಂದು ಮೇಲ್ನೋರಿಕೆಗೆ ಭಾಸವಾಗುತ್ತದೆ. ಇಲ್ಲಿ ಕವಿ ಎಂದರೆ ಬರಿಯ ಕಾವ್ಯ ಕರ್ತೃವಲ್ಲ. ವೇದಾಂತ ವಿಚಾರಪೂರ್ವಕ ವೇದಪ್ರತಿಪಾದ್ಯ ವಸ್ತುವನ್ನು ತಿಳಿದವನು. ಯೋಗ್ಯತಾನುಸಾರ ಸರ್ವಜ್ಞ, ಕೃಷ್ಣ ವಿಷಯವಾದ ಕಾವ್ಯ ರಚಿಸಿದವನು. ಇಂಥ ಕವಿಗಳಲ್ಲಿ ಶ್ರೇಷ್ಠರಾದ ಮಧ್ವಾಚಾರ್ಯರನ್ನು ಕವಿವರ ಎಂದು ಕರೆಯಲಾಗಿದೆ. ಈ ಕವಿವರರ ಕವನವಾದ "ದ್ವಾದಶ ಸ್ತೋತ್ರ"ದಲ್ಲಿ ಮತ್ತೆ ಮತ್ತೆ ತೋಜೋಮಯನಾಗಿ ಚಿತ್ರಿತನಾಗಿರುವ ಶ್ರೀಹರಿಯ ಮಹಿಮೆಯನ್ನು ಮಧ್ವರ ಕೃತಿಯ ಹಿರಿಮೆಯನ್ನು ಇಲ್ಲಿ ನಿರೂಪಿಸಲಾಗಿದೆ.

**ನುಡಿ–೧ : ಪ್ರಭುಪೂರ್ಣ ಕವನದಲಿ :** ಪ್ರಭು ಎಂದರೆ ಪ್ರಕರ್ಷವಾದ ಅತಿಶಯವಾದ ಜ್ಞಾನವುಳ್ಳವನು. ಪ್ರಭುಪೂರ್ಣ ಎಂದರೆ ಪ್ರಕರ್ಷನಾದ ಅತಿಶಯವಾದ ಪೂರ್ಣಜ್ಞಾನಿಗಳಾದ ಮಧ್ವಾಚಾರ್ಯರು. ಈ ಕಾವ್ಯದ ವಾಚನದಿಂದ ಕಷ್ಟಗಳು ಪರಿಹಾರವಾಗುತ್ತವೆ. ಇದರ ಧವಳ ಕೀರ್ತಿ ಬೆಳದಿಂಗಳನ್ನು ಮೀರಿಸಿದೆ.

**ನುಡಿ–೩ :** ಈ ಕಾವ್ಯದ ಶ್ರವಣ ಕೇಳುಗರನ್ನು ಮೈಮರೆಸುತ್ತದೆ. ಮಹಾಲಕ್ಷ್ಮಿ, ಶಿವ, ವೇದವ್ಯಾಸ ಮೊದಲಾದವರು ಅನುಭವಿಸಿದ ವಿಷ್ಣುಭಕ್ತಿ ಇಲ್ಲಿ ಅಡಕವಾಗಿದೆ. ಇದನ್ನು ಪಠಿಸುವವರಿಗೆ ವಾಯುದೇವರ, ಕೃಷ್ಣಾರ್ಯರ (ಇಭರಾಮಪುರದ ಕೃಷ್ಣಾಚಾರ್ಯ) ಮತ್ತು ರಾಮಾರ್ಯರ (ವಿಜಯ ರಾಮಚಂದ್ರವಿಠಲ) ಒಲುಮೆ ದೊರೆಯುತ್ತದೆ.

**ನುಡಿ–೪ : ಅವಲಿಯನು ತಿಂದವನು :** ಕುಚೇಲ ನೀಡಿದ ಅವಲಕ್ಕಿಯನ್ನು ತಿಂದು ತೃಪ್ತನಾದ ಶ್ರೀಕೃಷ್ಣ.

## ಕೀರ್ತನೆ–೪೯

**ಪಲ್ಲವಿ : ಕರ್ಮನಾಮಕ :** ಎಲ್ಲ ಕಾರ್ಯಗಳಿಗೂ ಮೂಲ ಕಾರಣನಾದ್ದರಿಂದ, ಸರ್ವಚೇಷ್ಟಾಯುಕ್ತನಾದ್ದರಿಂದ ಶ್ರೀಹರಿಯನ್ನು ಕರ್ಮನಾಮಕ ಎನ್ನುತ್ತಾರೆ.

**ಅ.ಪ. : ನಿರ್ಮಮರ ದೊರೆ :** ಯಾವುದನ್ನೂ ನಾವೇ ಸ್ವತಂತ್ರವಾಗಿ ಮಾಡಲು ಸಾಧ್ಯವಿಲ್ಲ ಎಂಬ ಜ್ಞಾನ ನಿರ್ಮಮತ್ವ. ಈ ಜ್ಞಾನ ಹೊಂದಿದ ಅಸ್ವಾತಂತ್ರ್ಯರಾದ ಜೀವಿಗಳು ಮತ್ತು ದೇವತೆಗಳೇ ನಿರ್ಮಮರು. ಇವರಿಗೆ ಒಡೆಯನಾದ ಶ್ರೀಹರಿಯೆ ನಿರ್ಮಮರ ದೊರೆ.

**ನುಡಿ–೧ : ಅಹಂಜ್ಞಾನ :** ತನ್ನಲ್ಲಿ ಇಲ್ಲದ ಗುಣಗಳು ವಿಶೇಷವಾಗಿದೆ ಎಂದು ಅಭಿಮಾನಪಡುವ ಬುದ್ಧಿ, ನಾನು ನನ್ನದು ಎಂಬ ದುರಭಿಮಾನ.

## ಕೀರ್ತನೆ–೫೦

**ನುಡಿ–೨ : ಋಜುವರ್ಗ ಸಂಪೂಜ್ಯ :** ಅಜ್ಞಾನ ಮೊದಲಾದ ದೋಷಗಳಿಂದ ದೂರನಾಗಿ ಭಗವತ್ ವಿಷಯದಲ್ಲಿ ಸರಿಯಾದ ಜ್ಞಾನವುಳ್ಳ ಬ್ರಹ್ಮ ಪದವಿಗೆ ಯೋಗ್ಯರಾದ ೨೦೦ ಮಂದಿ ದೇವತೆಗಳ ಸಮೂಹವೇ ಋಜುಗಣ ಅಥವಾ ಋಜುವರ್ಗ. ಇಂಥವರಿಂದ ಪೂಜಿಸಲ್ಪಟ್ಟವನು ಶ್ರೀಹರಿ.

## ಕೀರ್ತನೆ–೫೧

**ಪಲ್ಲವಿ : ಕ್ರಿಯರೂಪಗುಣ :** (ನೋಡಿ ೪೭ರ ಟಿಪ್ಪಣಿ)

## ಕೀರ್ತನೆ–೫೨

**ಪಲ್ಲವಿ : ಗುರುನಿಕರ ಸಂಸೇವ್ಯ ಸತಿಪತಿ :** ವಾಯುದೇವರೆ ಮೊದಲಾದ ದೇವತೆಗಳಿಂದ ಪೂಜಿಸಲ್ಪಟ್ಟ ಲಕ್ಷ್ಮೀರಮಣನಾದ ಶ್ರೀಹರಿ.

**ನುಡಿ–೨ : ನಿನ್ನ ಕ್ರಿಯ ಗುಣರೂಪ :** (ನೋಡಿ ೪೭ರ ಟಿಪ್ಪಣಿ)

**ಅನ್ನ ನೀ ಎನಗಾಗು :** ಅನ್ನದಲ್ಲಿ ಸನ್ನಿಹಿತನಾಗಿರುವುದರಿಂದಲೂ, ಸರ್ವಜೀವನಿಗೆ ಜೀವನಾಧಾರನಾಗಿರುವುದರಿಂದಲೂ ಶ್ರೀಹರಿಗೆ "ಅನ್ನ" ಎಂದು ಹೆಸರು "ಅನ್ನ ಶಬ್ದವಾಚ್ಯ"ನಾದ ಭಗವಂತ ನಮ್ಮ ಕಷ್ಟಗಳನ್ನು ಪರಿಹರಿಸು ಎಂಬ ಭಾವನೆ ಇದು.

**ನುಡಿ-೩ : ಪೃಷ್ಠೇಶ ತವ ಕರುಣ..... :** ಪೃಷ್ಠ ಎಂದರೆ ಮೀರಿದವನು ಎಂದು ಅರ್ಥ. ಜಾಗೃತ್, ಸ್ವಪ್ನ, ಸುಷುಪ್ತಿ ಈ ಮೂರು ಅವಸ್ಥೆಗಳನ್ನು ಮೀರಿದ ಶ್ರೀಹರಿಯನ್ನು ತ್ರಿಪೃಷ್ಠ ಎನ್ನುತ್ತಾರೆ. ಹೀಗೆಯೇ ಅನಂತಾಸನ, ಶ್ವೇತದ್ವೀಪ, ವೈಕುಂಠ ಈ ಮೂರು ಲೋಕಗಳನ್ನು ಮೀರಿ ಇರುವವನು. ಇಂಥವನ ಕರುಣಾದೃಷ್ಟಿ ಬಿದ್ದ ಕೂಡಲೆ ಭವದುಃಖಗಳು ದೂರವಾಗಿ ಮೋಕ್ಷ ಸಾಧನೆಯಾಗುತ್ತದೆ ಎಂದು ದಾಸರು ಭಾವಿಸಿದ್ದಾರೆ.

## ಕೀರ್ತನೆ-೫೪

**ನುಡಿ-೧ : ಮಿಥ್ಯೆ ಎಂಬುದು ಬಲ್ಲೆ.....:** ಮಿಥ್ಯೆ ಎಂದರೆ ಅಸತ್, ಸುಳ್ಳು ಎಂದು ಅರ್ಥವಲ್ಲ. ಭಗವಂತನ ಸ್ವಾತಂತ್ರ್ಯ ಮತ್ತು ಸಾಮರ್ಥ್ಯಕ್ಕೆ ಹೋಲಿಸಿದಾಗ ಮನುಷ್ಯನ ಪ್ರಯತ್ನಗಳು ಅರ್ಥಹೀನ ಮತ್ತು ವ್ಯರ್ಥ ಎನಿಸುತ್ತದೆ. ಅವನ ಅನುಗ್ರಹವಿಲ್ಲದೆ ಮಾಡುವ ಎಲ್ಲ ಪ್ರಯತ್ನಗಳು ಕೇವಲ ಶ್ರಮ ದಣಿವು ಅಷ್ಟೆ.

## ಕೀರ್ತನೆ-೫೬

**ನುಡಿ-೨ : ಆರುನಾಲ್ಕು ತತ್ವ :** ಚತುರ್ವಿಂಶತಿ ತತ್ವಗಳು.

**ಆನಂದ ಚಿತ್ಸ್ವಚುರ ಅನುರೂಪ :** ಮನಸ್ಸಿನ ಸಂತೋಷವನ್ನು ಅಧಿಕಗೊಳಿಸಬಲ್ಲವನು

## ಕೀರ್ತನೆ-೫೭

**ನುಡಿ-೧ : ಪದುಮ ಮುಕ್ತರು :** ಬ್ರಹ್ಮ, ಲಕ್ಷ್ಮಿ ಮತ್ತು ಆದಿಶೇಷ ಇವರು ಪದ್ಮ ನಾಮಕರು. ಮುಕ್ತರು ಎಂದರೆ ಪುನರ್ಜನ್ಮವಿಲ್ಲದವರು. ಸಾಯುಜ್ಯ, ಸಾಲೋಕ್ಯ, ಸಾಮೀಪ್ಯ ಮುಕ್ತಿಯನ್ನು ಪಡೆದವರು.

**ನುಡಿ-೨ : ಅಂಧ ತಮಸ್ಸಿನ ಭೋಗ :** ದಟ್ಟವಾದ ಕತ್ತಲೆ ಅಥವಾ ಅಜ್ಞಾನದ ಸುಖ ಭ್ರಮೆ.

**ನುಡಿ-೩ : ಭಕ್ತಿಯೋಗ :** ಭಕ್ತಿಯಿಂದ ಭಗವಂತನ ಪ್ರೀತಿ, ಸ್ನೇಹ, ಪ್ರೇಮ, ಕರುಣೆ, ಬಂಧವ್ಯ ಇವುಗಳನ್ನು ಸಾಧಿಸುವುದು.

## ಕೀರ್ತನೆ-೫೯

**ನುಡಿ-೨ : ಭಿನ್ನಸುಖಮೂಲ :** ಲೌಕಿಕ ಸುಖಕ್ಕಿಂತ ವಿಭಿನ್ನವಾದ ವಿಲಕ್ಷಣವಾದ ಸುಖವೇ ಭಿನ್ನ ಸುಖ. ಇದೇ ಮೋಕ್ಷ ಸುಖ. ಈ ಮೋಕ್ಷಸುಖಕ್ಕೆ ಕಾರಣಕರ್ತನಾದ ಶ್ರೀಹರಿಯೆ ಭಿನ್ನಸುಖ ಮೂಲ.

**ನುಡಿ-೩ : ಮೃತ್ಯೋವದನ ಸ್ಥಿತರು :** ಮೃತ್ಯುವಿನ ಕಡೆಗೆ ಮುಖ ಮಾಡಿದವರು.

## ಕೀರ್ತನೆ-೬೪

**ನುಡಿ-೨ : ಒದ್ದವಗೆ ಶಿಕ್ಷಿಸದೆ ಬೈದವಗೆ ಗತಿಯಿತ್ತೆ...... :** ಒದ್ದವನು=ಭೃಗುಋಷಿ, ಬೈದವನು=ಶಿಶುಪಾಲ, ನಿದ್ದೆಮಾಡುವವನು=ಮುಚುಕುಂದ, ಯುದ್ಧದಲಿ ಶರದಿಂದ ಹೊಡೆದವನು=ಭೀಷ್ಮ, ಹೀಗೆ ಶತ್ರು ಮಿತ್ರರನ್ನು ಒಂದೇ ರೀತಿ ನೋಡುವ ಭಗವಂತ ವಿಶ್ವಪ್ರೇಮಿ.

## ಕೀರ್ತನೆ-೬೫

**ನುಡಿ-೧ : ಭಿನ್ನಸ್ಮೃತಿ ದುಸ್ಸಂಗ ಎಂದೆಂದು ಕೊಡದಿರು :** ಸ್ಮೃತಿ ಎಂದರೆ ತಿಳಿದಿದ್ದನ್ನು ಸ್ಮರಿಸುವಿಕೆ. ಇಲ್ಲಿ ಶಾಸ್ತ್ರಜನ್ಯವಾದ ಜ್ಞಾನ ಸ್ಮರಣೆಯನ್ನು ಸ್ಮೃತಿ ಎನ್ನಲಾಗಿದೆ. ಯಾವುದು ನಿಷಿದ್ಧ, ಯಾವುದು ಅಧರ್ಮ ಎಂಬ ಜ್ಞಾನ ಸ್ಮರಣೆಯಿಲ್ಲದಿರುವುದೇ ಭಿನ್ನಸ್ಮೃತಿ. ಇಂಥ ಭಿನ್ನಸ್ಮೃತಿಯ ಸಹವಾಸ ಬೇಡ ಎಂಬುದು ದಾಸರ ಅಪೇಕ್ಷೆ.

## ಕೀರ್ತನೆ-೬೬

**ನುಡಿ-೧ : ಮಹಿದಾಸ ಹರಿದಾಸ್ಯ ಮಹಪದವಿ ಕರುಣಿಸಯ್ಯ :** ಮಹಿ ಎಂದರೆ ಲಕ್ಷ್ಮಿ ಎಂದು ಅರ್ಥ. ಮಹಿಮಾವಂತರಾದ ಲಕ್ಷ್ಮಿ ಬ್ರಹ್ಮಾದಿಗಳನ್ನು ದಾಸರನ್ನಾಗಿ ಉಳ್ಳ ಶ್ರೀಹರಿ "ಮಹಿದಾಸ ಪೂಜ್ಯ ಚರಣ". ಇಂಥ ಶ್ರೀಹರಿಯ ದಾಸ್ಯವನ್ನು ಮಹಪದವಿ ಎಂದು ದಾಸರು ಭಾವಿಸುತ್ತಾರೆ. ಹರಿದಾಸ್ಯದ ಈ ಮಹಪದವಿ ದೊರೆಯುವುದಕ್ಕೂ ಹರಿ ಕರುಣೆ ಬೇಕು.

**ನುಡಿ-೨ : ಪಂಚಬೇಧ ಜ್ಞಾನ :** ಜೀವ ಜೀವಕೆ ಭೇದ, ಜೀವ ಜಡಕೆ ಭೇದ, ಜಡ ಜಡಕೆ ಭೇದ, ಜಡ ಈಶ್ವರ ಭೇದ, ಜೀವ ಈಶ್ವರ ಭೇದ.

**ಪಂಚಾತ್ಮ :** ಸತ್, ಚಿತ್, ಆನಂದ ನಿತ್ಯಾತ್ಮ, ಪರಿಪೂರ್ಣಾತ್ಮ ಎಂದು ಕರೆಸಿಕೊಳ್ಳುತ್ತಾನೆ. ಅಲ್ಲದೆ ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ, ನಾರಾಯಣರೆಂಬ ಪಂಚರೂಪಾತ್ಮಕನೂ ಆಗಿದ್ದಾನೆ.

## ಕೀರ್ತನೆ-೭೦

**ನುಡಿ-೧ : ಶಶ್ವದೇಕ=ಶಶ್ವತ್+ಏಕ** = ಒಂದೇ ರೀತಿ ಇರುವವನೂ ನಿರ್ವಿಕಾರನಾದವನೂ ಆದ ಶ್ರೀಹರಿ.

**ನುಡಿ-೩ : ಅಮೃತಾತ್ಮದೇಹಿ ಅಮೃತ ಸೌಭಾಗ್ಯ ಸ್ತ್ರೀಯ :** ಸಾವಿಲ್ಲದ ಶರೀರವನ್ನು ಧರಿಸಿದ ಶ್ರೀಹರಿ ಅಮೃತಾತ್ಮದೇಹಿ ಅಮೃತ ಎಂದರೆ ಲಕ್ಷ್ಮಿ ಎಂಬ ಅರ್ಥವೂ

ಇದೆ. ಅಮೃತಾನಾಮಕಳಾದ ಲಕ್ಷ್ಮಿಯನ್ನು ಹೃದಯಸ್ಥಾನದಲ್ಲಿ ಧರಿಸಿರುವ ಶ್ರೀಹರಿಯು ಅಮೃತಾತ್ಮದೇಹಿ ಶಾಶ್ವತವಾದ ಸುಖಗಳನ್ನು ಅನುಭವಿಸುವುದರಿಂದ ಅಮೃತ ಸೌಭಾಗ್ಯ ಸ್ವೀಯ.

## ಕೀರ್ತನೆ-೭೧

**ಪಲ್ಲವಿ : ಶಿಲೆಯ ನಾರಿಯ ಮಾಡ್ದ** : ಶಿಲೆಯಾಗಿದ್ದ ಅಹಲ್ಯೆಯ ಶಾಪ ವಿಮೋಚನೆ ಮಾಡಿದ ಶ್ರೀ ರಾಮ.

**ನುಡಿ-೩ : ತನುರಥ** : ದೇಹವೆಂಬ ರಥ. ಈ ಶರೀರವೇ ರಥ. ಉಡುವ ವಸ್ತ್ರಗಳೇ ಧ್ವಜ ಪತಾಕೆಗಳು, ದ್ವಾದಶನಾಮಗಳೇ ಧ್ವಜಲಾಂಛನಗಳು, ಮನಸ್ಸೇ ಸಿಂಹಾಸನ, ಬುದ್ಧಿಯೆ ಕಳಶ, ಸಾತ್ವಿಕ ಮನಸ್ಸೇ ಹಗ್ಗಗಳು, ತ್ರಿಗುಣಗಳೇ ರಥದ ಚಕ್ರಗಳು, ಇಂದ್ರಿಯಗಳೇ ಕುದುರೆಗಳು, ಮಾತರಿಶ್ವನಾದ ವಾಯುದೇವರು ಈ ದೇಹರಥದಲ್ಲಿ ಸರ್ವಕಾಲದಲ್ಲೂ ಸೂತನಾಗಿದ್ದು ಶ್ರೀಹರಿಯೆ ರಥಿಕನಾಗಿರುತ್ತಾನೆ, ಎಂದು ಭಾವಿಸಿ ಈ ಶರೀರ ರಥವನ್ನು ಭಗವದರ್ಪಣ ಮಾಡಬೇಕೆಂದು ಜಗನ್ನಾಥದಾಸರು ತಿಳಿಸಿದ್ದಾರೆ.

## ಕೀರ್ತನೆ-೮೦

**ಪಲ್ಲವಿ : ಬುದ್ಧಿಮಾನಿ** : ವಿವೇಕಯುತವಾದ ನಿಶ್ಚಯಾತ್ಮಕವಾದ ಜ್ಞಾನಕ್ಕೆ ಅಭಿಮಾನಿಯಾದ ಲಕ್ಷ್ಮೀದೇವಿ.

**ಅ.ಪ. : ಶ್ರದ್ಧಾದೇವಿ** : ಶ್ರದ್ಧೆ ಎಂದರೆ ಆಸ್ತಿಕ್ಯ ನಿಷ್ಠೆ. ಶ್ರೀಹರಿಯ ಸೇವೆಯಲ್ಲಿ ಅನುಪಮ ನಿಷ್ಠೆ ಹೊಂದಿರುವ ಲಕ್ಷ್ಮೀದೇವಿ.

**ನುಡಿ-೧ : ಮಧ್ವಮುನಿ ಮನದ್ಯೆವನತಿಮುದ್ದು ಪರಿಸರಳೆ** : ಮಧ್ವಾಚಾರ್ಯರ ಆರಾಧ್ಯ ದೈವವಾದ ಶ್ರೀಹರಿಯ ಸನಿಹದಲ್ಲಿ ಸದಾ ಇರುವ ಲಕ್ಷ್ಮೀದೇವಿ.

**ವಿದ್ಯಾ** : ಹರಿಸೇವೆಯಲ್ಲಿ ಭಕ್ತಪೂರ್ವಕವಾದ ಶ್ರದ್ಧೆಯನ್ನು ಹೊಂದಿರುವ ಜ್ಞಾನಸ್ವರೂಪಳಾದ ಲಕ್ಷ್ಮೀದೇವಿ.

## ಕೀರ್ತನೆ-೮೩

**ನುಡಿ-೩ : ನಾರಾಯಣಗೆ ಪುತ್ರ** : ವಾಯುದೇವರು ಕೃತಯುಗದಲ್ಲಿ ಸಂಕರ್ಷಣ ನಾಮಕ ಪರಮಾತ್ಮ, ಜಯನಾಮಕ ಲಕ್ಷ್ಮಿಯ ಮಗನಾಗಿ ಜನಿಸಿದರೆಂಬ ಪುರಾಣ ಕಥೆಯ ಉಲ್ಲೇಖ ಇದು.

**ನುಡಿ–೪ : ಕಾಮರೂಪ** : ಬೇಕಾದ ರೂಪವನ್ನು ಧರಿಸಬಲ್ಲವನು. ಆಂಜನೇಯ ತನ್ನ ಇಷ್ಟದಂತೆ ದೇಹದ ಆಕಾರವನ್ನು ಹಿಗ್ಗಿಸುವ ಅಥವಾ ಕುಗ್ಗಿಸುವ ಸಾಮರ್ಥ್ಯವನ್ನು ಹೊಂದಿದ್ದರಿಂದ ಅವನು ಕಾಮರೂಪಿ. ಅವನು ಸುಂದರಮೂರ್ತಿಯೂ ಆಗಿದ್ದರಿಂದ ಕಾಮರೂಪಿ.

**ನುಡಿ–೧೨ : ಶಿಶುಭಾವದಲಿ ನೀನು ಶತಶೃಂಗಗಿರಿವಡೆದು** ; ಭೀಮಸೇನ ಎಳೆಯ ಮಗುವಾಗಿದ್ದಾಗ ಕುಂತಿಯ ಮಡಿಲಿನಿಂದ ಉರುಳಿ ಒಂದು ಪರ್ವತದ ಮೇಲೆ ಬಿದ್ದನಂತೆ. ಆ ಪರ್ವತ ನೂರು ಚೂರಾಯಿತು. ಆ ಪರ್ವತಕ್ಕೆ ಶತಶೃಂಗಗಿರಿ ಎಂದು ಹೆಸರು ಬಂತು.

## ಕೀರ್ತನೆ–೮೪

**ಅ.ಪ.. : ದೇಹ ಚತುರದಿ ಇದ್ದು** : ಸ್ಥೂಲ, ಸೂಕ್ಷ್ಮ, ಕಾರಣ, ಸಾಕ್ಷೀಭೂತ ಈ ದೇಹಗಳಲ್ಲಿ ವಾಸಮಾಡುವ ವಾಯುದೇವರು.

**ನುಡಿ–೭ : ಶ್ರೀ ಲಕ್ಷ್ಮಿ ಹರಿಪುತ್ರ** : (ನೋಡಿ ಟಿಪ್ಪಣಿ ಕೀ.೮೩)
ನಾರಾಯಣಗೆ ಪುತ್ರ.

## ಕೀರ್ತನೆ–೯೨

**ಪಲ್ಲವಿ : ಭವಸಿಂಧು ಶೋಷಿಪೇಕ್ಷಣ** : ಸಂಸಾರಗಳ, ಕಷ್ಟಗಳ ಪ್ರವಾಹವನ್ನು ಬತ್ತುವಂತೆ ಮಾಡಬಲ್ಲ ದೃಷ್ಟಿಯುಳ್ಳವನು.

## ಕೀರ್ತನೆ–೯೬

**ನುಡಿ–೨ : ಭಾರತೀಪತಿ ಪದವನ್ನೈದುವ ಮಹಾತ್ಮ** : ವಾದಿರಾಜರನ್ನು ಭಾವಿ ಸಮೀರರೆಂದು ಭಾವಿಸುತ್ತಾರೆ.

## ಕೀರ್ತನೆ–೯೭

**ಅ.ಪ. : ಜಯದೇವಿಪತಿ** : ಜಯಾ ನಾಮಕ ಲಕ್ಷ್ಮೀದೇವಿಯ ಪತಿಯಾದ ಸಂಕರ್ಷಣನಾಮಕ ಪರಮಾತ್ಮ.

**ನುಡಿ–೧ : ಅಮರೇಶ ಸ್ವರ್ಗಪರ ತೃಣಮಾಡಿ** : ಜಯತೀರ್ಥರನ್ನು ಇಂದ್ರಾಂಶರೆಂದು ಭಾವಿಸುತ್ತಾರೆ. ಇಂದ್ರಾಂಶನಾದ ಅರ್ಜುನ ದ್ವಾಪರದಲ್ಲಿ ಕೃಷ್ಣನ ಸೇವೆ ಮಾಡಿದ. ಕಲಿಯುಗದಲ್ಲಿ ಮಧ್ವಾಚಾರ್ಯರ ಗ್ರಂಥಗಳನ್ನು ಹೊರುವ ಎತ್ತಾಗಿ ಹುಟ್ಟಿದ. ಮತ್ತೆ ಜಯತೀರ್ಥರಾಗಿ ಜನಿಸಿ ಮಧ್ವರ ಗ್ರಂಥಗಳಿಗೆ ಟೀಕೆ ಬರೆಯುವ ಕಾರ್ಯವೆಸಗಿದ ಎಂಬ ನಂಬಿಕೆಯನ್ನು ಇಲ್ಲಿ ನಿರೂಪಿಸಲಾಗಿದೆ.

**ನುಡಿ–೧ : ಅಮಿತಮತಿ** : ಯಾವ ಮಿತಿಯೂ ಇಲ್ಲದ ಪೂರ್ಣವಾದ ಜ್ಞಾನವನ್ನು ಹೊಂದಿದ್ದ ಪೂರ್ಣಪ್ರಜ್ಞರಾದ ಮಧ್ವಾಚಾರ್ಯರು.

## ಕೀರ್ತನೆ–೧೦೨

**ಪಲ್ಲವಿ : ದಂತಿವರದನ ಪ್ರಪೌತ್ರ** : ಇಂದ್ರದುಮ್ನ ಗಜರಾಜನಾಗಿ ಜನಿಸಿ ನಕ್ರದ ಬಾಧೆಗೆ ಸಿಲುಕಿದಾಗ ಅದನ್ನು ಪರಿಹಾರ ಮಾಡಿದವನು ಶ್ರೀಹರಿ. ಆದ್ದರಿಂದ ಅವನು "ದಂತಿವರದ". ಶ್ರೀಹರಿಯ ನಾಭಿಕಮಲದಿಂದ ಜನಿಸಿದ ಬ್ರಹ್ಮ ಹರಿಯ ಪುತ್ರ. ಬ್ರಹ್ಮನ ಹಣೆಯಿಂದ ಜನಿಸಿದ ಶಿವ ಶ್ರೀಹರಿಯ ಪೌತ್ರ. ಶಿವನ ಮಗನಾದ ಗಣಪತಿ ಶ್ರೀಹರಿಯ ಪ್ರಪೌತ್ರ ಎನಿಸಿಕೊಳ್ಳುತ್ತಾನೆ.

## ಕೀರ್ತನೆ–೧೦೬

**ನುಡಿ–೩ : ಸಾಲುಶಿರನ ಕೀಟವೆಂದು ಬಾಲದಲ್ಲಿ ತಂದ ವೀರ** : ವಾನರ ರಾಜನಾದ ವಾಲಿ ಮತ್ತು ದೈತ್ಯರಾಜನಾದ ರಾವಣ ಪರಸ್ಪರ ಶತ್ರುಗಳು. ವಾಲಿಯ ಸಾಮರ್ಥ್ಯದೆದುರು ದಶಕಂಠನಾದ ರಾವಣ ಕೇವಲ ಒಂದು ದೈತ್ಯಕೀಟ. ಒಮ್ಮೆ ರಾವಣನ್ನು ಸೋಲಿಸಿ ಅವನನ್ನು ತನ್ನ ಬಾಲದಲ್ಲಿ ಸುತ್ತಿ ತಂದ ವಾಲಿ ತನ್ನ ಮಗನಾದ ಅಂಗದನ ತೊಟ್ಟಿಲಿಗೆ ಆಟಿಕೆಯ ವಸ್ತುವಿನಂತೆ ಕಟ್ಟಿದನಂತೆ.

## ಕೀರ್ತನೆ–೧೧೬

**ನುಡಿ–೫ : ಗರುವ ಪಾರ್ಥನು ಅಂದು ಗಂಗಾಶಾಪದಲಿ ಅಸುವ ತೊರೆದು** : ಜೈಮಿನಿ ಭಾರತದಲ್ಲಿ ಬರುವ ಜ್ವಾಲೆಯ ವೃತ್ತಾಂತದ ಉಲ್ಲೇಖ ಇದು. ಜ್ವಾಲೆಗೆ ಅರ್ಜುನನ ಮೇಲೆ ದ್ವೇಷ. ಅದನ್ನು ಗಂಗೆಯ ಮೂಲಕ ಅವಳು ತೀರಿಸಿಕೊಂಡಳು. ಒಮ್ಮೆ ಗಂಗಾನದಿಯನ್ನು ದಾಟುವಾಗ ಪುತ್ರರಿಲ್ಲದವರನ್ನು ಸ್ಪರ್ಷಿಸಬಾರದೆಂದು ಗಂಗೆಗೆ ಆಗ್ರಹ ಬರುವಂತೆ ಮಾತನಾಡಿದಳು. ಗಂಗೆಯ ಮಗನಾದ ಭೀಷ್ಮನ ಸಾವಿಗೆ ಅರ್ಜುನನೇ ಕಾರಣ ಎಂದು ಜ್ವಾಲೆಯಿಂದ ತಿಳಿದ ಗಂಗಾದೇವಿ, ಅರ್ಜುನನ ತಲೆಯನ್ನು ಅವನ ಮಗನೇ ಉರುಳಿಸಲಿ ಎಂದು ಶಾಪನೀಡಿದಳು. ಈ ಶಾಪದ ನಿಮಿತ್ತವೇ ಬಭ್ರುವಾಹನ ಅರ್ಜುನನ ಶಿರವನ್ನು ಉರುಳಿಸಿದ.

## ಕೀರ್ತನೆ–೧೩೭

**ನುಡಿ–೩ : ಮದ್ಗುರು ಅಂತರ್ಗತನ** : ರಂಗೇಶವಿಠಲರ ಗುರುಗಳು ನರಸೀಪುರದ ಸುಬ್ಬರಾಯದಾಸರು. ಕರಿಗಿರಿ ಕ್ಷೇತ್ರವೆನಿಸಿದ ದೇವರಾಯನ ದುರ್ಗದಲ್ಲಿ ನೆಲಸಿ ಹರಿಸೇವೆಯಲ್ಲಿ ನಿರತರಾಗಿದ್ದವರು.

## ಕೀರ್ತನೆ-೧೭೨

**ನುಡಿ-೨ : ಪ್ರದ್ಯುಮ್ನ ಜಠರ ಸಂಭೂತೆ: ಪೂರ್ವಭಾರತೆ :** ಸರಸ್ವತಿ ಮತ್ತು ಭಾರತಿದೇವಿಯರು ಕೃತಿನಾಮಕ ಲಕ್ಷ್ಮೀದೇವಿ ಮತ್ತು ಪ್ರದ್ಯುಮ್ನ ನಾಮಕ ನಾರಾಯಣನ ಪುತ್ರಿಯರು. ಸರಸ್ವತಿ ಬ್ರಹ್ಮದೇವರ ಪತ್ನಿ. ಭಾರತಿ ವಾಯುದೇವರ ಪತ್ನಿ. ಸರಸ್ವತಿ ಭಾರತಿಯರು ಸಹೋದರಿಯರು. ಒಂದೇ ದೇವತಾಕಕ್ಷೆಯಲ್ಲಿರುವವರು. ಆದರೆ ಸರಸ್ವತಿ ಭಾರತಿಗಿಂತ ಹಿರಿಯಳು. ದೇವತಾ ತಾರತಮ್ಯದಲ್ಲಿ ಶ್ರೇಷ್ಠಳೂ ಆದ್ದರಿಂದ ಸರಸ್ವತಿಯನ್ನು ಪೂರ್ವಭಾರತೇ ಎಂದು ಕರೆದಿದ್ದಾರೆ. ಸರಸ್ವತಿ ವಿದ್ಯಾಭಿಮಾನಿ ದೇವತೆ. ಭಾರತಿ ಬುದ್ಧ್ಯಾಭಿಮಾನಿ ದೇವತೆ.

## ಕೀರ್ತನೆ-೧೭೫

**ನುಡಿ-೧ : ಮೂರನೆಯ ಯುಗದಲಿ ಧೀರದ್ರುಪದನಧ್ವರದೊಳುದಿಸಿ :** ಶಿವಕನೆ, ಇಂದ್ರಸೇನ, ದ್ರೌಪದಿ, ಕಾಳಿ, ಇವು ಭಾರತಿದೇವಿಯ ಅವತಾರ ನಾಮಗಳು. ಶ್ರೀಹರಿಯ ಸೇವೆಗೆ ವಾಯುದೇವರು ಅವತಾರ ಮಾಡಿದಾಗಲೆಲ್ಲಾ ಭಾರತೀದೇವಿಯೂ ಅವತಾರ ಮಾಡುತ್ತಾಳೆ. ಮೂರನೇ ಯುಗವಾದ ದ್ವಾಪರಯುಗದಲ್ಲಿ ಭಾರತಿದೇವಿ ದ್ರುಪದರಾಜನ ಮಗಳಾಗಿ ಅಗ್ನಿಕುಂಡದಲ್ಲಿ ಜನಿಸಿದಳು. ಈ ಅಗ್ನಿಪುತ್ರಿ ದ್ರೌಪದಿ ಮತ್ತು ವಾಯುಪುತ್ರ ಭೀಮ ಇವರೇ ಕುರುಕುಲ ಕ್ಷಯಕ್ಕೆ ಕಾರಣರಾದರು.

## ಕೀರ್ತನೆ-೧೭೬

**ನುಡಿ-೧ : ದಾಕ್ಷಿಣ್ಯ ಲವಲೇಶವಿಲ್ಲವೋ ನಿನಗೆ :** ರುದ್ರ ಬ್ರಹ್ಮನ ಹಣೆಯಿಂದ ಜನಿಸಿದ "ವಿರಿಂಚಿತನಯ". ಬ್ರಹ್ಮ ತಾನೇ ಶ್ರೇಷ್ಠನೆಂದು ವೇದಗಳನ್ನು ನಿಂದಿಸಿದಾಗ ರುದ್ರ ಭೈರವನನ್ನು ಸೃಜಿಸಿ ಬ್ರಹ್ಮನ ಐದನೆಯ ತಲೆಯನ್ನು ಕತ್ತರಿಸಿ ಅವನ ಗರ್ವವನು ಮುರಿದ. ಹರಿಯ ಮಗನಾದ ಮನ್ಮಥ ರುದ್ರನಿಗೆ ಚಿಕ್ಕಪ್ಪ. ದಕ್ಷ ಪ್ರಜಾಪತಿ ರುದ್ರನ ಮಾವ. ಇವರೆಲ್ಲ ರುದ್ರನಿಂದ ಶಿಕ್ಷೆಯನ್ನು ಅನುಭವಿಸಿದವರೇ. ತಪ್ಪಿತಸ್ಥರನ್ನು ಶಿಕ್ಷಿಸುವಾಗ ತಂದೆ, ಚಿಕ್ಕಪ್ಪ, ಮಾವ ಎಂಬ ಯಾವ ದಾಕ್ಷಿಣ್ಯವೂ ಇಲ್ಲದೆ ವರ್ತಿಸುವವನು ರುದ್ರ.

## ಕೀರ್ತನೆ-೧೭೭

**ನುಡಿ-೩ : ಪರಮಭಾಗವತನೀನೆ :** ಭಗವಂತನಾದ ಹರಿಯ ಶ್ರೇಷ್ಠತೆಯನ್ನು ಒಪ್ಪಿ ಅವನನ್ನು ಸರ್ವೋತ್ತಮನೆಂದು ಆರಾಧಿಸುವವರೇ ಭಾಗವತರು. ರುದ್ರದೇವರು ಇಂಥ ಭಾಗವತೋತ್ತಮರೆಂದು ದಾಸರು ಭಾವಿಸುತ್ತಾರೆ.

## ಕೀರ್ತನೆ-೧೮೨

**ಅ.ಪ. : ಶಿರೀಶಪುರದ ಸಿರಿ ಶೇಷದಾಸಾಚಾರ್ಯರು** : ಶಿರೀಶಪುರ ಎಂದರೆ ಬಾಗೆಪಲ್ಲಿ. ಬಾಗೇಪಲ್ಲಿ ಶೇಷದಾಸರು ಸ್ವರ್ಗಸ್ಥರಾದ ಸಂದರ್ಭದಲ್ಲಿ ರಚಿತವಾದ ಹರಿದಾಸ ಸ್ತುತಿ ಇದು. ತಂದೆ ಮುದ್ದು ಮೋಹನದಾಸರ ಮೊದಲ ಶಿಷ್ಯರಾಗಿ ೧೯೦೩ರಲ್ಲಿ ಪ್ರಾಣನಾಥವಿಠಲ ಎಂಬ ಅಂಕಿತ ಪಡೆದು ದಾಸರು ೧೯೨೪ರಲ್ಲಿ ಸ್ವರ್ಗಸ್ಥರಾದರು. ದಾಸರು ರಚಿಸಿದ "ರಮಾ ಸಮುದ್ರನ ಕುಮಾರಿ ನಿನ್ನ ಸರಿಸಮಾನರ್‍ಯಾರಮ್ಮ" ಎಂಬ ಲಕ್ಷ್ಮೀಸ್ತುತಿ ತುಂಬ ಜನಪ್ರಿಯವಾಗಿದ್ದ ಕೀರ್ತನೆ. ಇದನ್ನೇ ಅನುಕರಿಸಿ ರಂಗೇಶವಿಠಲರು "ಉಮಾಹಿಮಗಿರಿ ಕುಮಾರಿ ಸಮಸ್ತ ಸಮಾನ ಸುಗುಣ ವಂದ್ಯೆ" ಎಂಬ ಕೀರ್ತನೆಯನ್ನು, (ಕೀ.೧೭೮) ದಾಸರ ಲಕ್ಷ್ಮೀನಾರಾಯಣ ರಾಯರು "ಹಿಮಾಚಲೇಂದ್ರನ ಕುಮಾರಿ ಶಂಕರಿ" ಎಂಬ ಕೀರ್ತನೆಯನ್ನು ರಚಿಸಿದ್ದಾರೆ. (ಕೀ.೨೬೬)

## ಕೀರ್ತನೆ-೧೮೩

ಹರಿದಾಸರು ಅವತಾರ ಪುರುಷರೆಂಬುದನ್ನು ಈ ಕೀರ್ತನೆಯ ಒಂದೊಂದು ನುಡಿಯಲ್ಲೂ ಪ್ರಸ್ತಾಪಿಸಲಾಗಿದೆ.

**ನುಡಿ-೧** : ಇಂದ್ರಾಂಶನಾದ ಅರ್ಜುನ ಕಲಿಯುಗದಲ್ಲಿ ಮಧ್ವಾಚಾರ್ಯರ ಪುಸ್ತಕಗಳನ್ನು ಹೊರುವ ವೃಷಭನಾಗಿ ಜನಿಸಿ ಮುಂದಿನ ಜನ್ಮದಲ್ಲಿ ಜಯತೀರ್ಥಯತಿ ಎನಿಸಿಕೊಂಡ.

**ನುಡಿ-೨** : ಹರಿಯನ್ನು ಕುರಿತು ಉಗ್ರತಪಸ್ಸು ಮಾಡಿದ ಧ್ರುವನ ಅಂಶವೇ ಶ್ರೀಪಾದರಾಜರು.

**ನುಡಿ-೩** : ನರಹರಿಯನ್ನು ಒಲಿಸಿದ ಪ್ರಹ್ಲಾದನ ಅಂಶವೇ ವ್ಯಾಸರಾಜರು.

**ನುಡಿ-೪** : ಭಾವಿ ಸಮೀರ ಪದವಿಗೆ ಅರ್ಹರಾದವರು ವಾದಿರಾಜರು.

**ನುಡಿ-೬** : ಬ್ರಹ್ಮನ ಮಗನಾದ ನಾರದನ ಅಂಶವೇ ಪುರಂದರದಾಸರು.

**ನುಡಿ-೫** : ವ್ಯಾಸರಾಜರ ಪುನರವತಾರವೇ ರಾಘವೇಂದ್ರರು.

**ನುಡಿ-೭,೮,೯**: ವಿಜಯದಾಸರು ಭೃಗು ಮಹರ್ಷಿಗಳ ಅಂಶ. ಗೋಪಾಲದಾಸರು ಗಣೇಶ ಅಂಶರು, ಪ್ರಹ್ಲಾದನ ತಮ್ಮನಾದ ಸಹ್ಲಾದನ ಅಂಶವೇ ಜಗನ್ನಾಥದಾಸರು ಎಂಬ ಸಂಪ್ರದಾಯಸ್ಥರ ಭಾವನೆಗಳನ್ನು ಇಲ್ಲಿ ನಿರೂಪಿಸಲಾಗಿದೆ.

**ನುಡಿ-೬ : ಜಲಜಭವನೂರುಭವ** : ಬ್ರಹ್ಮರ ಮಾನಸಪುತ್ರರಲ್ಲಿ ಒಬ್ಬನಾದ ನಾರದ ಬ್ರಹ್ಮನ ತೊಡೆಯಿಂದ ಜನಿಸಿದವನು.

## ಕೀರ್ತನೆ-೨೧೮

ನುಡಿ-೨ : **ಶಕ್ರ ಪೂಜಿಸಿದನು ವೃತ್ರನ ವಧೆಗಿನ್ನು** : ದೈತ್ಯಗುರುವಾದ ಶುಕ್ರಾಚಾರ್ಯನ ಮಗ ತ್ವಷ್ಟ. ಇವನು ಇಂದ್ರನನ್ನು ಕೊಲ್ಲುವುದಕ್ಕಾಗಿ ವೃತ್ರನನ್ನು ಸೃಷ್ಟಿಸಿದ. ವೃತ್ರಾಸುರ ಇಂದ್ರನೊಂದಿಗೆ ಯುದ್ಧ ಹೂಡಿದ. ಗಣಪತಿಯ ಅನುಗ್ರಹದಿಂದ ಇಂದ್ರ ವೃತ್ರನನ್ನು ಸಂಹರಿಸಿದ.

## ಕೀರ್ತನೆ-೨೨೦

ನುಡಿ-೧ : **ದುರ್ಯೋಧನನು ಮದಡನಾದನು** : ಕುರುಕ್ಷೇತ್ರದ ಯುದ್ಧ ನಿಶ್ಚಯವಾದಾಗ ದುರ್ಯೋಧನ ಮತ್ತು ಅರ್ಜುನ ಇಬ್ಬರೂ ಕೃಷ್ಣನ ಸಹಾಯವನ್ನು ಕೋರಿ ಬಂದರು. ತಾನು ಒಂದು ಕಡೆ. ಬಲರಾಮ ಕೃತವರ್ಮ ಸಹಿತವಾದ ನಾರಾಯಣ ಮಹಾಸೇನೆ ಮತ್ತೊಂದು ಕಡೆ, ಎಂದು ಕೃಷ್ಣ ಸೈನ್ಯನನ್ನು ವಿಭಾಗಿಸಿದ ಯಾವುದನ್ನು ಬೇಕಾದರೂ ಆಯ್ಕೆ. ಮಾಡಿಕೊಳ್ಳುವಂತೆ ಅರ್ಜುನ, ದುರ್ಯೋಧನರಿಗೆ ಹೇಳಿದ. ದಡ್ಡ ದುರ್ಯೋಧನ ಕೃಷ್ಣನನ್ನು ಬಿಟ್ಟು ಸೈನ್ಯವನ್ನು ಆಯ್ಕೆಮಾಡಿಕೊಂಡ.

## ಕೀರ್ತನೆ-೨೨೧

ನುಡಿ-೧ : **ನೊಂದು ಕೌಂಡಿಣ್ಯವನು ಮುಂದೋರದಲಿರೆ** : ಇದು ಅನಂತವ್ರತದ ಕಥೆ. ಕೌಂಡಿಣ್ಯನ ಪತ್ನಿ ಸುಶೀಲೆ. ಅವಳ ಕೈಯಲ್ಲಿದ್ದ ಅನಂತನ ದಾರವನ್ನು ನೋಡಿದ ಕೌಂಡಿಣ್ಯ ತನ್ನ ಪತ್ನಿ ಯಾರನ್ನೋ ವಶಪಡಿಸಿಕೊಳ್ಳಲು ಆ ದಾರವನ್ನು ಧರಿಸಿದ್ದಾಳೆಂದು ಭಾವಿಸಿದ. ಕ್ರೋಧದಿಂದ ಅದನ್ನು ಕಿತ್ತು ಬೆಂಕಿಗೆ ಹಾಕಿದ. ಸುಶೀಲೆ ಮಾಡಿದ ವ್ರತದ ಫಲವಾಗಿ ಲಭ್ಯವಾಗಿದ್ದ ಐಶ್ವರ್ಯವೆಲ್ಲವೂ ನಾಶವಾಯಿತು. ತನ್ನ ತಪ್ಪಿಗೆ ಪಶ್ಚಾತ್ತಾಪಪಡುತ್ತಾ ಹಲವಾರು ವರ್ಷ ಕಾಡುಗಳಲ್ಲಿ ಅಲೆದು ಪ್ರಜ್ಞಾಹೀನನಾಗಿ ಬಿದ್ದಿದ್ದ ಕೌಂಡಿಣ್ಯನಿಗೆ ಭಗವಂತ ಪ್ರತ್ಯಕ್ಷನಾದ.

## ಕೀರ್ತನೆ-೨೨೭

ಶ್ರೀನಿವಾಸ ಕಲ್ಯಾಣದ ಕಥೆಯನ್ನು ಈ ಕೀರ್ತನೆಯಲ್ಲಿ ನಿರೂಪಿಸಲಾಗಿದೆ. ಬೇಟೆಗೆ ಹೋದ ಶ್ರೀನಿವಾಸ ಪದ್ಮಾವತಿಯನ್ನು ಮೋಹಿಸಿದ್ದು, ಬಕುಳಾದೇವಿ ಕೊರವಂಜಿ ವೇಷಧರಿಸಿದ್ದು ಮೊದಲಾದ ಸಂಗತಿಗಳನ್ನು ನಿರೂಪಿಸಲಾಗಿದೆ.

## ಕೀರ್ತನೆ-೨೨೯

ನುಡಿ-೧ : **ಅನ್ಯಯರ ಬನ್ನಬಡಿಸುತ್ತಿದ್ದ ಖಳ** : ಬೇಡನಾಗಿ ತನ್ನ ಕ್ರೌರ್ಯದಿಂದ ಜನರಿಗೆ ತೊಂದರೆ ನೀಡುತ್ತಿದ್ದ ವಾಲ್ಮೀಕಿ ಸಪ್ತರ್ಷಿಗಳ ಸೂಚನೆಯಂತೆ ರಾಮಮಂತ್ರವನ್ನು ಜಪಿಸಿ ವಾಲ್ಮೀಕಿ ಮುನಿಯಾದ ಸಂದರ್ಭ.

## ಕೀರ್ತನೆ–೨೩೨

ಶ್ರೀಹರಿಗೂ ಶಾಂತವಾಗಿ ನಿದ್ರೆ ಮಾಡಲು ಅವಕಾಶವಿಲ್ಲ. ಅವನಿಗೂ ಹೆಂಡತಿ ಮಕ್ಕಳ ಕಾಟ, ಗಲಾಟೆ ಮತ್ತು ಚಿಂತೆಗಳು ನಿದ್ರಾಭಂಗವನ್ನು ಮಾಡುತ್ತವೆ. ಎಂದು ಹೇಳುವ ನಿಂದಾಸ್ತುತಿ ಇದು.

## ಕೀರ್ತನೆ–೨೪೭

**ನುಡಿ–೩ : ವೈರೋಚನಿ ದರ್ಪಹರ :** ಪ್ರಹ್ಲಾದನ ಮಗ ವಿರೋಚನ. ವಿರೋಚನ ಮಗನಾದ ಬಲಿಚಕ್ರವರ್ತಿ ವೈರೋಚನಿ. ಇವನನ್ನು ಪಾತಾಳಕ್ಕೆ ತುಳಿದ ಶ್ರೀಹರಿ ವೈರೋಚನಿ ದರ್ಪಹರ.

## ಕೀರ್ತನೆ–೨೪೮

**ನುಡಿ–೨ : ಹತವೆ ಮಾಡುತಲಿದ್ದ ಕಿತವ :** ಬೇಟೆಯನ್ನಾಡಿ ಪ್ರಾಣಿಗಳನ್ನು ಕೊಲ್ಲುತ್ತಿದ್ದ ವಾಲ್ಮೀಕಿ.

## ಕೀರ್ತನೆ–೨೫೧

**ನುಡಿ : ಕುಡಿಗಣ್ಣಿನ ಜಲ ಸಡಿಲಲು ಕಳಶದಿ ಒಡನೆ ಜನಿಸಿದಂಥ ಮಡದಿ :** ದೇವ ದಾನವರು ಪಾಲ್ಗಡಲನ್ನು ಕಡೆದಾಗ ಅಮೃತಕಲಶ ಹೊರಬಂತು. ವಿಷ್ಣು ಅದನ್ನು ಕೈಲಿ ಹಿಡಿದು ಆನಂದಭರಿತನಾದ. ಅವನ ಕಣ್ಣುಗಳಿಂದ ಮಿಡಿದ ಆನಂದ ಬಾಷ್ಪಗಳು ಆ ಕಲಶದಲ್ಲಿ ಬಿದ್ದು ಅದರಿಂದ ಸರ್ವಲಕ್ಷಣ ಸಂಪನ್ನೆಯಾದ ಶ್ರೀ ತುಲಸಿ ಜನಿಸಿದಳು ಬ್ರಹ್ಮಾದಿ ದೇವತೆಗಳು ಲಕ್ಷ್ಮಿಯೊಂದಿಗೆ ತುಲಸಿಯನ್ನು ಶ್ರೀ ತುಲಸಿಯನ್ನು ಶ್ರೀಹರಿಗೆ ಅರ್ಪಿಸಿದರು ಎಂಬ ಕಥೆಯ ಉಲ್ಲೇಖ ಇದು.

## ಕೀರ್ತನೆ–೨೫೪

**ಅ.ಪ. : ಪಾರಾಶರ ಮತ ವಿಸ್ತರಣ :** ಪರಾಶರ ಮುನಿಯ ಪುತ್ರನಾದ ವೇದವ್ಯಾಸರೇ ಪಾರಾಶರರು. ವೇದವ್ಯಾಸರಿಂದ ರಚಿತವಾದ ಗ್ರಂಥಗಳಿಗೆ ವಿಸ್ತೃತವಾದ ವ್ಯಾಖ್ಯಾನಗಳನ್ನು ಮಾಡಿದ ಮಧ್ವಾಚಾರ್ಯರನ್ನು ಪಾರಾಶರ ಮತ ವಿಸ್ತರಣ ಎಂದು ಕರೆಯಲಾಗಿದೆ.

## ಕೀರ್ತನೆ–೨೫೮

**ನುಡಿ–೪ : ಕ್ಷೀರೋದಧಿಯನಿತ್ತೆ ಪೋರನಿಗೆ :** ವ್ಯಾಘ್ರಪಾದಮುನಿಯ ಮಗನಾದ ಉಪಮನ್ಯು ಬಾಲ್ಯದಿಂದಲೂ ಶಿವಭಕ್ತ. ಹಸುವಿನ ಹಾಲೆಂದರೆ ಅವನಿಗೆ ತುಂಬಾ ಇಷ್ಟ. ಸೋದರಮಾವನ ಮನೆಯಲ್ಲಿ ದನಕಾಯುತ್ತಿದ್ದ ಉಪಮನ್ಯುವಿಗೆ ಹಾಲನ್ನು ಕುಡಿಯುವ

ಸ್ವಾತಂತ್ರವಿರಲಿಲ್ಲ. ಮಗನ ಆಸೆಯನ್ನು ಪೂರೈಸಲಾಗದ ತಾಯಿ ಶಿವನನ್ನು ಕುರಿತು ತಪಸ್ಸು ಮಾಡುವಂತೆ ಹೇಳಿದಳು. ಉಪಮನುವಿಗೆ ಒಲಿದ ಶಿವ ಅವನಿಗೆ ಹಾಲಿನ ಕಡಲಿನ ಆಧಿಪತ್ಯವನ್ನೇ ನೀಡಿದ.

## ಕೀರ್ತನೆ–೨೫೯

**ನುಡಿ–೫ : ಅಜಸುತನಧ್ವರ ಭಜನೆಯ ಕಿಡಿಸಿದ :** ದಕ್ಷಬ್ರಹ್ಮನಿಂದ ಪಾರ್ವತಿಗೆ ಆದ ಅವಮಾನಕ್ಕೆ ಕ್ರೋಧಗೊಂಡ ಶಿವ ವೀರಭದ್ರನನ್ನು ಸೃಷ್ಟಿಸಿ, ದಕ್ಷಬ್ರಹ್ಮನ ಯಾಗವನ್ನು ನಾಶಮಾಡಿ ವಿಜಯ ಸಾಧಿಸಿ ಕೀರ್ತಿಯನ್ನು ಪಡೆದ.

## ಕೀರ್ತನೆ–೨೬೧

**ನುಡಿ–೬ : ಅಷ್ಟಮೂರ್ತಿ :** ರುದ್ರ, ಭವ, ಶರ್ವ, ಈಶಾನ, ಪಶುಪತಿ, ಭೀಮ , ಉಗ್ರ, ಮಹಾದೇವ–ಇವು ಶಿವನ ಅಷ್ಟರೂಪಗಳು. ಅಷ್ಟವಿಭೂತಿ : ಸೃಷ್ಟಿ, ಜಗದ್ರಕ್ಷಣೆ, ಜಗತ್ಪ್ರಳಯಾಧಿಕಾರ ಕೃಪಾನುಗ್ರಹ, ಲೋಕಪ್ರವರ್ತಕ, ರೂಪಪ್ರದರ್ಶಕ, ಪ್ರೇರಕ, ಕಲ್ಯಾಣಕಾರಕ, ಈ ಅಷ್ಟ ಮಹಿಮೆಗಳನ್ನು ಹೊಂದಿದವನು.

## ಕೀರ್ತನೆ–೨೭೧

**ನುಡಿ–೧ : ಊರೆಲ್ಲಿ ತೋರೆಷ್ಟು ದೂರದಲ್ಲಿಹುದೆಂದು....... :** ಶ್ರೀಪಾದರಾಜರ ಪೂರ್ವಾಶ್ರಮದ ಹೆಸರು ಲಕ್ಷ್ಮೀನಾರಾಯಣ. ಬಾಲಕನಾದ ಲಕ್ಷ್ಮೀನಾರಾಯಣ ತನ್ನ ಗೆಳೆಯರೊಂದಿಗೆ ಅಬ್ಬೂರಿನ ಗುಡ್ಡದ ಬಳಿ ದನ ಮೇಯಿಸುತ್ತಿದ್ದ. ಸಂಜೆಯ ಸಮಯದಲ್ಲಿ ಸ್ವರ್ಣವರ್ಣತೀರ್ಥರೆಂಬ ಗುರುಗಳು ಶಿಷ್ಯಸಮೇತರಾಗಿ ಅಲ್ಲಿಗೆ ಬಂದರು. "ಅಬ್ಬೂರು ಇಲ್ಲಿಂದ ಎಷ್ಟು ದೂರವಿದೆ" ಎಂದು ಬಾಲಕನನ್ನು ಪ್ರಶ್ನಿಸಿದರು. "ಸ್ವಾಮಿ ಸೂರ್ಯಾಸ್ತವಾಗುತ್ತಿದೆ. ಮಂದಗತಿಯಲ್ಲಿ ದನಕರುಗಳು ಹಿಂದಿರುಗುತ್ತಿವೆ. ನಾವು ಬಾಲಕರು ಇದನ್ನು ನೋಡಿದರೆ ಊರು ಎಷ್ಟು ಸಮೀಪದಲ್ಲಿದೆಯೆಂದು ತಿಳಿಯುವುದಿಲ್ಲವೇ"? ಎಂದು ಉತ್ತರ ನೀಡಿದ.

**ನುಡಿ–೨ : ಭೂದೇವನನು ಕೊಂದ ಬಾಧೆಗಾರದೆ ನೃಪ....... :** ವಿಜಯನಗರದ ಅರಸರ ಕಾಲದಲ್ಲಿ ತಿರುಪತಿ ದೇವಾಲಯದ ಅರ್ಚಕರು, ದೇವಾಲಯದ ಪರಿಶುದ್ಧತೆಗೆ ವಿರುದ್ಧವಾಗಿ ವರ್ತಿಸುತ್ತಿದ್ದುದನ್ನು ಕಂಡು ನರಸಿಂಹ ಕುಪಿತಗೊಂಡ. ಕೆಲವು ಅರ್ಚಕರನ್ನು ಅವನು ಕೊಂದನೆಂದೂ, ಅನಂತರ ಬ್ರಹ್ಮಹತ್ಯಾದೋಷ ಅವನಿಗೆ ಪ್ರಾಪ್ತವಾಯಿತೆಂದು ಪ್ರತೀತಿ. ತನ್ನ ಅಕಾರ್ಯದಿಂದ ಸಾಳುವ ನರಸಿಂಹ ಶ್ರೀಪಾದರಾಜರಿಗೆ ಶರಣಾಗಿ ದೋಷ ಪರಿಹಾರ ಮಾಡುವಂತೆ ಪ್ರಾರ್ಥಿಸಿದ. ಶ್ರೀಹರಿಯ ಪಾದೋದಕ ಜಲವನ್ನು ಪ್ರೋಕ್ಷಿಸಿ ರಾಜನ ಬ್ರಹ್ಮಹತ್ಯಾ ದೋಷವನ್ನು ಶ್ರೀಪಾದರಾಜರು ಪರಿಹಾರ ಮಾಡಿದರೆಂದು ಶ್ರೀನಿಧಿತೀರ್ಥರು ಶ್ರೀಪಾದರಾಜಾಷ್ಟಕದಲ್ಲಿ ತಿಳಿಸಿದ್ದಾರೆ.

**ನುಡಿ-೩ : ಶಂಕಿಸಿ ದ್ವಿಜವೃಂದ ಆತಂಕಗೊಳುತಲಿರೆ** : ಶಂಖೋದಕದಿಂದ ವಿಪ್ರಹತ್ಯಾದೋಷವನ್ನು ಕಳೆಯಲು ಸಾಧ್ಯವೇ? ಎಂದು ಕೇಳಿದ ಅಪ್ರಬುದ್ಧರ ಪ್ರಶ್ನೆಗೆ ಉತ್ತರವಾಗಿ ಶ್ರೀಪಾದರಾಜರು ನಡೆಸಿದ ಪವಾಡ ಇದು. ಬಿಳಿಯ ಬಟ್ಟೆಯೊಂದನ್ನು ಗೇರೆಣ್ಣೆಯಲ್ಲಿ ಅದ್ದಿ ಅದರ ಕಪ್ಪು ಬಣ್ಣವನ್ನು ನಿವಾರಿಸುವಂತೆ ಶ್ರೀಪಾದರಾಜರು ಕುಹಕಿಗಳಿಗೆ ಹೇಳಿದರು. ಅವರಿಗೆ ಅದು ಸಾಧ್ಯವಾಗಲಿಲ್ಲ. ಶ್ರೀಪಾದರಾಜರು ಶಂಖದಿಂದ ಮಂತ್ರೋದಕವನ್ನು ಪ್ರೋಕ್ಷಿಸಿ "ಕಪ್ಪುವಸನವ ಶುಭ್ರಮಾಡಿದ" ಮಹಿಮಾವಂತರೆಂದು ವ್ಯಾಸರಾಯರು ಹೇಳಿದ್ದಾರೆ.

**ನುಡಿ-೬ : ವ್ಯಾಸರಾಯ ಫಣಿಬಂಧ ನಿವಾರಿಸಿ......**: ಬಾಲಯತಿಗಳಾದ ವ್ಯಾಸರಾಯರು ಶ್ರೀಪಾದರಾಜರ ಶಿಷ್ಯರು. ಮುಳಬಾಗಿಲಿನ ಬಳಿಯ ಗುಹೆಯೊಂದರಲ್ಲಿ ಈ ಬಾಲಯತಿ ಧ್ಯಾನಪರನಾಗಿ ಕುಳಿತಿದ್ದಾಗ ಒಂದು ದೊಡ್ಡ ಸರ್ಪ ಅವರ ದೇಹವನ್ನು ಸುತ್ತಿಕೊಂಡಿತು. ವಿಷಯ ತಿಳಿದ ಶ್ರೀಪಾದರಾಜರು ಅಲ್ಲಿಗೆ ಬಂದು ಸರ್ಪದೊಂದಿಗೆ ಸರ್ಪಭಾಷೆಯಲ್ಲಿಯೇ ಸಂವಾದ ನಡೆಸಿದರು. ಫಣಿಬಂಧವನ್ನು ನಿವಾರಿಸಿದರು.

ಶ್ರೀವ್ಯಾಸರಾಜ ಫಣಿಬಂಧ ನಿವಾರಕಾಯ ।
ತದ್ಭಾಷಯೈವ ಫಣಿರಾಜ ಸಂತೋಷಕಾಯ॥

ಎಂದು ಶ್ರೀಪಾದರಾಜಾಷ್ಟಕದಲ್ಲಿ ತಿಳಿಸಲಾಗಿದೆ.

## ಕೀರ್ತನೆ-೨೮೭

**ಅ.ಪ. : ಸಾರಭೋಕ್ತ** : ಸಾರ ಎಂದರೆ ಶ್ರೇಷ್ಠ ಎಂದು ಅರ್ಥ. ಸರ್ವವಿಷಯಗಳಲ್ಲೂ ಶ್ರೇಷ್ಠವಾದುದನ್ನು ಮಾತ್ರ ಸ್ವೀಕರಿಸುವುದರಿಂದ ಶ್ರೀಹರಿಯನ್ನು ಸಾರಭೋಕ್ತ ಎನ್ನುತ್ತಾರೆ.

**ನುಡಿ-೧ : ನಿತ್ಯತೃಪ್ತ** : ಸನಾತನನೂ, ನಾಶರಹಿತನೂ ಆಗಿರುವವನು ನಿತ್ಯ. ಯಾವ ಅಪೇಕ್ಷೆಗಳೂ ಇಲ್ಲದೆ ಸಂತೋಷದಿಂದ ಇರುವವನು ತೃಪ್ತ.

## ಕೀರ್ತನೆ-೨೮೮

**ನುಡಿ-೨ : ಪಾಪಕಾರ್ಯವ ಕೊಳಲು ಪುಣ್ಯ ಸಾಧನವೀವ** : ಲಕ್ಷ್ಮೀಶನ ಜೈಮಿನಿ ಭಾರತದ ಚಂದ್ರಹಾಸ ಪ್ರಸಂಗದಲ್ಲಿ ವ್ಯಕ್ತವಾಗಿರುವ ಅಭಿಪ್ರಾಯ ಇದು. ಮೃಗಯಾ ವಿಹಾರಿಯಾಗಿ ಬಂದ ಕುಳಿಂದ ಎಂಬ ಬೇಡರಾಜನಿಗೆ ಚಂದ್ರಹಾಸ ದೊರೆತ ಸಂದರ್ಭದಲ್ಲಿ "ಪಾಪಕೆಳಸಿದೊಡಾಯ್ತು ಪುಣ್ಯಂ" ಎಂದು ಲಕ್ಷ್ಮೀಶ ಹೇಳಿದ್ದಾನೆ. ಅದೇ ಅಭಿಪ್ರಾಯವನ್ನು ಇಲ್ಲಿ ನಿರೂಪಿಸಲಾಗಿದೆ.

## ಕೀರ್ತನೆ–೨೯೪

ವಿದರ್ಭದೇಶಾಧಿಪತಿಯಾದ ಭೀಷ್ಮಕರಾಯನ ಮಗಳು ರುಕ್ಮಿಣಿ. ರುಕ್ಮಿಣಿಯ ಅಣ್ಣ ರುಕ್ಮ, ತನ್ನ ತಂಗಿಯನ್ನು ಶಿಶುಪಾಲನಿಗೆ ಕೊಟ್ಟು ವಿವಾಹ ಮಾಡಬೇಕೆಂದು ಅವನ ನಿರ್ಧಾರ. ರುಕ್ಮಿಣಿಯನ್ನು ಶ್ರೀಕೃಷ್ಣನಿಗೆ ಕೊಟ್ಟು ಮದುವೆ ಮಾಡಬೇಕೆಂದು ಉಳಿದ ಸಹೋದರರ ಅಪೇಕ್ಷೆ. ರುಕ್ಮಿಣಿ ತನಗೆ ಒದಗಿದ ದುರವಸ್ಥೆಯನ್ನು ವಿವರಿಸಿ ಶ್ರೀಕೃಷ್ಣನಿಗೆ ಪತ್ರವನ್ನು ಬರೆದು ಒಬ್ಬ ವಿಪ್ರನ ಮೂಲಕ ಕಳುಹಿಸಿದಳು. ಪತ್ರದೊಂದಿಗೆ ಹೋದ ಬ್ರಾಹ್ಮಣ ಬರುವುದು ತಡವಾದಾಗ ರುಕ್ಮಿಣಿಯ ಮನಸ್ಸಿನಲ್ಲಿ ಉಂಟಾದ ಕಳವಳವನ್ನು ಈ ಕೀರ್ತನೆ ನಿರೂಪಿಸುತ್ತದೆ.

## ಕೀರ್ತನೆ–೨೯೮

**ನಿನ್ನುರದಲೆನಗೆ ಸ್ಥಿರವಾಸಕೆಡೆಯ ನೀಂ ಕರುಣದಿಂದಿತ್ತು ಹರುಷಪಡಿಸುವುದು :** ಸಮುದ್ರಮಥನ ಕಾಲದಲ್ಲಿ ಉದ್ಭವಿಸಿದ ಲಕ್ಷ್ಮೀದೇವಿ ಶ್ರೀಹರಿಯ ಶ್ರೇಷ್ಠತೆಯನ್ನು ಗುರುತಿಸಿ ಅವನನ್ನು ವರಿಸಿದ ಸಂದರ್ಭ ಇದು. ಬ್ರಹ್ಮ, ರುದ್ರಾದಿಗಳೂ ಸೇರಿದಂತೆ ಎಲ್ಲ ದೇವತೆಗಳೂ ಪರತಂತ್ರರೆಂದೂ, ಪರಿಪೂರ್ಣರಲ್ಲವೆಂದೂ ಹೇಳುವ ಲಕ್ಷ್ಮೀದೇವಿ, ಪರಿಪೂರ್ಣನೂ, ಪೂರ್ಣಕಾಮನೂ ಆದ ಶ್ರೀಹರಿಯ ವಕ್ಷಸ್ಥಳದಲ್ಲಿ ಸ್ಥಿರವಾಗಿ ನೆಲೆಸುವ ಅಪೇಕ್ಷೆಯನ್ನು ವ್ಯಕ್ತಪಡಿಸುತ್ತಾಳೆ.

## ಕೀರ್ತನೆ–೩೦೮

**ನುಡಿ–೩ : ಸುರಮಾತೆಗೆ ಕುಂಡಲಿಗಳನಿತ್ತನು :** ಲೋಕ ಕಂಟಕನಾದ ನರಕಾಸುರ ಇಂದ್ರನ ತಾಯಿಯಾದ ಅದಿತಿಯ ಕರ್ಣಕುಂಡಲಗಳನ್ನು ಅಪಹರಿಸಿದ. ನರಕಾಸುರನ ಕೋಟಲೆಯನ್ನು ತಡೆಯಲಾರದೆ ಇಂದ್ರ ಕೃಷ್ಣನಲ್ಲಿ ಮೊರೆಯಿಟ್ಟ. ನರಕಾಸುರನೊಂದಿಗೆ ಹೋರಾಡಿ ಕೃಷ್ಣ ಅವನನ್ನು ಸಂಹರಿಸಿದ. ಅದಿಥಿದೇವಿಯ ಕುಂಡಲಗಳನ್ನು ಹಿಂತಿರುಗಿದ.

## ಕೀರ್ತನೆ–೩೧೧

**ಭಕ್ತರ ಅವಸರಕೆ ಸಿದ್ಧ :** ದೂರ್ವಾಸ ಮುನಿಯ ಆತಿಥ್ಯದ ಸಂದರ್ಭದಲ್ಲಿ ತಮ್ಮನ್ನು ಕಷ್ಟದಿಂದ ಪಾರುಮಾಡಬೇಕೆಂದು ದ್ರೌಪದಿ ಕೃಷ್ಣನನ್ನು ಪ್ರಾರ್ಥಿಸುತ್ತಾಳೆ. ಭಕ್ತನಿಗೆ ಆಪತ್ತೊದಗಿದ ಸಮಯಕ್ಕೆ ಸರಿಯಾಗಿ ಬಂದು ಕಾಪಾಡುವ ಕೃಷ್ಣನ ವ್ಯಕ್ತಿತ್ವ ಚಿತ್ರಣ ಇಲ್ಲಿದೆ.

## ಕೀರ್ತನೆ–೩೧೨

**ನುಡಿ–೧ : ಮಹಾಭಾಗದೇವಹರೆ ಭಾಗವತಪ್ರಿಯು :** ಪಾಂಡವರು ರಾಜಸೂಯಯಾಗ ಮಾಡಿದ ಸಂದರ್ಭದಲ್ಲಿ ಆಗಮಿಸಿದ ಶ್ರೀ ಕೃಷ್ಣನನ್ನು ಧರ್ಮರಾಯ ಸ್ವಾಗತಿಸಿ ಹಲವು ರೀತಿಯಲ್ಲಿ ಸ್ತುತಿಸುತ್ತಾನೆ. ಅತಿಶಯವಾದ ಭಾಗ್ಯಸಮುದಾಯ ಉಳ್ಳವನು

ಮಹಾಭಾಗ. ಭಕ್ತಿ, ಜ್ಞಾನ, ವೈರಾಗ್ಯಗಳಿಂದ ಕೂಡಿ, ಶ್ರವಣ ಕೀರ್ತನಾದಿ ನವವಿಧಭಕ್ತಿಯಿಂದ ಶ್ರೀಹರಿಯನ್ನು ಆರಾಧಿಸುವವರೇ ಭಾಗವತರು. ಇಂಥ ಭಗವದ್ಭಕ್ತರಿಗೆ ಪ್ರಿಯನಾದ ಹರಿ ಭಾಗವತಪ್ರಿಯ.

**ನುಡಿ–೩ : ಯಾಗರಕ್ಷಕನೆ ಯಾಗಫಲಪ್ರದ** : ಶ್ರೀಹರಿಯು ಸರ್ವಜ್ಞನಾದ್ದರಿಂದ ಅವನನ್ನು "ಜ್ಞ"ಎನ್ನುತ್ತಾರೆ. ಅವನನ್ನು ಉದ್ದೇಶಿಸಿ ಮಾಡುವ ಕರ್ಮವೇ ಯಜ್ಞ. ಯಜ್ಞನಾಮಕನಾದ ಶ್ರೀಹರಿ ಯಜ್ಞನಿಯಾಮಕನೂ ಆಗಿದ್ದು, ಯಾಗವನ್ನೂ, ಯಾಗಮಾಡುವ ಯಜಮಾನನ್ನೂ ರಕ್ಷಿಸುತ್ತಾನೆ. "ಯಜ್ಞಮಾತ್ರಾ"ಅಥವಾ "ಯಾಗರಕ್ಷಕ" ಎನಿಸಿಕೊಳ್ಳುತ್ತಾನೆ. ಯಜ್ಞಫಲವನ್ನು ಸ್ವೀಕರಿಸಿ, ಭಕ್ತರ ಜ್ಞಾನ ಕರ್ಮಾನುಸಾರ ಫಲವನ್ನು ಕೊಡುವವನಾದ್ದರಿಂದ ಅವನನ್ನು ಯಾಗಫಲಪ್ರದ ಎನ್ನುತ್ತಾರೆ.

## ಕೀರ್ತನೆ–೩೧೫

**ನುಡಿ–೨ : ನಿನ್ನ ಮಹಿಮೆಗೆ ಎನ್ನೀ ಮಣಿ ಅಧಿಕವೇ** : ಶ್ಯಮಂತಕವೆಂಬ ಮಣಿಗಾಗಿ ಕೃಷ್ಣ ಮತ್ತು ಜಾಂಬವಂತರಲ್ಲಿ ಧೀರ್ಘಕಾಲ ಯುದ್ಧ ನಡೆಯಿತು. ಸೋತ ಜಾಂಬವಂತ ಶ್ಯಮಂತಕಮಣಿಯನ್ನು ಒಪ್ಪಿಸಿ ಶರಣಾಗತನಾಗಿ ಪ್ರಾರ್ಥಿಸುತ್ತಾನೆ. ಶ್ಯಮಂತಕಮಣಿ ಪ್ರತಿದಿನವೂ ತನ್ನ ತೂಕದ ಹನ್ನೆರಡರಷ್ಟು ಬಂಗಾರವನ್ನು ಉತ್ಪಾದಿಸುವ ಬೆಲೆಕಟ್ಟಲಾಗದ ರತ್ನ. ಆದರೆ ಕೃಷ್ಣ ಮಹಿಮೆಗಿಂತ ಶ್ಯಮಂತಕಮಣಿ ಶ್ರೇಷ್ಠವಾದದ್ದೇನಲ್ಲ ಎಂದು ಜಾಂಬವಂತನ ಅಭಿಪ್ರಾಯ.

## ಕೀರ್ತನೆ–೩೧೬

**ನುಡಿ–೨ : ನಿರುಪಮಾದ್ಭುತ ಶರೀರವಾಂತಿಹ ಉರಗಾಧಿಪನಿರವು** : ಆದಿಶೇಷನದು ಅದ್ಭುತವಾದ ಶರೀರ. ಮುತ್ತಿನ ರತ್ನದ ದೀಪಗಳಂತೆ ಹೊಳೆಯುವ ಕಣ್ಣುಗಳು. ವಿಷಪೂರಿತವಾದ ಕರಿಗೊರಳು, ಉರಿವ ನಾಲಿಗೆಗಳು ಹೊಂದಿರುವ ಅದ್ಭುತ ಶರೀರದ ಭೋಗಿರಾಜ ಅವನು.

## ಕೀರ್ತನೆ–೩೨೮

**ಪಲ್ಲವಿ : ಶ್ರೀವರದನಾನಂದಾಶ್ರು ಸಂಜಾತೆ** : ನೋಡಿ ಟಿಪ್ಪಣಿ ಕೀ.೨೫೧

## ಕೀರ್ತನೆ–೩೩೫

**ನುಡಿ–೨ ಮೂರವತಾರವನ್ನೆತ್ತಿದ ಧೀರ** : ಪ್ರಹ್ಲಾದ, ವ್ಯಾಸರಾಜ, ರಾಘವೇಂದ್ರ ಇವು ರಾಘವೇಂದ್ರರ ಮೂರು ಅವತಾರಗಳೆಂದು ಭಕ್ತರು ನಂಬುತ್ತಾರೆ.

**ನುಡಿ–೨ : ಕುಂಡಲಗಿರಿಯನು** : ಭಾರತದ ಪವಿತ್ರ ಕ್ಷೇತ್ರಗಳನ್ನು ಸಂದರ್ಶಿಸಿ

"ತೀರ್ಥಪ್ರಬಂಧ"ವೆಂಬ ಕೃತಿಯನ್ನು ಬರೆದ ವಾದಿರಾಜರು ಒಮ್ಮೆ ತಿರುಪತಿಯ ಬೆಟ್ಟಕ್ಕೆ ಬಂದರು. ಆ ಬೆಟ್ಟ ಅವರಿಗೆ ಒಂದು ದೊಡ್ಡ ಸಾಲಿಗ್ರಾಮದಂತೆ ಕಂಡಿತು. ಆ ಸಾಲಿಗ್ರಾಮ ಶಿಲೆಗೆ ಕಾಲನ್ನು ಸೋಕಿಸಿ ನಡೆಯುವುದು ಸರಿಯಲ್ಲವೆಂದು ಮಂಡಿಯೂರಿ ನಡೆಯುತ್ತಾ ಬೆಟ್ಟವನ್ನು ಹತ್ತಿದರು. ಶ್ರೀನಿವಾಸನಿಗೆ ಸಾಲಿಗ್ರಾಮ ಶಿಲೆಯ ಹಾರವನ್ನು ಅರ್ಪಿಸಿದರು.

**ನುಡಿ–೪ : ಮಾಘ ಕಾವ್ಯದ ಮೂರ್ದ ಆಮೋದ ಸುಂದರವಾದ :** ಒಮ್ಮೆ ವಾದಿರಾಜ ಯತಿಗಳು ಪೂನಾನಗರದಲ್ಲಿ (ಪುಣ್ಯಪಟ್ಟಣ) ಚಾತುರ್ಮಾಸ್ಯ ಸಂಕಲ್ಪಕ್ಕೆ ಕುಳಿತಿದ್ದರು. ಪುಣೆಯ ಸಂಸ್ಕೃತ ಪಂಡಿತರು ಮಾಘಕವಿಯ "ಶಿಶುಪಾಲವಧಾ" ಕಾವ್ಯವನ್ನು ಶ್ರೇಷ್ಠಕಾವ್ಯವೆಂದು ನಿರ್ಧರಿಸಿ ಅದನ್ನು ಆನೆಯ ಮೇಲಿಟ್ಟು ಮೆರವಣಿಗೆ ಮಾಡಲು ತೀರ್ಮಾನಿಸಿದರು. ವಿಷಯ ತಿಳಿದ ವಾದಿರಾಜರು "ರುಕ್ಮಿಣೀಶ ವಿಜಯ" ಎಂಬ ಕಾವ್ಯವನ್ನು ಬರೆದು ಪಂಡಿತಮಂಡಲಿಗೆ ಕಳುಹಿಸಿದರು. ಮಾಘನ ಕೃತಿಗಿಂತಲೂ ವಾದಿರಾಜರ ಕೃತಿ ಶ್ರೇಷ್ಠವಾದುದೆಂದು ಪಂಡಿತರು ನಿರ್ಧರಿಸಿದರು. "ರುಕ್ಮಿಣೀಶವಿಜಯ" ವನ್ನು ಆನೆಯ ಮೇಲಿಟ್ಟು ಮೆರವಣಿಗೆ ಮಾಡಿದರು.

## ಕೀರ್ತನೆ–೩೪೦

**ನುಡಿ–೩ : ಕುಹುಯೋಗ ಪರಿಹಾರಗೈದ ಮಹಯೋಗಿ :** ಇದು ವ್ಯಾಸರಾಜರ ಬಿರುದು. ಜ್ಯೋತಿಷ್ಯ ಶಾಸ್ತ್ರದಲ್ಲಿ ಕುಹುಯೋಗವನ್ನು ಒಂದು ಕೆಟ್ಟ ಘಳಿಗೆ ಎನ್ನುತ್ತಾರೆ. ರಾಹು, ಸೂರ್ಯ, ಶನಿ, ಅಂಗಾರಕ ಗ್ರಹಗಳು ಶೂನ್ಯ ಚಂದ್ರ ತಿಥಿಯಾದ ಅಮಾವಸ್ಥೆಯಲ್ಲಿ ಮಕರರಾಶಿಯಲ್ಲಿ ಸಂಧಿಸುವುದೇ ಕುಹುಯೋಗ. ಈ ರಾಶಿನಕ್ಷತ್ರದಲ್ಲಿ ಜನಿಸಿದವರಿಗೆ ಗಂಡಾಂತರ ತರುವ ಕೆಟ್ಟಘಳಿಗೆ ಇದು. ಇಂಥ ಕುಹುಯೋಗ ೮–೫–೧೫೨೧ರಲ್ಲಿ ಕೃಷ್ಣದೇವರಾಯನಿಗೆ ಪ್ರಾಪ್ತವಾಯಿತು. ಈ ಸಂದರ್ಭದಲ್ಲಿ ವ್ಯಾಸರಾಜರು ರಾಜನಿಂದ ಅಧಿಕಾರ ಸ್ವೀಕರಿಸಿ ತಾವೇ ರಾಜರಾದರು. ಕುಹೂಯೋಗದ ಘಳಿಗೆಯಲ್ಲಿ ಸಿಂಹಾಸನದಿಂದ ಕೆಳಗಿಳಿದು ತಾವು ಹೊದ್ದಿದ್ದ ಕಾವಿಯ ವಸ್ತ್ರವನ್ನು ಸಿಂಹಾಸನದ ಮೇಲೆ ಎಸೆದರು. ಆ ವಸ್ತ್ರ ಸುಟ್ಟುಹೋಯಿತು. ರಾಜನಿಗೆ ಒದಗಬೇಕಾಗಿದ್ದ ದುರವಸ್ಥೆಯನ್ನು ಕಾವಿಯ ವಸ್ತ್ರ ಅನುಭವಿಸಿತು. ರಾಜನ ಗಂಡಾಂತರ ದೂರವಾಯಿತು.

## ಕೀರ್ತನೆ–೩೪೧

ಇದು ಬ್ರಹ್ಮಣ್ಯತೀರ್ಥಯತಿಗಳ ಸ್ತುತಿ. ಬ್ರಹ್ಮಣ್ಯತೀರ್ಥರು ಪುರುಷೋತ್ತಮತೀರ್ಥರ ಶಿಷ್ಯರು. ವ್ಯಾಸರಾಜರ ಗುರುಗಳು. ಸೂರ್ಯವಂಶಜರೆಂದು ಮಾನ್ಯರಾಗಿದ್ದವರು.

## ಕೀರ್ತನೆ-೩೪೩

ಜನಪ್ರಿಯವೆನಿಸಿದ ಸತ್ಯನಾರಾಯಣ ವ್ರತಕಥೆಯಲ್ಲಿ ಬರುವ ಒಂದು ಉಪಕಥೆ ಇದು. ಪುತ್ರ ಸಂತಾನವಿಲ್ಲದ ವೈಶ್ಯನೊಬ್ಬ ಉಲ್ಕಮುಖನೆಂಬ ರಾಜನಿಂದ "ಸತ್ಯನಾರಾಯಣ ವ್ರತ" ಮಹಿಮೆಯನ್ನು ಕೇಳಿದ. ತನಗೆ ಮಕ್ಕಳಾದರೆ ತಾನೂ ವ್ರತ ಮಾಡುವುದಾಗಿ ಸಂಕಲ್ಪಿಸಿದ. ಕೆಲವು ಕಾಲಾನಂತರ ವೈಶ್ಯದಂಪತಿಗಳಿಗೆ ಒಬ್ಬ ಮಗಳು ಜನಿಸಿದಳು. ಧನಮದದಿಂದ ಆ ವೈಶ್ಯ ವ್ರತಾಚರಣೆಯನ್ನು ಮುಂದೂಡುತ್ತಲೇ ಹೋದ. ಅನೇಕ ತೊಂದರೆಗಳಿಗೆ ಒಳಗಾದ. ತನ್ನ ಅಪರಾಧಗಳನ್ನು ಮನ್ನಿಸಿ ಕಾಪಾಡುವಂತೆ ಸತ್ಯನಾರಾಯಣನನ್ನು ಬೇಡುವ ಕೃತಿ ಇದು.

## ಕೀರ್ತನೆ-೩೬೦

**ಯದುಬಳಗವನು ವಿಪ್ರಶಾಪದಿಂದ ಕೊಲಿಸಿ :** ಕಣ್ವಮುನಿಗಳು ಶ್ರೀಕೃಷ್ಣನ ಸಂದರ್ಶನಕ್ಕಾಗಿ ಒಮ್ಮೆ ದ್ವಾರಕೆಗೆ ಬಂದಿದ್ದರು. ಕೆಲವು ಮಂದಿ ಯಾದವರು ಆ ಋಷಿಗಳ ಜೊತೆ ಹುಡುಗಾಟವಾಡಿ ಅಸಭ್ಯವಾಗಿ ವರ್ತಿಸಿದರು. ಜಾಂಬವತಿಯ ಮಗನಾದ ಸಾಂಬನಿಗೆ ಗರ್ಭಿಣಿಯಂತೆ ವೇಷಹಾಕಿ "ಈಕೆ ಎಂಥ ಮಗುವನ್ನು ಹೆರುತ್ತಾಳೆ ಹೇಳಿ" ಎಂದು ಅಪಹಾಸ್ಯ ಮಾಡುತ್ತ ಕೇಳಿದರು. ಕ್ರೋಧಗೊಂಡ ಕಣ್ವರು "ಕುಲಕ್ಷಯ ಮಾಡುವ ಉಕ್ಕಿನ ಒನಕೆಯನ್ನು ಹೆರುತ್ತಾಳೆ" ಎಂದು ಶಾಪ ನೀಡಿದರು. ಸಾಂಬನಿಂದ ಮುಸಲದ ಜನನವಾಯಿತು. ಯಾದವರು ಹೆದರಿ ಆ ಒನಕೆಯನ್ನು ಕುಟ್ಟಿ ಚೂರು ಚೂರು ಮಾಡಿ ನೀರಿಗೆಸೆದರು. ಪ್ರಭಾಸಕ್ಷೇತ್ರ ಎಂಬಲ್ಲಿ ಕೆಲವರು ಯಾದವರು ಕುಡಿದು ಮತ್ತರಾಗಿ ಪರಸ್ಪರ ಹೊಡೆದಾಡಿದರು. ನೀರಿನಲ್ಲಿ ಎಸೆದಿದ್ದ ಒನಕೆಯ ಚೂರುಗಳು ಶರಕಾಂಡಗಳಂತೆ ಬೆಳೆದಿದ್ದವು. ಆ ಶರಕಾಂಡಗಳನ್ನು ಕಿತ್ತುಕೊಂಡು ತಮ್ಮ ತಮ್ಮಲ್ಲೇ ಹೋರಾಡಿ ಯಾದವರು ಹತರಾದರು.

## ಕೀರ್ತನೆ-೩೬೬

**ನುಡಿ-೧ : ಅಪಶಬ್ದವಿನಿತಾದರಿಲ್ಲವೀತನ ಮುಖದಿ :** ಇದು ಹನುಮಂತನ ಮಾತುಗಾರಿಕೆಯನ್ನು ಕುರಿತ ಪ್ರಶಂಸೆ. ಹನುಮಂತ ಒಳ್ಳೆಯ ವಾಕ್ಪಟುತ್ವಕ್ಕೆ ಹೆಸರಾದವನು. ಇವನ ಮಾತಿನಲ್ಲಿ " ನ ಕಿಂಚಿತ್ ಅಪಶಬ್ದಿತಂ" ಎಂದು ವಾಲ್ಮೀಕಿ ಹೇಳಿದ್ದಾರೆ. ಇದನ್ನೇ "ಮುಖದಲ್ಲಿ ಕಿಂಚಿದಪಶಬ್ದ ಇವಗಿಲ್ಲ" ಎಂದು ಶ್ರೀಪಾದರಾಜರು ಕನ್ನಡಿಸಿದ್ದಾರೆ. ವಾದಿರಾಜರು "ಮಂಜುಭಾಷಣ ನೀನು" ಎನ್ನುತ್ತಾರೆ. ಹನುಮಂತನ ಮಾತಿನಲ್ಲಿ ಒಂದೂ ಅಪಶಬ್ದವಿರುವುದಿಲ್ಲ ಎಂದು ಭಾವಿಸಿದ ಶ್ರೀರಾಮ ತಾನೂ ಹನುಮಂತನನ್ನು ಅನುಕರಿಸುತ್ತಾನೆ.

# ಅನುಬಂಧ-೩

## ಅಂಕಿತನಾಮಸೂಚಿ

ಅಂಗಜ-೨೮೫
ಅಂಗಜನಯ್ಯ-೩
ಅಂಗಜಾರಿ-೧೨೩
ಅಂಗದ-೧೩೨,೨೪೭
ಅಂಜನಗಿರಿ-೧೧೫
ಅಂಜನಿ-೧೭, ೧೬೪, ೧೬೫, ೨೫೬
ಅಂಧಕಾಸುರ-೧೮
ಅಂಬರೀಶ-೪೫
ಅಕ್ರೂರ-೬೩, ೧೯, ೩೦೮
ಅಕ್ಷ-೧೬೪
ಅಕ್ಷೋಭ್ಯ-೮೨, ೧೬೪
ಅಗಜೆ-೨೬೦
ಅಗ್ನಿ-೯೭
ಅಘೋರ-೨೬೦
ಅಚ್ಯುತ-೧೫೪, ೨೪೧
ಅಚ್ಯುತಪ್ರೇಕ್ಷ-೮೩, ೧೬೪
ಅಜ-೪೭, ೪೯, ೭೪, ೮೪, ೩೬೨
ಅಜಜನನಿ-೮೧
ಅಜತಾತ-೬೪
ಅಜನಪಿತ-೨೯, ೩೬೨
ಅಜಮಿಳ-೯, ೪೬, ೬೩, ೭೧, ೨೨೯, ೨೩೦, ೨೩೬, ೩೨೨
ಅಜರಾಯ-೮೨
ಅದ್ವಯ-೬೦
ಅನಂತ-೨೨೧
ಅನಂತಾಸನ-೧೨
ಅನಲಾಕ್ಷ-೨೯೬, ೩೭೦
ಅನಿರುದ್ಧ-೧೨೩, ೧೫೪, ೨೧೨
ಅನಿಲದೇವ-೭೧
ಅನಿಲಾತ್ಮ-೭೬
ಅನ್ನಪೂರ್ಣೆ-೨೬೫
ಅಧೋಕ್ಷಜ-೧೫೪
ಅಮೃತಾ-೭೦
ಅಮೃತಾಂಶು-೭೦
ಅಮೃತಾತ್ಮ-೭೦
ಅಪರಾಜಿತ-೧೪೧
ಅಪ್ರಮೇಯ-೨೭೭
ಅಭಿನವ ಪುರಂದರ-೨೬೯
ಅರುಣ-೧೪೧
ಅರ್ಕ-೪೭, ೭೦
ಅಲವಬೋಧ-೧೪
ಅಸುನಾಥ-೨೯೬
ಅಹಲ್ಯೆ-೧೪೫
ಆಕಾಶರಾಯ-೨೨೭
ಆಕಾಶಾಭಿಮಾನಿ-೧
ಆಖುವಾಹನ-೧೦೩

ಆದವಾನಿ-೩೩೬
ಆದಿತ್ಯ-೨೬೦
ಆದಿದೇವ-೯೩
ಆನಂದತೀರ್ಥ-೮೩, ೧೬೫
ಆನಂದಮುನಿ-೮೧
ಆನೆಗೊಂದಿ-೧೫೦
ಇಂದಿರಾ-೪೧, ೫೭, ೨೨೨
ಇಂದಿರೆ-೧೩
ಇಂದುಶೇಖರ-೫೨
ಇಂದ್ರಜಿತ್-೧೬೬, ೩೭೨
ಇಂದ್ರಾಕ್ಷಿ-೨೬೨
ಉಡುಪಿ-೧೧೯
ಉತ್ತಾನಪಾದ-೧೧೬
ಉದ್ಧವ-೬೪, ೭೬, ೨೬೯
ಉಪೇಂದ್ರ-೧೫೪
ಉಮಾ-೧೭೮
ಉರಗ-೨೨೭
ಏಕಚಕ್ರಪುರ-೮೨, ೧೬೪, ೩೫೪
ಏಕದಂತ-೧೦೩
ಏಣಾಂಕ-೧೨೭
ಕಂತುವೈರಿ-೧೦೨
ಕಂತುಹರ-೧೦೬
ಕಂದರ್ಪ-೧೮, ೪೧
ಕಂದರ್ಪಹರ-೪
ಕಂಸ-೧೧೯, ೧೨೦, ೧೨೩, ೧೨೫,
೨೯೯, ೩೦೮
ಕಚ್ಛಪ-೧೧೯
ಕದ್ರುಜ-೧೮
ಕನಕ ಕಶಿಪು-೧೫೨
ಕನಕಾಚಲ-೨೩೬
ಕಪಿಲ-೨೧೮
ಕಮಲಭವ-೭೦
ಕಮಲಮಾರ್ಗಣ-೧೧೧
ಕಮಲಸಖ-೧೧೨
ಕಮಲೇಶ-೪೮
ಕರವೀರಪುರ-೧೫೭
ಕರಿರಾಜ-೨೩೬
ಕಲಿ-೮೯
ಕಲ್ಕಿ-೧೫೦
ಕಾತ್ಯಾಯಿನಿ-೨೬೨
ಕಾಮ-೪೫
ಕಾಮಧೇನು-೫೨
ಕಾಮಪಿತ-೧೭೬
ಕಾಯಜ-೫೧
ಕಾಲನೇಮಿ-೧೬೪
ಕಾವೇರಿ-೧೧೧, ೧೨೦, ೧೩೬
ಕಾಶಿ-೧೭೯, ೨೭೦, ೨೭೭
ಕಾಳಹಸ್ತಿ-೨೭೭
ಕಾಳಿ-೨೨೪
ಕಿರಾತ-೧೭೯
ಕಿರೀಟಸಖ-೭
ಕೀಚಕ-೧೬೪, ೧೬೬, ೧೭೦
ಕುಂಡಲಗಿರಿ-೩೩೮
ಕುಂತಿ-೧೪, ೧೬೨
ಕುಂಭಕರ್ಣ-೩೭೨
ಕುಂಭಕೋಣ-೩೩೮
ಕುಂಭಜ-೨೪೭
ಕುಚೇಲ-೯೦, ೧೨೯
ಕುಜ-೨೬೨
ಕುಬುಜೆ-೫, ೧೨೯

ಕುಮಾರ-೨೬೨
ಕುರುಪ-೧೭೫
ಕುಲಿಶಧರ-೧೬೪
ಕುಶ-೩೫೮
ಕುಶಿಕ-೩೭೧
ಕುಶಿಕ ಸುತ-೨೪೭, ೩೫೮
ಕುಸುಮಶರ-೧೧೯
ಕೃತಿರಮಣ-೪೭
ಕೃತ್ತಿವಾಸ-೨೪೭
ಕೃಷ್ಣದ್ವೈಪಾಯನ-೩೩೬
ಕೃಷ್ಣಾರ್ಯ-೪೮, ೬೨
ಕೇಶವ-೧೪೧, ೧೫೪, ೨೪೧, ೨೪೭
ಕೇಶಿ-೨೯
ಕೌಂಡಿನ್ಯ-೨೨೧
ಕೌಶಿಕ-೨೯೬, ೩೬೫, ೩೭೦
ಕೌಸಲ್ಯ-೧೪೫,೨೪೭,೩೭೦
ಗಂಗಾಜನಕ-೧೪೮
ಗಂಡಕಿ-೨೨೨
ಗಂಗಾಧರ-೨೫೮, ೨೬೦, ೮೯
ಗಂಗಾಪಿತ-೧೦೭, ೨೨೬
ಗಂಧವಾಹ-೬೭
ಗಜಮುಖ-೮೯
ಗಜಾನನ-೧, ೧೦೩
ಗಣನಾಥ-೪೦
ಗಣಪ-೨೧೮
ಗಯಾ-೨೭೦, ೨೭೬
ಗರುಡ-೮೩, ೮೪, ೯೭, ೧೫೬
ಗಾಂಗೇಯ-೧೪೮
ಗಾಂಡೀವಿ-೧೪೮
ಗಿರಿಜೆ-೧೭೭, ೨೧೮
ಗಿರಿಜೇಶ-೬೫
ಗುರುಮಧ್ವಪತಿ-೨೬೯
ಗುಹ-೩೫೮
ಗೋಪಾಲ-೬೩, ೬೭, ೭೧
ಗೋಪಾಲದಾಸ-೧೮೩
ಗೋವಿಂದ-೪೧
ಚಂಡಮುಂಡ-೨೬೨
ಚಂಡಿಕೆ-೨೬೨
ಚಂದ್ರಶೇಖರ-೨೬೨
ಚಂದ್ರಿಕಾಚಾರ್ಯ-೩೪೦
ಚಕ್ರತೀರ್ಥ-೧೪೫
ಚಾಮುಂಡಿ-೨೬೨
ಚಿತ್ರಕೂಟ-೨೪೭, ೩೫೮, ೩೭೦, ೩೭೧
ಚಿನ್ಮಯ-೭೨
ಜಗನ್ನಾಥದಾಸ-೧೮೩
ಜಟಾಯು-೧೪೫
ಜನಕ-೧೪೫, ೪೫, ೨೯೬
ಜನಾರ್ದನ-೧೮೩
ಜಯದೇವಿ-೯೭
ಜಯದೇವಿಪತಿ-೯೭
ಜಯಮಂಗಲಿ-೧೩೯
ಜಯರಾಯ-೯೭
ಜಯೇಶವಿಠಲ-೩೮
ಜರಾಸಂಧ-೧೬, ೧೭, ೮೩
ಜರೆಯ ಸುತ-೧೬೪
ಜಾಂಬವ-೧೩೨, ೧೬೬
ಜಾತವೇದ-೧೪೫
ಜಾನಕಿ-೧೬, ೨೪೭
ಜಾಹ್ನವಿ-೩೩೨
ಜಿಷ್ಣು-೩೧೦

ಜೀವೋತ್ತಮ-೬೭
ಡಾಕಿನಿ-೨೬೨
ತತ್ವೇಶ-೫೭
ತಾಟಕಿ-೩೫೮, ೩೭೦
ತಾರಕ-೨೧೮
ತುಲಸಿ-೨೨೨, ೨೫೧
ತೈಜಸ-೪೭
ತ್ರ್ಯಧೀಶ-೪೧
ತ್ರಿಪುರಸುಂದರಿ-೧೭೮
ತ್ರಿಪುರಾರಿ-೧೭೮
ತ್ರಿವಿಕ್ರಮ-೮೩, ೧೪೧, ೧೫೪
ದಂತಿಪುರ-೧೪, ೧೬೪
ದಂತಿವದನ-೧೦೨
ದಂತಿವರದ-೧೦೨
ದಶಮತಿ-೭೬
ದಶರಥ-೨೪೭, ೨೯೬, ೩೫೮, ೩೭೧
ದಶಾಸ್ಯ-೭, ೨೯೬
ದಾಕ್ಷಾಯಿಣಿ-೨೬೬
ದಾಮೋದರ-೧೪೧, ೧೫೪
ದಿನಪ-೨೧೮
ದಿನಮಣಿ-೨೯೬
ದಿವಾಕರ-೧೪೧
ದಿವಾನ ವೆಂಕಣ್ಣ-೩೩೬
ದುಂದುಭಿ -೨೪೭
ದುರ್ಗೆ-೮೧
ದುರ್ಯೋಧನ-೮೩, ೨೦೩, ೨೧೮
ದುಶ್ಯಾಸನ-೧೬೪, ೧೭೦, ೨೨೯, ೨೩೮
ದೂರ್ವಾಸ-೧೧೬, ೧೩೯
ದೇವಕಿ-೯೭, ೧೨೦, ೩೦೮, ೧೧೯
ದ್ರೌಪದಿ-೪೫, ೬೩, ೧೩೬, ೨೨೯,
೨೩೦, ೨೩೮, ೨೯೧
ದ್ವಾರಕ -೨೨೯, ೨೭೦, ೨೯೧
ಧನಂಜಯ-೩೩೦
ಧೃತಿ-೨೬೨
ಧ್ರುವ-೯, ೪೫, ೬೩, ೯೦, ೧೩೫, ೩೨೨
ನಂದಗೋಪ-೨೨೬
ನಂದಜ-೬
ನಂದನಂದನ-೨೯೯
ನಂದೀಶ-೨೬೦
ನರ-೧೭೭
ನರಕ-೨೯೯, ೩೦೮
ನಾರದ-೭೩, ೨೬೦, ೨೬೬, ೩೨೪
ನಾಲ್ವಡಿ ಕೃಷ್ಣ-೨೬೨
ನಿಶುಂಭ-೨೬೨
ನೀಲಕಂಠ-೮೫
ಪಂಕಜನಾಭ-೧೨೭
ಪಂಕಜ ಸಂಭವ-೧೨೭
ಪಂಚವಟಿ-೩೫೮, ೩೭೧, ೩೭೨
ಪಂಡರಪುರ-೧೨೬
ಪಂಪಾಪುರ-೧೪೫
ಪದುಮಾಕ್ಷ-೧೪೧
ಪದುಮಾವತಿ-೧೪೧, ೧೪೬, ೧೪೭,
೨೨೭
ಪದುಮ-೪೭
ಪದ್ಮನಾಭ-೮೩, ೧೫೪
ಪದ್ಮಿನಿ-೩೨೫
ಪನ್ನಗ-೮೪
ಪನ್ನಗಾದ್ರಿ-೫೩
ಪನ್ನಗಾದ್ರಿ ನಿಲಯ-೨
ಪರಶುರಾಮ-೧೧೯
ಪರಾಶರ-೧೨೫

ಪರೀಕ್ಷಿತ–೪೫
ಪವನ–೧೪೬
ಪವನಜ–೨೯೬, ೩೭೨
ಪವನಭವ–೨೯
ಪವನಸಖ–೨೮
ಪವಮಾನ–೪೮, ೬೦, ೭೪, ೯೭, ೩೩೦
ಪಶುಪತಿ–೨೫೮, ೨೯೬
ಪಾಂಚಾಲಿ–೧೧೫, ೧೧೬, ೧೪೩
ಪಾರ್ಥ–೯೭, ೧೧೬, ೨೯೧
ಪಾರ್ಥಸೂತ–೭೯
ಪಾರ್ವತಿ–೧೦೩, ೩೩೧
ಫಾಲಾಕ್ಷ–೭೯, ೮೫, ೮೮, ೨೯೬
ಪುಂಡರೀಕ–೬೩, ೧೨೬
ಪುಣ್ಯಪಟ್ಟಣ–೩೩೮
ಪುರಂದರ–೨೭೭
ಪುರಂದರಗಡ–೨೬೯
ಪುರಂದರದಾಸ–೧೮೩
ಪುರುಷೋತ್ತಮ–೧೫೪, ೨೪೭
ಪುರುಷೋತ್ತ,–೧೫೪, ೨೪೭
ಪುರುಷೋತ್ತಮಯತಿ–೩೪೧
ಪೂತನಿ–೭೯
ಪೂರ್ಣ–೬೫
ಪೂರ್ಣಪ್ರಜ್ಞ–೫೩, ೩೪೦
ಪ್ರಣತಾರ್ಥಿಹರ–೨೩೬
ಪ್ರಥಮಾಂಗ–೪೭, ೭೩
ಪ್ರದ್ಯುಮ್ನ–೧೨೫, ೧೫೪, ೧೭೨
ಪ್ರಭಂಜನ–೨೫೬, ೩೩೦
ಪ್ರಹ್ಲಾದ–೪೫, ೧೧೭, ೧೨೫, ೧೩೯, ೧೮೨,
೨೩೮, ೩೨೨, ೩೨೪, ೩೩೬
ಪ್ರಾಣನಾಥ–೩೩೦
ಪ್ರಾಣಸುತ–೩೫೪
ಪ್ರಾಣೇಶ–೭೯
ಬಕ–೮೩, ೩೫೪
ಬಕುಳೆ–೨೨೭
ಬದರಿಕಾಶ್ರಮ–೧೬೨
ಬಲಿ–೪೫, ೧೧೫, ೧೨೩
ಬಾದರಾಯಣ–೧೬೨, ೧೯೫, ೨೧೮
ಬೃಂದೆ–೨೨೨
ಬೆನಕ–೨೧೮, ೨೭೭
ಬೊಮ್ಮ–೭೭, ೧೦೪, ೨೭೭
ಬ್ರಾಹ್ಮಿ–೨೬೨
ಭಗೀರಥ–೧೭೭, ೨೬೧
ಭರತ–೮೨, ೧೩೨, ೨೪೭, ೩೫೮,
೩೭೧, ೩೭೨
ಭವ–೬೭
ಭಾರತಿ–೮೪, ೧೭೨, ೧೭೪
ಭಾರತಿಪತಿ–೯೩, ೯೬, ೯೭
ಭಾರತೀಮೋಹನ–೧೬೨
ಭಾರತಿರಮಣ–೧೪
ಭಾರತೀಶ–೮೨, ೮೮, ೯೪
ಭಾರಧ್ವಾಜ–೩೫೮, ೩೭೧
ಭಾರ್ಗವ–೩೭೧, ೩೭೨
ಭಿಷಜೋತ್ತಮ–೪೫
ಭೀಮ–೮೨, ೧೭೦, ೨೦೩, ೩೫೮
ಭೀಷ್ಮ–೪೫, ೯೦
ಭೂತನಾಥ–೮೫
ಭೃಗು–೪೫
ಭೈರವಿ–೮೯
ಭೂವರಾಹ–೧೧೯
ಮಂಚಾಲೆ–೩೩೬

ಮಂತ್ರಾಲಯ–೩೩೫
ಮಂದರಾದ್ರಿ–೨೯೯
ಮಂದಾಕಿನಿ–೩೧೩, ೩೫೭
ಮನಸಿಜ–೧೭೬
ಮದನನಯ್ಯ–೬೯
ಮಧುಕೇಟಭ–೧೨೮
ಮಧುವೈರಿ–೬೦
ಮಧುಸೂದನ–೧೪೧, ೧೫೪
ಮಧುಹರ–೬೯
ಮಧ್ವ–೮೩, ೮೪, ೯೭
ಮಧ್ವಮುನಿ–೯೪, ೧೭೦
ಮಧ್ವರಾಯ–೧೬, ೨೧೨
ಮರುತ–೧೫೬
ಮಹದೇವಿ–೮೮
ಮಹಿಷಾಸುರ–೧೯
ಮಾತರಿಶ್ವ–೧೪, ೬೩, ೯೪, ೧೪೦
ಮಾಧವ–೮೩, ೧೫೪, ೨೪೭, ೨೯೪,
೨೯೯
ಮಾಯಾರಮಣ–೧೪೧
ಮಾಯೇಶ–೫೧, ೬೦
ಮಾರಪಿತ–೧೭೫
ಮಾರಮಣ–೫೧, ೧೦೫
ಮಾರಾರಿ–೮೮
ಮಾರೀಚ–೧೪೫, ೨೪೭, ೩೫೮
ಮಾರುತ–೧೭೫
ಮಾರುತಿ–೧೦೯
ಮಾರುತೀಶ–೧೦೪
ಮಾರ್ಕಂಡ–೧೭೭
ಮುಕುಂದ–೮೯, ೨೩೦, ೩೧೩
ಮುಖ್ಯಪ್ರಾಣ–೧೭೪
ಮುಚುಕುಂದ–೩೦೮, ೩೧೩, ೩೫೭
ಮೂಡಲಗಿರಿ–೧೧೫, ೧೯೪
ಮುರ–೨೯೯
ಮುರಹರ–೨೨೯, ೨೯೯
ಮುರಾರಿ–೮೩
ಮೃಢ–೨೦
ಮೃಢ ಮಿತ್ರ–೬೮
ಮೋದತೀರ್ಥ–೧೪, ೧೨೮, ೧೮೩
ಮೋದಮುನಿ–೧೪೮
ಮೋಹಿನಿ–೧೪೧
ಯದುಪತಿ–೯೭
ಯಮುನ–೬
ಯಶೋದೆ–೧೦೯, ೧೨೧, ೧೪೮
ಯಾದವೇಶ–೯೩
ಯೋಗೀಂದ್ರ–೩೩೬
ರಂಗ–೧೯, ೬೩
ರಂಗಧಾಮ–೧೩೬
ರಜತ ಪೀಠಪುರ–೧೪೮
ರಮಾ–೩, ೧೨
ರಾಘವೇಂದ್ರ–೯೫, ೧೮೩
ರಾಜರಾಜೇಶ್ವರಿ–೧೭೯
ರಾಧಾ–೧೪೧
ರಾಮಾರ್ಯ–೪೮, ೯೨
ರಾವಣ–೧೦೪, ೧೪೫, ೧೫೦, ೩೫೫
ರುಕ್ಮ–೧೧೬
ರುಕ್ಮಗರ್ಭ–೩೨೬
ರುಕ್ಮಿಣಿ–೧೧೬, ೧೪೧, ೨೯೯, ೩೦೮,
೩೨೬, ೩೬೭
ರುದ್ರ–೧೮, ೪೫, ೪೭, ೪೯
ರುದ್ರಾಣಿ–೨೬೨

ಲಂಕಿಣಿ–೨೪೭
ಲಂಬೋದರ–೧೦೩, ೨೧೮
ಲಕುಮಿ–೭೦
ಲಕ್ಷ್ಮಣ–೧೩೨, ೩೪೭
ಲಕ್ಷ್ಮೀ–೫೨
ಲಕ್ಷ್ಮೀರಮಣ–೬೫
ವಕ್ರತುಂಡ–೨೧೮
ವಕ್ರೆ–೧೦
ವರದಪ್ಪ–೨೬೯
ವರಾಹ–೧೨೩, ೧೨೫
ವಸುದೇವ–೧೦೯, ೨೯೪
ವಾಗೀಶ–೩೩೯
ವಾಣಿ–೮೪, ೧೫೬, ೧೭೧, ೧೭೨, ೧೭೩
ವಾಣೀಶ–೪೫, ೬೯
ವಾದಿರಾಜ–೯೬, ೧೮೩, ೨೬೭
ವಾಮದೇವ–೮೮ ೨೬೦
ವಾಮನ–೧೪೧, ೧೫೦, ೧೫೪, ೨೪೨
ವಾಯು–೪೨, ೭೦
ವಾರಣಾಸಿ–೨೭೬
ವಾಲಿ–೧೪೫, ೨೪೭, ೩೭೨
ವಾಸವ–೧೦೬, ೨೪೧
ವಾಸುಕಿ–೧
ವಾಸುದೇವ–೮೩, ೧೨೫, ೧೫೪
ವಿಘ್ನೇಶ–೧
ವಿಜಯ–೧೨೬
ವಿಜಯದಾಸ–೯೩, ೧೮೩
ವಿಜಯರಾಮಚಂದ್ರ–೯೦
ವಿಜಯರಾಯ–೯೪
ವಿಜಯವಿಠಲ–೯೪
ವಿಜಯ ಸೂತ–೬೩
ವಿದ್ಯಾ–೨೬೨
ವಿದುರ–೧೨೯, ೩೫೬
ವಿಧಿ–೪೧, ೪೨, ೪೫, ೪೭, ೫೨
ವಿಧಿತಾತ–೭೬
ವಿಧಿಪಿತ–೪೭
ವಿಭೀಷಣ–೮೨, ೨೪೭, ೧೩೨, ೧೪೫, ೩೭೨
ವಿರಿಂಚಿ–೧೭೩
ವಿಶ್ವಂಭರ–೨೧೮, ೩೫೭
ವಿಶ್ವ–೪೭
ವಿಶ್ವೇಶ್ವರ–೧೭೯
ವಿಷಕಂಠ–೧೭೯
ವಿಷ್ಣುತೀರ್ಥ–೮೩
ವೀತಿ ಹೋತ್ರ–೨೫೬
ವೀರಭದ್ರ–೧೮
ವೃಕೋದರ–೩೫೪
ವೃತ್ರ–೪೫
ವೃಷಭಾದ್ರಿ–೬೮
ವೃಷಿಕೇಶ–೬೮
ವೃಷ್ಣೀಶ–೮೫
ವೇಣುಗೋಪಾಲ–೪೬, ೭೨
ವೈಕುಂಠ–೪೨
ವೈಷ್ಣವಿ–೨೬೨
ವ್ಯಾಸ–೨೧೮
ವ್ಯಾಸದೇವ–೮೩
ವ್ಯಾಸಮುನಿ–೧೬೪, ೧೮೩, ೨೬೯
ವ್ಯಾಸರಾಜ–೧೮೩, ೨೭೦
ಶಂಕರ–೮೮
ಶಂಕರಿ–೮೯
ಶಂಭ–೮೮

ಶಂಭು–೪೦
ಶಕ್ರ–೪೨, ೧೦೯
ಶಬರಿ–೪೫, ೧೨೯, ೨೪೭
ಶರಭಂಗ–೩೫೮, ೩೭೧, ೩೭೨
ಶರ್ವ–೭೪, ೨೦೯
ಶರ್ವಮಿತ್ರ–೭೩
ಶಶಿಧರ–೨೬೦
ಶಶ್ವದೇಕ–೭೦
ಶಾಂತಿ–೨೬೨
ಶಾಕಿನಿ–೨೬೨
ಶಾರದಾಂಬೆ–೧೭೩
ಶಿವ–೪೨, ೪೮
ಶಿವಭಟ್ಟ–೮೩
ಶಿಶುಪಾಲ–೨೯೪
ಶುಂಭ–೨೬೨
ಶುಕ–೪೧, ೪೫, ೭೫
ಶುಕಪಿತ–೪೮
ಶುಕಮುನಿ–೭೨, ೨೨೭
ಶೂರ್ಪನಖಿ–೩೫೮, ೩೭೧
ಶೇಷ–೮೩, ೮೪
ಶೇಷಶಯನ–೭೯
ಶೇಷಾಚಲ–೧೪೭
ಶೈಲಜಾ–೩೩೨
ಶೌರಿ–೬೩, ೬೪, ೭೬
ಶ್ರದ್ಧಾದೇವಿ–೮೦
ಶ್ರೀಕಂಠ–೨೬೧
ಶ್ರೀಧರ–೨೨೬, ೨೪೭
ಶ್ರೀಪಾದರಾಜ–೧೮೩, ೨೭೦
ಶ್ರೀಮುಷ್ಣ–೨೭೯
ಶ್ರೀರಂಗರಾಜ–೧೦೫
ಶ್ರೀವರ–೭೪
ಶ್ರುತಿನಾಥ–೭೧
ಸಂಕರ್ಷಣ–೮೧, ೧೨೫, ೧೫೪, ೨೪೭
ಸತ್ಯತೀರ್ಥ–೮೩
ಸತ್ಯಭಾಮೆ–೯
ಸತ್ರಾಜಿತ–೩೫೭
ಸದ್ಯೋಜಾತ–೨೬೦, ೨೬೬
ಸನಕ–೨೮, ೨೬೦
ಸರಮಾ–೧೬೪
ಸರಮಯರಸ–೧೬೪
ಸರಸ್ವತಿ–೨೬೨
ಸರ್ವೇಶ–೭೩
ಸರ್ವಜ್ಞ–೨೦೯
ಸವಿತೃ–೧೪೧
ಸಿತಿಕಂಠ–೧೦೩, ೧೨೩
ಸಿರಿ–೧೨, ೪೨, ೪೭, ೪೮, ೭೭
ಸಿರಿಯರಸ–೬೪
ಸುಗ್ರೀವ–೧೩೨, ೨೮೬, ೨೯೬
ಸುಧಾಮ–೬೪
ಸುಮುಖ–೨೧೮
ಸುರಮುನಿ–೪೫
ಸೋಮ–೧೨, ೨೬೭
ಸೋಮಕ–೧೧೯
ಸ್ಕಂದ–೪೦
ಸ್ವಾಮಿ ಪುಷ್ಕರಣಿ–೩೪
ಹಂಪೆ–೨೬೯

ಹನುಮ–೭೧, ೧೭೦, ೩೫೫, ೩೬೧
ಹಲಧರ–೧೩೬
ಹಿಡಿಂಬಿ–೮೩
ಹಿಡಂಬ–೮೨, ೩೫೪
ಹಿಮವಂತ–೮೯
ಹಿಮಾಚಲ–೨೬೬
ಹಿರಣ್ಯಕ–೮೯
ಹಿರಣ್ಯಕಶಿಪು–೧೧೭
ಹಿರಣ್ಯಗರ್ಭ–೧೭೨
ಹೀರವರ್ಣ–೨೭೦
ಹೃಷಿಕೇಶ–೧೪೧, ೧೫೪, ೨೪೭

# ಅನುಬಂಧ–೪

## ಜಯೇಶವಿಠಲರ ಅಧಿಕ ಕೃತಿಗಳು

### ಗಣೇಶ ಸ್ತುತಿ

೧. ಗಜಮುಖ ಗಜಮುಖ ಸನ್ಮುಖ ನೋಡೊ

### ಶ್ರೀಹರಿ ಸ್ತುತಿ

೨. ಅರಿಯರೊ ನಿನ್ನೊರತು ದೇವ
೩. ಕರುಣೇಶ ಕರುಣೇಶ
೪. ಕಾಪಾಡು ಇವನನ್ನು ಕಾರುಣ್ಯ ಸಿಂಧು
೫. ಗಿರಿರಾಯ ಗಿರಿರಾಯ
೬. ಪನ್ನಗಾದ್ರಿನಾಥ ವೆಂಕಟ
೭. ಪವನವಂದಿತ ಎನ್ನ ಪ್ರಾಣನಾಥ
೮. ಪಾಹಿ ಪಾಹಿ ಎನ್ನ ಪ್ರಾಣನಾಥ
೯. ಪ್ರಹ್ಲಾದ ವರದ ಶ್ರೀನಾರಸಿಂಹ
೧೦. ಬಾರಯ್ಯ ಗೋಪಾಲ ಭಜಕರ ನಿಧಿಯೆ
೧೧. ಶೇಷಗಿರಿಯ ವಾಸ ವೆಂಕಟ
೧೨. ಶ್ರೀ ವೇಣುಗೋಪಾಲ ಭಕ್ತ ಜನ ಬಂಧು

### ಲಕ್ಷ್ಮೀದೇವಿ

೧೩. ಕಲ್ಯಾಣ ಪೂರ್ಣೆ ಕರುಣಿಸು

### ವಾಯುದೇವರು

೧೪. ಪವಮಾನ ಪ್ರತಿಬಿಂಬ ಪಾಲಿಸೆನ್ನ
೧೫. ಹನುಮ ಭೀಮ ಮಧ್ವಮುನಿಯೆ
೧೬. ಭಾರ ನಿನ್ನದು ಸ್ವಾಮಿ

### ಗುರುಸ್ತುತಿ

೧೭. ಶ್ರೀ ಮಂತ್ರಾಲಯಾಧೀಶ

## ೧

ಗಜಮುಖ ಗಜಮುಖ ಸನ್ಮುಖ ನೋಡೋ
ಸುಜನಾಪ್ತ ಕುಜನಾರಿ ವಿಜಯವ ನೀಡೋ ಪ.

ಆತುರದಲಿ ನಿನ್ನ ಅಡಿಗಳ ಭಜಿಪೆ
ದಾತ ನೀ ದಯ ಮಾಡು ಖ್ಯಾತನೆ ಕರುಣಿ ೧

ಕಲ್ಯಾಣಾತ್ಮನೆ ವಿಶ್ವವಲ್ಲಭ ವರದಾ
ಜಲ್ಲೂ ಪಾವನಗೈಪೆ ಎಲ್ಲಾರ ದೊರಿಯೇ ೨

ಶಂಕರಾತ್ಮಜ ನಿನ್ನ ಕಿಂಕರ ನಾನು
ಸಂಕಟ ಪರಿಹರ ಬಿಂಕದಿ ಮಾಡೊ ೩

ಗೌರಿ ಪುತ್ರನೆ ಎನ್ನ ಶೌರಿಯ ತೋರೋ
ಗೌರ ಕೀರುತಿ ಕ್ಷಿಪ್ರ ಧೈರ್ಯವ ನೀಡೋ ೪

ಜಯೇಶವಿಠಲರಾಯನ ಪ್ರಿಯ
ಕಾಯಬೇಕೆನ್ನನು ಕೈಯ್ಯ ನೀ ಪಿಡಿದು ೫

## ೨

ಅರಿಯರೊ ನಿನ್ನೊರತು ದೇವ
ಮುರಾರಿ ತತ್ವೇಶ ಮಹಾ ಕರುಣ ಭಾವ ಪ.

ಆರಾದರ್‍ರೈ ಬಂದು ಕರಿ ಸಮಯಕೆ ಅಂದು
ನಾರಿ ಕರೆಯಲು ಮಾನ ಕಾದವರದಾರಯ್ಯ ೧

ದಾವಾಗ್ನಿ ಸುತ್ತಿರಲು ಗೋ ಗೊಲ್ಲರನು ಆರು
ಬೋವೇಗದಲಿ ಬಂದು ಪೊರೆದರದಾರಯ್ಯ ೨

ಬಾಲ ಕರೆಯಲು ಕಂಬ ಒಡೆದು ಬಂದವರದಾರು
ಬಾಲ ಧ್ರುವಗರಣ್ಯದೊಳಗೊಲಿದವರದಾರೊ ೩

ಗೋಪೇರ ಜಾರತ್ವ ಸಾರ ಸಾಧನವೆನಿಸಿ
ಭೂಪರೀ ಸುರರಿಂದ ನತಿಗೈಸಿದವನಾರು ೪

ನೆನೆದಾಗ ಒದಗುತ್ತ ಪಾಂಡವರ ಪೊರೆದಂಥ
ಅನಿಮಿತ್ತ ಬಂಧು ಜಯೇಶವಿಠಲನುಳಿದು ೫

೩

ಕರುಣೇಶ ಕರುಣೇಶ ಪ.

ಮರುತಾಂತರ್ಗತ ಕರುಣಸಾಂದ್ರ ಹರಿ ಅ.ಪ.

ಗುರು ಶರಣಾಂತರ್ಗತ ನರಪಾಲಕ
ದುರಿತವು ಬಾರದ ತೆರದಲಿ ಕರುಣಿಸು ೧

ತಂದೆತಾಯಿ ನೀ ಬಂಧು ಜಗಕೆ ಸುಖ
ಸಿಂಧು ಸುಜನಗಳಿಗೆಂದು ಮಣಿವೆನಾ ೨

ಸಿರಿಯ ರಮಣ ಮಂದರ ಧರ ಮಾಧವ
ಜಯೇಶವಿಠಲ ಕರುಣಾಂಗಯ ತೊಡಿಸು ೩

೪

ಕಾಪಾಡು ಇವನನ್ನು ಕಾರುಣ್ಯ ಸಿಂಧು ಪ.

ಗೋಪಾಲ ಮುರಳೀಧರ ಅನಾಥ ಬಂಧು ಅ.ಪ.

ಗೋಕುಲದಿ ನೀನಂದಿ ಬಹುವಿಧದಿ ಕಾದೆಯಾ
ಲೋಕೇಶ ಪರಿಪಾಲ ಲಕುಮಿಗೊಡೆಯ
ಕಾಕುದೈವರೆಲ್ಲ ನಿನ್ನಾಜ್ಞೆ ಬದ್ಧರು ಸ್ವಾಮಿ
ಸಾಕು ಸಂತತ ಇವನ ಸರ್ವೇಶ ಶ್ರುತಿಪಾದ್ಯ ೧

ನೀನಿತ್ತ ಮಹಾ ಅಭಯ ಮನಕೆ ಹತ್ತಿಸು ದೇವ
ಭಾನು ಶತತೇಜ ಬಹುಮಾನ ನಿಂದೊ
ಪ್ರಾಣನಾಯಕ ಕೃಷ್ಣ ಧೀನ ಬಾಂಧವ ನೀನೆ
ಧೇನು ವತ್ಸದ ತೆರದಿ ಅಭಿಮತದಿ ಕಾಪಾಡು ೨

ನಿನ್ನಲ್ಲಿ ಭಕ್ತಿಯನು ನಿಶ್ಚಲದಿ ನೀಡಯ್ಯ
ನಿನ್ನವರ ಪದಭಕ್ತಿ ಇತ್ತು ಸಲಹೊ
ಅನಂತ ಗುಣಪೂರ್ಣ ಜಯೇಶ ವಿಠಲ
ನಿನ್ನವರ ಪದಧೂಳೆ ಯೆನ್ನರ್ಥಿ ಸಲಿಸೈಯ್ಯಾ ೩

೫

ಗಿರಿರಾಯ ಗಿರಿರಾಯ ಪ.

ಕರುಣಾರ್ಣವ ತವಶರಣನು ಬಾಬಾ ಅ.ಪ.

ಪೂರ್ಣೇಂದು ವದನನೆ ಆನಂದ ಮೂರುತಿ
ಆನತನೆಂದೆನ್ನ ಧ್ಯಾನಕೆ ಬಾಬಾ ೧

ಬ್ರಹ್ಮೋತ್ಸವದಲಿ ಆ ಮಹಾಭಕ್ತರ
ಸಮ್ಮುಹ ವಾರ್ಧಿ ಸಂಭ್ರಮಕೆ ಚಂದ್ರಮ ೨

ಪದ್ಮಾವತಿ ಪ್ರಿಯ ಜಯೇಶವಿಠಲ
ಪದ್ಮಜ ನತ ಹೃತ್ ಪದ್ಮಕೆ ಬಾರೈ ೩

೬

ಪನ್ನಗಾದ್ರಿನಾಥ ವೆಂಕಟಾ ಬಂದು ಎನ್ನ
ಕಣ್ಣ ವರೆಸಿ ಕಳೆಯೊ ಸಂಕಟಾ ಪ.

ಪುಣ್ಯನಿಧಿಯೆ ಪೂರ್ಣಪುರುಷ
ನಿನ್ನ ಗಣ್ಯ ಅಮೃತ ಸುಗುಣ
ವನ್ನು ಕೇಳಿ ಧನ್ಯನೆಂದು
ನಿನ್ನ ಬಯಸಿ ಬಿದ್ದೆವಡಿಗೆ ಅ.ಪ.

ಕುಂಜಭವನ ರಥವಿರಾಜಿತ । ನೆರೆದದಾಸ
ಕುಂಜಕಭಯ ಕೊಡುವಿ ಸಂತತಾ
ನಂಜು ಭವದಿಂದಂಜಿ ಬಹಳ
ಮಂಜುಳಾಕ್ಷ ನಿನ್ನ ಪಾದ
ಕಂಜಕಟ್ಟಿ ಕೊಂದೆ ಹೃದಯ
ಕಂಜ ತುಂಬಿ ಕರುಣಿಸೆನ್ನ ೧

ಬೇಡಿದೊರವ ಕೊಡುತ ದೇವರು । ಬಹಳ ಉಂಟು
ನೀಡುವರ್‍ಯಾರೋ ಆತ್ಮಸುರತರು
ನಾಡಿನೊಳಗೆ ಕರ್ಮರಾಶಿ
ಕೇಡಿನಿಂದ ಕಡೆಗೆ ಬೀಳೆ
ನೋಡಬೇಕು ನಿನ್ನ ಪಾದ
ಮಾಡುದೇವ ಸುಪ್ರಸಾದ ೨

ವಂಚಿಸದೆ ಸಲಹೊ ಸಂಚಿತಾ । ಗಾಮಿ ಅಳಿಸಿ
ಮಿಂಚಿನಂತೆ ಹೊಳೆಯೊ ಸಂತತಾ
ಕಾಂಚನೊಡರೊಂದ್ಯ ಖಳರ
ವಂಚಿಸಮೃತ ಸುರರಿಗಿತ್ತೆ
ಹಂಚಿಕೆಯ ಬಲ್ಲ ರಮಾ
ಲಾಂಛನ ವಕ್ಷ ಕೊಡು ಅಪರೋಕ್ಷ ೩

ಬಲ್ಲೆ ನೀನು ಭವದ ಬಾಧಕ । ವೆಂದಿಸು ಮುಗಿವು
ದಲ್ಲವೆಂದು ಸರ್ವ ಪ್ರೇರಕ
ಹುಲ್ಲಿಗುಂಟೆ ಪ್ರವಹಕೆದುರಿ
ನಲ್ಲಿ ಹಾದು ಹೋಗೋ ಶಕ್ತಿ
ಬಲ್ಲಿ ದೇವ ಕರವ ಪಿಡಿದು
ನಿಲ್ಲೊ ಮನದಿ ನೆಲೆಯಗೊಂಡು ೪

ನಿನ್ನ ರಾಣಿಯ ನೋಡೊ ಸಂತತಾ । ತನ್ನ ಮನಕೆ
ಬಂದು ಬಂದ ಜನರಿಗಚ್ಚುತಾ
ಘನ್ನ ಪದವಿ ಕೊಡುವಳಯ್ಯ
ಮಾನ್ಯ ಜಯೇಶವಿಠಲರಾಯ
ಎನ್ನ ಜೀವದಲ್ಲಿ ನಿಂದು
ಧನ್ಯನ ಮಾಡು ಬಿರುದು ನೋಡು ೫

೭

ಪವನವಂದಿತ ಚರಣ ಮಂಗಳಾತ್ಮ
ಪವನ ತಪ್ಪಿಸದೆ ಪೊರಿ ಪಾವನೆಯ ಪಡೆದವನ ಪ.

ತುಂಗ ಮಂಗಳರೂಪ ಅಂಗಾಂಗದೊಳು ಇದ್ದು
ಶೃಂಗಾರನಿಧಿ ದೇವ ನಶ್ವರಕ್ಕೆ
ಸಂಗ ಸಂಗತಿ ಮಾಡಿ ಭಂಗಗೊಳಿಸುವ ಈ
ವ್ಯಂಗ್ಯತನ ನಿನಗ್ಯಾಕೆ ಅನಂಗಪಿತ ಕೃಷ್ಣ ೧

ಅರಲವಧಿ ನಿನ್ನಂಘ್ರಿ ಮರೆಯದಂತಿರಿಸೆನ್ನ
ಪರಮಪಾವನ ಕೃಷ್ಣ ಸರಿದು ಬಿಡದೆ
ಚರಾಚರದಿ ಜರಗುವ ಚರ್ಯೆಗಳು ನಿಂದೆಂಬೆ
ವಿರಜಮತಿ ಪಾಲಿಪುದು ಗುರುವರ್ಯರಾ ನಿಧಿಯೆ ೨

ಮದ್ಭಾವ ನೀ ವಹಿಸು ದಬ್ಬಾಕು ಭವಕಾಟ
ಸದ್ಭಾವ ಸರಿಗತಿಯು ಉದ್ಭವಿಸಲೆನಗೆ
ಸದ್ಭಕ್ತ ಪರಿಪಾಲ ಜಯೇಶವಿಠಲ
ಮದ್ಬಿಂಬ ಅಭಯ ಸ್ಥಾನವೇ ಸತತ ೩

೮

ಪಾಹಿ ಪಾಹಿ ಎನ್ನ ಪ್ರಾಣನಾಥ
ಬಾಹಿರಾಂತರ ಬಿಂಬ ಸರ್ವಾತ್ಮ ಮದ್ಬಂಧು ಪ.

ನಾಟಕಧರ ಕೃಪಾಳು ಬಹುನಾಮ ರೂಪಧರ
ಪಾಟುಪಡಿಸಲು ನೀನು ನಷ್ಟ ಜೀವ
ಹಾಟಕೋದರನ ಗುರು ಘೋಟಕಾಸ್ಯನೆ ಮಾಯಾ
ಮಾಟಗಳ ಮಹಪಟಳ ಪರಿಹರಿಸು ಕರುಣಾಬ್ಧಿ ೧

ನೀನುಪೇಕ್ಷೆಯ ಮಾಡೆ ಆನು ಜೀವಿಸಲಾರೆ
ಏನು ಗತಿಯೋ ಸ್ವಾಮಿ ಆರ್ಯಬಿಂಬ
ಆನರಿಯೆ ಎನ್ನ ಬಗೆ ನೀ ಮೂಲ ಸರ್ವಜ್ಞ
ನಾನು ನನ್ನದು ಬಿಡಿಸಿ ನಿನ್ನಲ್ಲಿ ಮನ ನಿಲಿಸು ೨

ಸಿರಿಬ್ರಹ್ಮಶಿವ ಶಕ್ರ ಸುರ ಸೇವ್ಯ ಶ್ರುತಿ ವೇದ್ಯ
ಪರಬ್ರಹ್ಮ ಜಯೇಶವಿಠಲನೆ ಪರಿಪೂರ್ಣ
ನಿರುತ ನಿನ್ನನು ಬಿಡದ ಮನವಿತ್ತು ಉದ್ಧರಿಸು
ಪರಿಹರಿಸು ಮಹರಾಯ ವಿಜ್ಞಾನ ಕಣ್ಣಿತ್ತು ೩

೯

ಪ್ರಹ್ಲಾದವರದ ಶ್ರೀ ನಾರಸಿಂಹ
ಮಲ್ಲಮರ್ಧನ ಭಕ್ತ ವಜ್ರಪಂಜರ ನಮೋ ಪ.

ಶುದ್ಧ ಮಂಗಳಸಾರ ಸ್ವಜನಾಭಿಮಾನಪರ
ಮರ್ಧಿಸುವೆ ಖಳ ಕುಲವ ಸುಜನಪಾಲ
ನಿದ್ರೆಯೊಳಗಾದರೂ ಸ್ಮರಿಸಿದರೆ ದುರಿತಗಳ
ಒದ್ದು ಓಡಿಸುವೆ ಕರುಣಾಬ್ಧಿ ನೀನೆ ೧

ಲಕುಮಿ ಆನಂದಾಬ್ಧಿ ಚಂದಿರನೆ ಸುರಪಕ್ಷ
ಅಕಳಂಕ ಸತ್ಕೀರ್ತಿ ಸತ್ವನಿಧಿಯೇ
ಶಿಖರ ನೀ ಭಕ್ತವತ್ಸಲರೊಳಗೆ ಎಂದೆಂದೂ
ಅಕಟಕುಲ ಶಿವಸದನ ಅನಿಲಮತ ಸುವಿಹಾರಿ ೨

ಬಾಲ ಕರಿಯಲು ಕಂಭ ಸೀಳಿ ಬಂದು ಖಳನ
ಕಾಲನೂರಿಗೆ ಅಟ್ಟಿ ಮೆರೆದೆ ಹರಿಯೇ
ಫಾಲಾಕ್ಷನಲಿ ನಲಿವ ಜಯೇಶವಿಠ್ಠಲ
ಪಾಲಿಸಿದೆ ನೀ ಎನ್ನ ಪತಿತ ಪಾವನ ಪ್ರಭುವೇ ೩

೧೦

ಬಾರಯ್ಯ ಗೋಪಾಲ ಭಜಕರನಿಧಿಯೆ
ಸಾರಯ್ಯ ಎನ್ನನು ಸತತ ಬಯಸುವೆ ಪ.

ವಾರಿಜಾಂಬಕ ದಿವ್ಯ ಪಾದ ಸುಂದರನೆ
ಚಾರು ಮಂಗಳ ಕಾಯ ಶೌರೀ ಅಸುರಾರಿ ೧

ಅರಿದರ ಮುರುಳಿಯ ಕರ ಶ್ರೀ ಕುಂತಳನೆ
ಶರಣರ ಪೊರೆಯುವ ಪರಿಪೂರ್ಣ ಕರುಣಿ ೨

ಪ್ರಿಯನೇ ಪ್ರಾಣೇಶ ಪ್ರಣತದ ವಿಭವ
ಸಾಯುಜ್ಯ ಪದವೀವ ಜಯೇಶವಿಠಲಾ ೩

## ೧೧

ಭಕ್ತಿಯೋಗದ ಭಾಗ್ಯ ದೇಹಿ ದೇವಾ ಪ.

ಚಿತ್ತದಲಿ ಸಂತತ ಇದ್ದು ಉದ್ಧರಿಸು ಹರಿ ಎನ್ನ ಅ.ಪ.

ಶ್ರುತಿ ರಾಶಿ ಸಂವೇದ್ಯ ಅತ್ಯಮಲ ಸುಗುಣ ನಿಧಿ
ಚಿತ್ತೈಸು ದಯವನಿಧಿ ಪತಿತ ಪಾಲ
ನಿತ್ಯ ಮುಕ್ತ ಅಮೇಯ ಸಿಂಧು ಮಂದಿರ ಕೃಷ್ಣ
ಚಿತ್ತದಲಿ ಕುಳಿತೆನ್ನ ಅರ್ಥಿ ಪರಿಹರಿಸಯ್ಯ ೧

ಮಾಯಾ ಪಟಲದವನೆತ್ತಿ ತೋಯಜಾಮುಖಿ ತೋರೋ
ಬಾಯಿ ಬಿಡುತಿಹೆ ಸ್ವಾಮಿ ಮೀರಿಯತ್ನ
ದಾಯಾದಿಗಳನುಳಿದು ತತ್ವೇಶರಾ ಸಂಗ
ಸಂತತದಿ ಕೊಟ್ಟೆನ್ನ ಸಂತಾಪ ಪರಿಹರಿಸು ೨

ನಿನ್ನವರ ಪದಧೂಳಿ ಎನಿಸು ಎನ್ನನು ಸತತ
ನಿನ್ನಲ್ಲಿ ಚಿತ್ತಿಟ್ಟು ಅನ್ಯಮರೆಸು
ಪೂರ್ಣ ಕರುಣಾಳು ಶ್ರೀಜಯೇಶವಿಠಲ
ಧನ್ಯರಾ ನೋಡೆನ್ನ ಧನ್ಯನ ಮಾಡಯ್ಯ ೩

## ೧೨

ಶೇಷಗಿರಿಯ ವಾಸ ವೆಂಕಟಾ । ದಾಸರಭಯ
ರಾಶಿ ಕಾಯೊ ಕರುಣ ಉತ್ಕಟಾ ಪ.

ದೋಷದೂರ ದಿವಿಜರೊಡೆಯ ಆ –
ಕಾಶರಾಜನಳಿಯ ನಿಗಮ –
ಘೋಷವೇದ್ಯ ರಮಾರಾಧ್ಯ
ತೋಷಗೈಸು ತೋರಿ ನಿನ್ನ ಅ.ಪ.

ಪನ್ನಗಾದ್ರಿಯಲ್ಲಿ ಪಾವನ ನಿನ್ನ ಲೀಲೆ
ಘನ್ನತೆಯ ಕೇಳಿ ಚಿದ್ಭವಾ
ಅನ್ಯವೆಲ್ಲ ವಿಷವು ಎಂದು
ಮುನ್ನ ಭಕ್ತಿಲೆರಗುವೆನೋ
ಧನ್ಯವೆನಿಸು ನಿನ್ನ ತೋರಿ
ಪೂರ್ಣಪುರುಷ ಪತಿತ ಪಾಲ ೧

ಮಂದೆಯೊಡೆದ ನೃಪನ ಮಗಳಿಗೆ । ಗಂಡನಾದೆ
ತೊಂಡವತ್ಸಲ ನಾದ ಕರುಣನೆ
ಮಂಡೆ ಬಾಗಿ ಮೋಹದಿಂದ
ಚಂಡ ತೇಜ ಚಿತ್ತದಲ್ಲಿ
ಮಂಡಿಸೆಂದು ಬೇಡಿಕೊಂಬೆ
ಕಂಡು ಬಿಡುವೊರಾರೋ ನಿನ್ನ ೨

ಭಕ್ತ ಬಂಧುವೆಂದು ಬಿರುದನು ಧರಿಸಿ ಮೆರೆವ
ಶಕ್ತ ಶಿಖಾಮಯೆ ಎನ್ನನು
ಯುಕ್ತಿಯಿಂದ ಈಗಲೇವೆ
ಭಕ್ತನೆನಿಸಿ ಬಿಗಿದು ಕಟ್ಟು
ಮುಕ್ತರೊಡೆಯ ಜಯೇಶವಿಠಲ
ವ್ಯಕ್ತನಾಗೊ ಚಿತ್ತಮಾಡು ೩

## ೧೩

ಶ್ರೀ ವೇಣುಗೋಪಾಲ ಭಕ್ತಜನ ಬಂಧು ಪ.

ಬಾ ವೇದತತಿ ವೇದ್ಯ ಒದಗೀಗ ಗುಣಸಿಂಧು ಅ.ಪ.

ಎನ್ನ ಸ್ವಾಮಿಯ ಹೃದಯಕಮಲ ಬೆಳಗುವ ಸೂರ್ಯ
ಘನತಂದು ಸದ್ಭಕ್ತಿ ಪಾಶಬದ್ಧ
ಚೆನ್ನಗೋಪಾಲ ಪರಿಪಾಲ ಪ್ರಸನ್ನ
ಎನ್ನೀಗ ಉದ್ಧರಿಸು ಹಿತಮಾಳ್ಪರಿನ್ನಿಲ್ಲ ೧

ಬಲ್ಲೆ ಅನ್ಯರ ಸಂಗವ ನೀ ಬಲ್ಲಿ ಮಾರಮಣ
ಕಲ್ಲ ನಾರಿಯಗೈದ ಕರುಣಾಸಿಂಧು
ನಿಲ್ಲಲಾರೆನು ನಿಮಿಷ ನಿನ್ನ ವಿಸ್ಮೃತಿಯಲ್ಲಿ
ತಳ್ಳಲಾರೆನು ಕಾಲ ಕಲ್ಯಾಣ ನೀಡಯ್ಯ ೨

ಕಾಲ ನಿಮಿಷವ ನೋಡಿ ನಡುಗುವುದು ತನಮನವು
ಜಾಲ ನಿನ್ನದೋ ಸ್ವಾಮಿ ಮಾಯಾರಮಣ
ಪಾಲಸಾಗರ ಸದನ ಫಾಲಲೋಚನ ಒಡೆಯ
ಪಾಲಿಪುದು ಕೈವಲ್ಯ ಜಯೇಶವಿಠಲ ೩

## ೧೪

ಕಲ್ಯಾಣ ಪೂರ್ಣೆ ಕರುಣಿಸು ವರ ಮಹಾಲಕ್ಷ್ಮೀ ಪ.

ಕಮಲ ಸದನೆ ಸುಸ್ಮಿತ ವದನೆ
ಕಮಲನೇತ್ರೆ ಸುಂದರ ಗಾತ್ರೆ
ವಿಮಲಾಪಾಂಗ ವೀಕ್ಷಣದಿಂದ
ಕಮಲಾಸನ ಭವ ಪದಗಳ ನೀಡುವೆ ೧

ಮಂಗಳ ಮಯಳೇ ತಿಂಗಳ ಸನ್ನಿಭೆ
ಪೊಂಗೊಳಲೂದುವ ರಂಗನ ನಿಜಸತಿ
ಶೃಂಗಾರಸಾರಳೆ ಪ್ರಸನ್ನ ವರಗಳ
ಹಿಂಗದೆ ಪಾಲಿಸು ಹರುಷ ಸುಪೂರ್ಣಳೆ ೨

ಅಕ್ಷಯ ಶೋಭನ ಸುರಿವ ಶ್ರೀಕರೆ
ಲಕ್ಷುಮಿ ಎನ್ನಯಾಭೀಷ್ಟ ಪಾಲಿಸು
ಪಕ್ಷಿಗಮನವ ವಕ್ಷದಿ ಮೆರೆಯುವ
ಅಕ್ಷರ ಪುರುಷಳೆ ವರಮಹಲಕ್ಷ್ಮೀ ೩

ರನ್ನಮಕುಟ ಭೂಷಣೆ ವರಮಹಾಲಕ್ಷ್ಮೀ
ಪೊನ್ನಾಂಬರೆ ಪರಿಪೂರ್ಣಳೆ ಪಾಲಿಸು
ಘನ್ನ ಕಸ್ತೂರಿ ಕುಂಕುಮ ಪಾಲೆ ಪ್ರ
ಸನ್ನಯುತ ಸಿರಿನೇತ್ರದಿ ನೋಡೆನ್ನ ೪

ಕಮಲ ಮಲ್ಲಿಗೆ ಕೇತಕಿ ಜಾಜಿ
ವಿಮಲ ಮುಕ್ತಾಮಣಿಮಯ ಹಾರಳೆ
ಕಮಲೇ ನೀನತಿಕೋಮಲ ಚಿತ್ತಳೆ
ಅಮಲ ಜಯೇಶವಿಠಲನ ತೋರಿಸು ೫

೧೫

ಪವಮಾನ ಪ್ರತಿಬಿಂಬ ಪಾಲಿಸೆನ್ನ ಪ.

ದಿವಿಜ ವಂದಿತ ಪಾದ ಧೂರ್ಜಟಿ ಕೃಪಾಮೂರ್ತಿ ಅ.ಪ.

ನೀಲಕಂಠನೆ ದಿವ್ಯ ಫಾಲಲೋಚನ ಸ್ಫಟಿಕ
ಶೀಲ ಸುಂದರ ಕಾಯ ಸೋಮವ ತಾಳಿ
ಶೈಲಜಾ ಮುಖಪದ್ಮ ಸೂರ್ಯ ಸುಗುಣಾಲಯನೆ
ಕೈಲಾಸಪತಿ ಕಾಯೊ ಕೃಷ್ಣ ಸಖ ಕರುಣಾಳೂ ೧

ಸೌಮ್ಯಸಾಗರ ಮೇರು ಸ್ಥೈರ್ಯ ಪಾವನ ಚರ್ಯ
ರಮ್ಯ ಸಿದ್ಧ ರುಜುಚಿತ್ತ ರಾಘವನ ಆಪ್ತ
ಉಮೆಯ ಗುರು ಹಿರಿತಾಪ ಉದಿತ ಮಸ್ತಕ ಸತತ
ನಮಿಸುವೆ ಶ್ರೀ ಚರಣ ನಿತ್ಯದಲಿ ಮನದೊಡೆಯ ೨

ಕರಿವದನ ಗುಹತಾತ ಕಾರುಣ್ಯ ನಿಧಿ ಶುಭೋ
ವರ ವೀರ ವೈಷ್ಣವನೆ ವಿಗತ ದೋಷಾ
ಕರಿವರದ ಜಯೇಶವಿಠಲ ನರಹರಿ ಒಲುಮೆ
ಸಿರಿಪೊತ್ತ ಶರಣನ್ನ ಕರುಣಿಸಿ ಕೊಡು ಹರಿಯೆ ೩

೧೬

ಹನುಮ ಭೀಮ ಮಧ್ವಮುನಿಯೆ ಪ್ರಣತ ಪಾಲಕ
ಜನುಮ ಜನುಮದಲ್ಲಿ ಸಲಹೋ ಪ್ರಣವ ಪೂರ್ವಕ ಪ.

ವಾಸುದೇವ ದೋಷದೂರ ಈಶ ಸರ್ವೇಶ
ಈ ಸಮಸ್ತ ಜಗಕೆ ಎಂದು ಸೂಸಿ ಉಲ್ಲಾಸ
ರಾಶಿ ವೇದ ಸಮ್ಮತಿ ತೋರಿ ಮಾಸದ್ಧುರುಷ
ದಾಸವರ್ಗಕ್ಕಿತ್ತೆ ಕರುಣರಾಶಿ ದೇವೇಶ ೧

ಭಾರತೀಶ ಶೌರಿದಾಸ ನಿನ್ನ ಶ್ರೀಪಾದ
ವಾರಿಜಾವೆ ಗತಿಯು ನಮಗೆ ಭೂರಿ ಪ್ರಮೋದ
ಹಾರೈಸುವೆ ಹರಿಯ ಸಾಕ್ಷಿ ನಿನ್ನಯ ಶ್ರೀಪಾದ
ಬ್ಯಾರೆ ವಲ್ಲೆ ಬಯಲು ಭೋಗ ಧೀರ ಸುಭೋದ ೨

ಈಶ ಗರುಡ ಶೇಷಾದ್ಯರ ಈಶ ಗುರುವೆ
ಆಸೆ ನಿನ್ನ ಕರುಣ ಕವಚ ಬಯಸುವೆ ಪ್ರಭುವೆ
ಶ್ರೀಶನಲ್ಲಿ ವಿಶೇಷಗುಣ ರಾಶಿ ತೋರುವೆ
ಈ ಸೌಭಾಗ್ಯ ಮೀಸಲು ಮಾಡಿ ದಾಸರಿಗುಣಿಸುವೆ ೩

ಲಕ್ಷ್ಮೀಪುತ್ರ ಲಕ್ಷಣಪೂರ್ಣಾಧ್ಯಕ್ಷ ಹರಿದೀಕ್ಷ
ರಕ್ಷಿಸೆನ್ನ ರುಕ್ಮಿಣಿನಾಥನ ಇತ್ತು ಅಪರೋಕ್ಷ
ಅಕ್ಷಿಗೆ ಗೋಚರನಾಗೊ ಸ್ವಾಮಿ ಮೋಕ್ಷದ ಸುರವೃಕ್ಷ
ನಿಕ್ಷೇಪ ನೀ ಸುರರಿಗೊಲಿದು ಉಪೇಕ್ಷಿಸದಿರು ಭಿಕ್ಷ ೪

ವೇದೋಕ್ತದ ಗುರುವೆ ಪೂರ್ಣಭೋದ ಮುನಿವರ
ಬಾದರಾಯಣ ಜಯೇಶವಿಠಲ ಪಾದ ಮಧುಕರ
ಪ್ರಾದುರ್ಭಾವ ಮಾಡೋ ತವಪಾದ ಪ್ರಚುರ
ಹೇ ದಯಾಬ್ಧಿ ಕರುಣಾ ನೀಡೋ ಭಕ್ತ ಸಾಗರ ೫

## ೧೭

ಭಾರ ನಿನ್ನದು ಸ್ವಾಮಿ ಭಾರತೀಶ ಪ.

ಕೌರವಾಂತಕ ಕೃಷ್ಣಾ ಪ್ರಥಮಾಂಗ ಪೊರಿ ಅನೀಶ ಅ.ಪ.

ಕಾಳಕೂಟವ ಕುಡಿದು ಜೀರ್ಣಿಸಿದ ಸತ್ಯತಮ
ಶೀಲ ಮೃತ್ಯಂಜಯನ ಗುರುವೇ ದೊರೆಯೇ
ಮೂಲ ಸಂಶಯನಾಶ ಮಾಡಿ ಪಾಲಿಸು ಎನ್ನ
ಕಾಲಿಗೆರಗುವೆ ಸ್ವಾಮಿ ಕಾಮಿತಪ್ರದ ನಿಧಿಯೇ ೧

ಜ್ಞಾನಬಲ ಪೂರ್ಣಗಹನ ಮಹಿಮನೆ ನಿತ್ಯಾ
ವೇಣುಗೋಪಾಲ ಪದಸಂಗ ಭೃಂಗ

ಆನತರ ಭಯ ಕಳೆದು ಆನಂದ ಕೊಡು ನಮಗೆ
ನೀನಲ್ಲದೆ ದಾತರನು ನಾನರಿಯೆ ಅಘದೂರ ೨

ಕಾಮಧೇನುವೆ ಕಲ್ಪವೃಕ್ಷ ಚಿಂತಾರತುನ
ಶ್ರೀಮಂತ ಶ್ರೀಪುತ್ರ ಸುಜನ ಮಿತ್ರ
ನಾ ಮೊರೆಯ ಹೊಕ್ಕೆ ತವಪಾದ ಪದ್ಮಗಳಿಂಗೆ
ಸ್ವಾಮಿನಿಷ್ಠೆಯ ನಾಟಿ ಸ್ಥಿರಮಾಡಿ ಕಾಪಾಡು ೩

ನೀ ನೀಡದಿರೆ ನಮಗೆ ಗತಿಯಾರು ಕೇಳಯ್ಯ
ಆನಂದತೀರ್ಥಕರ ಅಮಿತ ಕರುಣಿ
ಆನತೋದ್ಧಾರಿ ಗುರು ಅದ್ಭುತದ ಕಲ್ಪತರು
ನೀನೆನ್ನ ಹೃನ್ಮನದಿ ನಿಂತು ಪಾಲಿಸು ಸತತ ೪

ನಿಸ್ಸೀಮ ಹರಿಭಕ್ತಿ ಜ್ಞಾನ ಬಲ ಪರಿಪೂರ್ಣ
ದುಶ್ಯಾಸನನ ವೈರಿ ದುಷ್ಟ ಸಂಹಾರಿ
ಅಸ್ಸೀಮ ಶ್ರೀ ಜಯೇಶವಿಠಲನ ನಿಜಮಂತ್ರ
ಸಂಶಯದ ಬೇರಳಿದು ಸಲಹೋ ಸುರವರೇಣ್ಯ ೫

## ೧೮

ಶ್ರೀ ಮಂತ್ರಾಲಯಾಧೀಶ । ಗುರುರಾಜ ಸುರಭೋಜ
ಸಿರಿ ರಾಘವೇಂದ್ರ ನಮೋ ಪ.

ಸಿರಿ ಮಧ್ವಮುನಿ ಪರಮ । ಕರುಣಾ ಜಗದೊಳು
ಪರಿಪರಿ ಹರಿಯುವ ಸುರಧೇನು ಸಲಹೆಮ್ಮ ಅ.ಪ.

ಸುರರಾಜನಂತೆ ಭೂಸುರರ ಪಾಲಿಪನಾದ
ಹರಿಪಾದಪದ್ಮ ಭೃಂಗ ದೊರೆ ನಿನ್ನ ವೈಭವ
ಸಿರಿಯೆಂತೊ ನಾ ಕಾಣೆ ಹರಿತಾನೆ ನಿಂದತುಳ
ವರಗಳ ಬೀರುವ ೧

ಸುಂದರ ಸುವರ್ಣ ವೃಂದಾವನದಿ ಮೆರೆಯುವ
ಸಂದೇಹ ಹರನೆ ಧೀರ ಅಂದಾದಿ ಕೇಸರಿ
ಗಂಧ ಅಕ್ಷತೆ ಧರಿಸಿ ಚಂದಿರನಂತೆಸೆವ
ಮಂದಹಾಸನೆ ಪಾಹಿ ೨

ದೇಶ ದೇಶದಿ ಬರುವ ದಾಸಜನರ ಅರ್ಥಿ
ಕೋಶ ಮೂರುತಿ ನೀನೆ ಹಂಸಜ
ಯೇಶವಿಠಲದಾಸ ಈ ಸಮಯದಿ ಕಾಯೊ
ಭೋ ಸೋತು ಮರೆ ಹೊಕ್ಕೆ ೩

# ಅನುಬಂಧ-೫

## ಗುರುಜಯೇಶವಿಠಲ ಅಂಕಿತದ ಕೆಲವು ಕೃತಿಗಳು

### (ಜಯೇಶವಿಠಲರ ಪತ್ನಿ)

೧

ಅಂಧಕನ ಕರಪಿಡಿದು ಉದ್ಧರಿಸು ದೇವ ಪ

ಬಂಧನದಿ ಬಹು ನೊಂದೆ ಇಂದುಧರ ಗುರುವಂದ್ಯ ಅ.ಪ.

ಪ್ರಾಣ ಇಂದ್ರಿಯ ಮನಸು ನಾನಾ ಭಾವಕೆ ಒಯ್ದು
ಜ್ಞಾನ ತಪ್ಪಿಸಿ ಎನ್ನ ದುಃಖವನಧೀ
ಮೇಣು ಪೊಂದಿಸಿ ಪಾರುಗಾಣದಂತಿಟ್ಟಿಹರು
ದಾನವಾರಿಯೆ ಶರಣು ಶರಣ ಜನ ಪರಿಪಾಲ ೧

ದಯದಿಂದ ನೀ ನೋಡೆ ಲಯವಾಗುವುದು ಜಗದ
ಭಯದ ಪಾಪ ರಾಶಿಗಳು ಮೂಲವಿಡಿದು
ದಯಶರಧಿ ನೀನೆಂದು ಶ್ರುತಿ ರಾಶಿ ಪೊಗಳುವುದು
ಕ್ರಿಯದಲ್ಲಿ ತೋರಯ್ಯ ತ್ರಿಯಂಬಕ ಗತಿಪ್ರಿಯ ೨

ಪುಣ್ಯದರುಶನಕೆನಗೆ ಕಣ್ಣಿನಲಿ ಒಳಹೊರಗೆ
ಪುಣ್ಯವಂತರ ಸಂಗ ಕಾಣಬರದೊ
ಬನ್ನಬಡಿಸುವರಿಲ್ಲ ಈರೇಳು ಜಗದಲ್ಲಿ
ನಿನ್ನೊರತು ಜಯೇಶವಿಠ್ಠಲನೆ ಆಯಾತ್ಮ ೩

## ೨

ಅರಿತಷ್ಟು ಅನುಷ್ಠಾನಕ್ಕೆ ತಂದು ಪ

ಅರಲವವು ಬಿಡದ್ಹಾಂಗೆ ಬಲಿಸಿನ್ನು ಅನುಭೋಗ ಅ.ಪ.

ಮನದಲ್ಲಿ ವಿಚಾರಪರನಾಗು ಬಾಯ್ಬಿಡದೆ
ಅನವರತ ಒಳಗೆ ಅನನ್ಯನ
ಗುಣರೂಪತ್ರಯ ಭಾವಕ್ಕನುಸರಿಸಿ ನಡಕೊಂಡು
ಕುಣಿಯುತ್ತಿರು ನೀನು ಇದೆ ಪೂಜೆಯೆಂದರಿದು ೧

ನಿನ್ನ ಬಿಂಬವೆ ನಿನ್ನ ಪಾಲನ ಜಾಗವೆಂಬ
ಘನ್ನ ಭಾವದ ಮನದಿ ನಾಟಿ ನಿರುತ
ಭಿನ್ನ ಗುಣಶ್ರೀಯ ರೂಪ ಅನ್ವಯಿಸುವನಲ್ಲಿ
ಚಿಣ್ಣುಗೋಪನ ಘನ್ನ ಕೌತುಕಕೆ ನಮಿಸುತ್ತ ೨

ಹ್ಯಾಗ್ಹ್ಯಾಗೆ ಅವಸ್ಥಾತ್ರಯದಲ್ಲಿ ಒದಗಿದರೆ
ಹಾಗ್ಹಾಗೆ ನಿರ್ವಹಿಸು ನಿಪುಣತನದಿ
ಹ್ಯಾಗ್ಹ್ಯಾಗು ಅವಿಯೋಗ ಬಾಂಧವ್ಯ
ವಾಸ್ತವ್ಯ ವಾತಾತ್ಮ ಶ್ರೀಗುರು ಜಯೇಶವಿಠ್ಠಲ ೩

## ೩

ಪಂಚ ಭೌತಿಕ ದೇಹ ನಾನೇನಾದೆ ಪ

ಕೊಂಚವಾದರು ಹೃದಯ ಕರಗದೇನೆಲೊ ದೇವ ಅ.ಪ.

ಪಂಚಭೂತದ ದೇಹ ನಿನ್ನ ಕ್ಷೇತ್ರವೊ ಸತ್ಯ
ಪಂಚಕರಣದಲಿದ್ದು ಪಂಚವಿಷಯ
ಚಂಚಲಿಲ್ಲದೆ ಸುರರ ಕೈಯಿಂದ ತವಪೂಜೆ
ಪಂಚಪ್ರಾಣನು ಮಾಡೆ ವಂಚನೆಗೆ ನಾ ಗುರಿಯೆ ೧

ಪ್ರಾಣ ತನುಮನ ಕರಣ ಅನವರತ ತ್ವತ್ಸದನ
ಎನಗಾಗಿ ನೀ ಮಾಡಿ ಯಾಕೊ ಕದನ
ಜ್ಞಾನ ಬೊಂಬೆಯು ಜೀವ ಜ್ಞಾನಾನ್ನ ಕೇಳಿದರೆ
ಪಂಚ ಪರ್ವಣಿ ವಿಷವ ನೀಡುವುದುಚಿತೇನೋ ೨

ಸಕಲ ಚಿತ್ರವ ಒಂದೆ ಮಸಿ ನುಂಗುವ ತೆರದಿ
ಅಕಟಕಟ ತವ ಮರವು ಎಂಬ ಮಸಿಯು
ಅಕುಟಿಲಾತ್ಮನೆ ನಿನ್ನ ಕೃಪೆಯಲ್ಲಿ ನುಂಗುತಿದೆ
ಸುಕಳ ತವಕೆ ಅದರ ಮೇಲ್ನಡಿಯದೇ ಪೇಳೊ ೩

ಕರುಣ ಮಾಡುತಲಿರುವೆ ಮದ್ದೊರೆಯ ರೂಪದಲಿ
ಮರೆತು ತಿರುಗೆವು ನಾನು ಮರಕಟನ ತೆರದಿ
ಸೋರುತಿಹ ಹರವಿಗೆ ಉದಕ ತುಂಬುವರೇನೊ
ಮುರವೈರಿ ಮನ್ಮಥ ವದೆಕು ಮುಚ್ಚಿಡು ದೇವ ೪

ಸೆರೆಮನೆಯಲ್ಲಿ ಕೂತಿದ್ದು ಅರಮನೆಯ ಬಯಸುವರು
ಸರಿಯಲ್ಲ ಅನುಚಿತವು ನಾ ಬಲ್ಲೆನಯ್ಯ
ಅರಮನೆಯ ಬಿಟ್ಟೆನಗೆ ಸೆರೆಮನೆಯ ದುಃಖ ಕೊಡೆ
ಜರಿವುದಿಲ್ಲವೆ ನಿನ್ನ ಜನರೆಲ್ಲ ಹರಿಯೆ ೫

ನಾ ಮೊದಲು ಮಾಡಿ ಇನ್ನಾವುದೊ ನಾದಲ್ಲಿ
ನೀ ಮಾಯೆ ಕಲ್ಪಿಸಿ ಜ್ಞಾನ ಶಿಳಿಯೆ
ನಾ ಮಾಡುವುದೇನು ಬಂಧ ಮೋಚಕ ಕರ್ತ
ನಿರ್ಮಿಸೈ ಇದಕುತ್ತಿ ನಿನ್ನಾಣೆ ನಿಜ ಬಂಧು ೬

ವ್ಯಾಪ್ತಿ ದರ್ಶನದಿಂದ ಜನಿತವಾಗುವ ತೃಪ್ತಿ
ಆಪ್ತ ಕರುಣಿಸು ಈಗ ಆರ್ಯಭಾಗ
ಸುಪ್ತಿರಹಿತರ ಮಾತು ವಾತಾತ್ಮ
ಶ್ರೀ ಗುರು ಜಯೇಶವಿಠ್ಠಲ ವ್ಯತ್ಯಾಸ ಬರದೆಂದು ೭

೪

ಮಧ್ವಮುನಿ ಪ್ರತಿಬಿಂಬ ಹರಿಯ ಕಾಂಬ ಪ

ಅಧ್ವರ್ಯ ತವ ಬಲಿಮೆ ಅನ್ಯಥಾ ಇಲ್ಲಯ್ಯ ಅ.ಪ.

ಬಾಳಿ ಬದುಕುವರೊಡೆಯ ಲೀಲೆಯ ಕೃಪೆಮಾಡಿ
ಬಾಳಿಸೋ ಸ್ಮೃತಿ ಲಕ್ಷ್ಮೀದಾನವಿತ್ತು
ಪಾಲರ ಪರಿಪಾಲ ಪಾವನ್ನ ಗುಣಶೀಲ
ಗಾಳಿ ಹಿಡಿದವನಂತೆ ಕಾಲ ಕಳೆಯುವೆ ನಾಥ ೧

ಅನುಭವಿಸಿ ಚಿತ್ಸುಖಾವ ತವ ಭಟರ ನೆರಳಲ್ಲಿ
ಅನುಕೂಲ ತಪ್ಪಿಹುದೊ ಜನುಮ ಜನುಮದ ಬಂಧೊ
ಅನಿಕೇತನ ಮತಿಗೊಡೆಯ ಅಚುಂಬಿತ ಕಾರುಣ್ಯ
ಅನಲಾಕ್ಷನಾನಂದ ಪಾನದಲಿ ಮೈಮರೆಸೊ ೨

ಕ್ಷುದ್ರಭ್ರಮೆಯಲಿ ನನಗೆ ಭ್ರಮೆಯ ತಂದೊಡ್ಡದಲೆ
ಭದ್ರಮತಿಯಲಿ ಎನ್ನ ಜೊತೆ ಮಾಡಿ
ರುದ್ರಮೂರುತಿ ಗೆಳೆಯ ವಾತಾತ್ಮ ಶ್ರೀ ಗುರು
ಜಯೇಶವಿಠ್ಠಲನ ಭಜಕರಲಿ ಒಯ್ದಿರಿಸೊ ೩

೫

ಸುಳಾದಿ

ಯುಕ್ತಿಯಿಂದ ಹುಡುಕು ಶಕ್ತಿಯಿಂದ ನಿಲಿಸು
ಭಕ್ತಿಯಿಂದ ಬಯಸು ಉಕ್ತವಾದರಾಡು
ವ್ಯಕ್ತವಾದರಡಗು ಮುಕ್ತಿ ಮಾರ್ಗ ಹುಡುಕು
ರಿಕ್ತರಲ್ಲಿ ಚರಿಸು ವಿರಕ್ತನಾಗಿ ಬಾಳು
ಭುಕ್ತಿ ಬೇಡು ಧ್ಯಾನಾಸಕ್ತಿ ಶ್ರೀ ಹರಿಸ್ತವನ ಸತ್ತಹಾಂಗೆ ಚರಿಸು
ಮುತ್ತಿಕೊಂಡರು ಧೈರ್ಯ ಬತ್ತದಾಂಗೆ ಇರಿಸು
ಹತ್ತು ಮಾತಿಗೊಂದು ಮಾತನಾಡಿದರು
ಎತ್ತ ಪೋದರತ್ತ ಚಿತ್ತ ಹರಿಮೂರ್ತಿ ನರ್ತಿಸಲನವರತ

ಹತ್ತಲಿ ಭವವೆಲ್ಲ ಹೊತ್ತಲಿ ತನುವೆಲ್ಲ
ಒತ್ತಲಿ ಸುತರೆಲ್ಲ ಜತ್ತೆಲಿ ಇರಬಲ್ಲ
ವಾತಾತ್ಮ ಶ್ರೀಗುರು ಜಯೇಶವಿಠ್ಠಲನ ಲೀಲೆ ಹೊರ್ತು
ಅನ್ಯವಿಲ್ಲ ಎಂದು ತಿಳಿಯೊ ಪ್ರಬಲ ೧

ಮನದ ಬಯಕೆಯೆ ಒಂದು ಅನುಷ್ಠಾನವೆ ಒಂದು
ಅನುಕೂಲವಾಗೋದೆಂದು ಮಂದಮತಿಯೆ
ಕನಸಿಲು ಮನಸಿಲು ಗುಣಪೂರ್ಣ ಕರ್ತನೆಂದು
ಅನುದಿನ ಅನುಸಂಧಾನ ಮಾಡಿ
ಅನುಷ್ಠಾನಕ್ಕೆ ತರದೆ ಅನವರತ ಕಷ್ಟಪಟ್ಟು ಜನನವಾದ ಕೂಸು
ಶುನಕ ಬಂದು ತಕ್ಷಣವೆ ಕಚ್ಚಿಕೊಂಡು ಹೋದಂತೆ
ಮಾಡುತಿರುವಿ ಅನವಸ್ಥಿತಿ ಯೋಚಿಸಿಕೊ ಇನ್ನಾದರು
ಘನಸುಖ ಪಾಡಲಿಕ್ಕೆ ನೀನು ಸಂಪಾದಿಸಿದ
ಧನ ಮೊದಲಾದ ಸಂಪತ್ತೆಲ್ಲಾ ಅನ್ಯರು ಕದ್ದೊಯ್ದಂತೆ ಆಯಿತು
ನಿನ್ನ ಮತಿ ಅನುಷ್ಠಾನವೆಂಬೊದಿಲ್ಲದಿರೆ ಮನುಮಥ ಪಿತ ಶೌರಿ
ವಾತಾತ್ಮ ಗುರು ಜಯೇಶವಿಠ್ಠಲನ ವಿಚಿತ್ರ ಮನಕೆ ಉಣಿಸು ೨

ಬಂದವ ಗುಣಪೂರ್ಣ ಹೋದವ ಗುಣಪೂರ್ಣ
ನಿಂದವ ಗುಣಪೂರ್ಣ ಅಂದವ ಗುಣಪೂರ್ಣ
ತಂದೆಯು ಗುಣಪೂರ್ಣ ತಾಯಿಯು ಗುಣಪೂರ್ಣ
ಬಂಧುವು ಗುಣಪೂರ್ಣ ಸುಂದರ ಗುಣಪೂರ್ಣ
ವಂದ್ಯನು ಗುಣಪೂರ್ಣ ನಿಂದ್ಯನು ಗುಣಪೂರ್ಣ
ಮಂದಿರ ಗುಣಪೂರ್ಣ ಮಂದನು ಗುಣಪೂರ್ಣ
ತಂದನು ಗುಣಪೂರ್ಣ ಕವಡಿಯ ಗುಣಪೂರ್ಣ
ಸಂದವ ಗುಣಪೂರ್ಣ ಸರಿಯುವ ಗುಣಪೂರ್ಣ
ಬಂಧನ ಗುಣಪೂರ್ಣ ಬಾಧ್ಯನು ಗುಣಪೂರ್ಣ
ಬಂಧಕ ಗುಣಪೂರ್ಣ ಮೋಚಕ ಗುಣಪೂರ್ಣ
ಹಿಂದೆಯು ಗುಣಪೂರ್ಣ ಮುಂದೆಯು ಗುಣಪೂರ್ಣ
ಇಂದಿರೆ ಅರಸ ಶ್ರೀ ಗುರು ಜಯೇಶವಿಠ್ಠಲ
ನಿರ್ದೋಷ ಗುಣಪೂರ್ಣ ೩

ಆಕಳು ಮೆಲುಕನ್ನು ಹಾಕುವ ಪರಿಯಲ್ಲಿ
ನೀ ಕಾರಿ ವಿಷಯಾದಿ ಯೋಚಿಸು ನಿರ್ದೋಷನ್ನ

ಸೋಕಲು ವಿಷಯವು ಸುಖದುಃಖವಾಗವು
ಆ ಕೆಟ್ಟಭಿಮಾನ ಮಮತೆ ಹೊರ್ತು
ನೀ ಕಾಣದಂತೆಂದು ಒಳ ಒಳಗೆ ಹೂಳಿದ್ದಾಡು
ಏಕಾನೇಕ ಬಗೆಯಿಂದ ಸಂಗ ನೀ ಕಿತ್ತು ಹಾರಬೇಕು ಹು
ಡುಕ್ಹುಡುಕಿ ಪ್ರತಿ ಲವದಿ
ಏಕಾಗ್ರತೆಯೆಂಬ ದೀಪ ಹಚ್ಚಿ
ಓಕರಿಸುವಾ ವಿಷಯ ಸ್ವೀಕರಿಸುವಾ ವಿಷಯ
ಆ ಕೇಶವ ತನ್ನ ಇಚ್ಛೆಯಿಂದ
ಯಾಕೋ ಮಾಡುವನೆಂದು ತಿಳಿಸು ಜನಿ ನಸಿತಾ ಫಲ
ಆ ಕೇಶವ ಹರಿಗೆ ಸಮರ್ಪಿಸು
ಜ್ವಾಕಿ ಮಾಡಿಯೆ ಜಾಗೃತೆ ದೃಷ್ಟಿಯಲ್ಲಿ
ಚಾಕರವಾನನಿಗೆ ಭರ್ತತನವೆ
ಸಾಕಾರ ಮೂರುತಿ ವಾತಾತ್ಮ ಶ್ರೀ ಗುರು
ಜಯೇಶವಿಠ್ಠಲ ಒದಗುವ ಸ್ವೀಕಾರ ಮಾಡಲು
ಮೂರ್ತಿ ಮತ್ತ ಒಳಗೆ ೪

ಅವಯವಗಳು ನಿನಗೆ ಅವಲಂಬಿಸಿರುವಂತೆ
ಅವನಿಯೊಳಗೆ ಸಕಲ ಜೀವ ಜಡರು ಹರಿಗೆ
ಅವಯವ ಚಲನಕ್ಕೆ ಮಾನವ ಸ್ವಾತಂತ್ರ್ಯ
ಶಿವತಮ ಹರಿ ತಾನು ತನ್ನವಯವವೆಂಬ
ಜೀವ ಜಡರ ಆಡಿಸುವ ಸ್ವಾತಂತ್ರ್ಯ ಮೂರುತಿ ಕಾಣೊ
ಕುವಲಯರುಳ ಶ್ಯಾಮ ತನ್ನ ಕ್ರೀಡೆ ತಾನು
ಶ್ರೀವನಿತೆಯ ಕೂಡಿ ಆಡುತ್ತಿದೆ
ಪವನಾದಿ ಸಕಲ ಜಗಕೆ ಸೃಷ್ಟಿ ಸ್ಥಿತಿ ಮುಕ್ತಿ ಲವ
ಪ್ರತಿಯಲ್ಲೂನು ಆಗುತಿಹುದು
ಪವನನೊಡೆಯ ನಮ್ಮ ವಾತಾತ್ಮ ಶ್ರೀ ಗುರು ಜಯೇಶವಿಠ್ಠಲ
ಕ್ರೀಡೆಲಿ ವಶದಿ ನಿಂದೆಂದು ಕೊಂಡದ್ದೆ ಬಂಧ ೫

ಜತೆ :
ಸುಖ ದುಃಖ ಫಲವನ್ನು ವಾತಾತ್ಮ
ಶ್ರೀಗುರು ಜಯೇಶವಿಠ್ಠಲಗೆ ಅರ್ಪಿಸು ಕೈತುಂಬ

# ಅನುಬಂಧ–೬

## ರಂಗೇಶವಿಠಲರಿಗಿತ್ತ ಅಂಕಿತದ ಪದ

ಮಾನನಿಧಿ ರಂಗೇಶವಿಠಲ ಕೇಳೊ
ನೀನಿವನ ದೋಷಗಳ ಕಳೆದು ಸಲಹಬೇಕೊ ಪ

ನಿತ್ಯ ಆನಂದಗುಣಭರಿತನೆ ಸ್ವಾಮಿ
ನಿತ್ಯ ಮಂಗಳಪ್ರದನಾದ ನೀನು
ನಿತ್ಯ ಜ್ಞಾನ ಭಕುತಿ ವೈರಾಗ್ಯವನಿವಗಿತ್ತೆ
ನಿತ್ಯಸುಖಪದ ಪಥವ ನೀ ತೋರಬೇಕೊ ೧

ಜ್ಞಾನಗಮ್ಯನೆ ಸತತದಲಿ ತವನಾಮ
ಧ್ಯಾನನಿರತನಾಗಿರಸೀಬಾಲನ
ವಾಣಿಯನು ಕೇಳಿ ನಿನದಾಸರ ದಾಸನ ಮಾಡಿ
ನೀನಿವನ ಕರುಣದಿಂದ ಕರ ಪಿಡಿಯಬೇಕೊ ೨

ಮದ್ಗುರುಗಳಂತರ್ಯಾಮಿ ಬಾಗಿ ವಿಜ್ಞಾಪಿಸುವೆ
ಹೃದ್ಗುಹದೊಳಗಾವಗಲೂ ನಿನ್ನ
ಸದ್ಗುಣಗಳ ತೋರಿ ಸರ್ವಕಾಲದೊಳಿವನ
ಉದ್ಧರಿಸಬೇಕೆಂಬೆ ತಂದೆ ಮುದ್ದು ಮೋಹನವಿಠಲ ೩

(ತಂದೆ ಮುದ್ದುಮೋಹನದಾಸರು ಸಂಜೀವರಾಯರಿಗೆ ನೀಡಿದ
"ರಂಗೇಶವಿಠಲ" ಅಂಕಿತಪದ)

# ಅನುಬಂಧ-೭

## ದಾಸರ ಲಕ್ಷ್ಮೀನಾರಾಯಣರಾಯರ ಇತರ ಕೃತಿಗಳು

### ೧. ಗೋರಕ್ಷಣ ಗೀತೆ: (೧೦೯ ಸಾಂಗತ್ಯಗಳು)

**ಮೊದಲ ಪದ್ಯ:**

ಶ್ರೀವರನಾರಾಯಣನಡಿಗಳಿಗೆರಗಿ
ಭಾವುಕೋತ್ತರ ಕರುಣದಲಿ
ಗೋವಿನ ರಕ್ಷಣ ಕಾರಣವನು ಪೇಳ್ವೆ
ಸಾವಧಾನದಿ ಲಾಲಿಸಿರಿ.

**ಕೊನೆಯ ಪದ್ಯ:**

ಬಾಲಕೃಷ್ಣಾಭಿ ದಾಸೋತ್ತಮರ
ಬಾಲ ಲಕ್ಷ್ಮೀನಾರಾಯಣನು
ಮೇಲಾದ ಗೋರಕ್ಷಣೆ ಗೀತೆಯೊರೆದನು
ಶ್ರೀಲಕ್ಷ್ಮೀಕಾಂತನ ದಯದಿ.

### ೨. ಭವಾನುಭವಸಾರ: (೧೫೧ ಕುಸುಮ ಷಟ್ಪದಿಗಳು)

ವಿಜಯದಾಸರ ಮಾತುಗಳನ್ನು ಆಧರಿಸಿ ನಿರೂಪಿಸಲಾದ ತತ್ವಚಿಂತನೆ.

**ಮೊದಲ ಪದ್ಯ:**

ಶ್ರೀ ಕಮಲಜಾದಿನುತ
ಹೇ ಕುಂಭಿ ನರಸಿಂಹ
ನಾಕಜನ ಪರಿಪಾಲ ಕರಿಗಿರೀಶ
ಭೀಕರದಭವ ಶರಧಿ
ಗಾ ಕುಂಭ ಭವನೆನಿಪ
ಶ್ರೀಕಾಂತ ಕೃಪೆಗೈಯಿ ಮಂಗಳವನು.

**ಕೊನೆಯ ಪದ್ಯ:**

ಶ್ರೀಲೋಲಪದಭಕ್ತ
ಮೌಳಿ ವಿಜಯಾರ್ಯ ಗುರು
ಶೀಲೋಕ್ತಿಗಳ ಕುಸುಮ ಷಟ್ಪದಿಯಲಿ
ಬಾಲಕೃಷ್ಣಾಭಿದರ
ಬಾಲಕನು ಭಕ್ತಿಯಲಿ
ಮಾಲೆಗೈದನು ಲಕ್ಷ್ಮೀನಾರಾಯಣ

**೪. ರಾಮಾಯಣ ಪದ್ಯಮಾಲೆ: (೧೨೦ ಭಾಮಿನಿ ಷಟ್ಪದಿಯ ಕಾವ್ಯ)**

**ಮೊದಲ ಪದ್ಯ:**

ಶ್ರೀರಮಣ ಶ್ರೀರಾಮ ತತ್ವದ
ವಾರಿಜಂಗಳಿಗೆರಗಿ ಬೇಡುವೆ
ನಾರಯಿದು ಸಲಹೆನ್ನ ಮನ ಮಂದಿರದಿ ನೆಲೆಗೊಂಡು
ತೋರು ಮತಿಯನು ರಚಿಪೆ ನಿನ್ನಯ
ಚಾರು ಚರಿತೆಯೊಳೊಪ್ಪುವಂದದಿ
ನೂರ ಎಂಟು ಸುನಾಮ ಮಣಿಯುತ ಪದ್ಯಮಾಲೆಯನು

**ಕೊನೆಯ ಪದ್ಯ:**

ಚತುರುದಧಿ ಪರ್ಯಂತ ಗೋದ್ವಿಜ
ರತಿಶಯದೆ ಶುಭವಿಭವವೈದಲಿ
ಸತಿಪತಿಗಳಗಲದಲೆ ಶೋಭಿಸುತಿರಲಿ ಹಿತವಾಂತು
ಸುತರ ಪಾತ್ರರ ಪಡೆದು ಸಂತತ
ವಿತತ ಮಹಿಮನ ಕಥೆಯನಾಲಿಸಿ
ಕಥಿಸಿ ಹಬ್ಬಿಸುತಿರಲಿ ಮಹಿಮಾಲತೆಯನುತ್ಸವದಿ

**೫. ಶ್ರೀ ವೆಂಕಟೇಶ್ವರ ಮಹಾತ್ಮೆ (೩೧೦ ಪರಿವರ್ಧಿನಿ ಷಟ್ಪದಿಗಳ ಕಾವ್ಯ)**

**ಮೊದಲ ಪದ್ಯಗಳು:**

ಶ್ರೀವರ ಭೂವರ ಶ್ರಿತ ಜನಸುಖಕರ
ಭಾವಜನಯ್ಯನ ಭಾಸುರ ಚರಿತನೆ
ದೇವರ ದೇವನೆ ನಿನ್ನಡಿದಾವರೆ ಗಾನ ಭಿನಮಿಸುವೆನು
ಈವುದು ಮತಿಯನು ತವ ಮಹಿಮೆಗಳನು
ಭಾವಶುದ್ಧಿಯಲಿ ಪೊಗಳುವ ತೆರದಲಿ
ಕಾವುದು ಸಂತತ ಕರುಣೆಗಳರಸನೆ ಶರಣನ ಕೈಪಿಡಿದು.

ಸದಮಲ ಹರಿದಾಸರ ಪದವೆಂಬುವ
ಪದುಮಂಗಳಲಿಹ ಸುಧೆಯನು ಮನದೋ
ರಿದ ಪರಿ ಸೇವಿಸಿ ಮಧುರ ಸ್ವರದಲಿ ಮಧುಕರನಂದದಲಿ
ಮುದದಿ ಪೇಳ್ವೆನಾದಿತ್ಯ ಪುರಾಣದೊ
ಳೊದವಿದ ವೆಂಕಟನಾಥನ ಚರಿತೆಯ
ಬುಧ ಶೌನಕ ಮುಖರಿಗೆ ಸೂತಾರ್ಯನು ಪದುಳದೊಳೊರೆದುದನು

**ಕೊನೆಯ ಪದ್ಯಗಳು:**

ಕೆರೆಯ ನೀರನಾ ಕೆರೆಗೇ ಚೆಲ್ಲುತ
ವರವನು ಪಡೆದವರಂದದಿ ಶ್ರೀಹರಿ
ಕರುಣಾಬಲದಿಂದ ದೊರಕಿದ ಕವಿತಾಫಲವನು ಶ್ರೀಹರಿಗೆ
ಪರಮ ಭಕ್ತಿಯಿಂದರ್ಪಿಸಿ ಧರೆಯೊಳು
ಪರಮಾತ್ಮನ ಪರಮಾನುಗ್ರಹವನು
ಪರಿಪರಿವಿಧದಲಿ ಪಡೆವೆನು ಚಿತ್ತಕೆ ಪರಮೋತ್ಸಾಹವಾಗೆ.

ಕನ್ನಡ ಜನಪದವಾಳುವ ನಾಲ್ಮಡಿ
ಘನ್ನ ಕೃಷ್ಣರಾಜೇಂದ್ರನು ಧರೆಯನು
ನನ್ನಿಯೊಳಾಳುತ್ತಿರಲಾಂಗೀರಸ ವರ್ಷ ಮಾಘ ಮಾಸ
ಜೊನ್ನಿನ ಪಂಚಮಿ ಚಂದ್ರವಾರದಭಿ
ಜಿನ್ಮುಹೂರ್ತದಲಿ ಪೂರ್ಣಮಾಯ್ತುಕ
ಲ್ಯಾಣ ನಗರದಲಿ ವೆಂಕಟರಮಣನ ಸನ್ನಿಧಿಯಲಿ ಕೃತಿಯು

**೬. ನಾಡಗೀತೆಯ ಒಂದು ಉದಾಹರಣೆ:**

ಕರ್ನಾಟಕ ಮಾತೆ ನಮೋನಮೋ ಖ್ಯಾತ
ಧನಧಾನ್ಯಸಂಭರಿತೆ ಶ್ರೀಕೃಷ್ಣಪ್ರೀತೆ

ಮಲೆಯಾಳ ದ್ರವಿಡಾಂಧ್ರ ಮಹಾರಾಷ್ಟ್ರವರಣೆ
ಲಲಿತಾದಿ ತರುಗುಲ್ಮ ಸರಿತಾದ್ರಿಪೂರ್ಣೆ ೧

ಬುಧವಿನುತ ಮುಖ ಚಂದ್ರೆ ಭುಜಶೌರ್ಯ ಸಾಂದ್ರೆ
ಸದ ವಣಿಜ ಸೌಭಾಗ್ಯ ಸತ್ ಸೇವ್ಯಮಾರ್ಗೆ ೨

ಸಂಗೀತ ಸಾಹಿತ್ಯ ಸಕಲಾಂಗವರಣೆ
ಶೃಂಗಾರ ಮಾಂಗಲ್ಯೆ ಶುಭಾಂಗ ಪೂರ್ಣೆ ೩

ಶುಕ ಕೋಕಿಲಾಲಾಸೆ ಸಚ್ಚಿದ್ವಿಲಾಪೆ
ಅಕಳಂಕಜನವಾಸೆ ಸತ್ಯಪ್ರಕಾಶೆ ೪

ಸಕಲ ಮತಾಧರೆ ಸರ್ವಾರ್ಥಸಾರೆ
ಶ್ರೀಕಾಂತ ಪದಪದ್ಮ ಭಕ್ತಾರ್ತಿಹಾರೆ ೫

(ಈ ಹಾಡನ್ನು ಶಾಲೆಗಳಲ್ಲಿ ನಾಡಗೀತೆಯಾಗಿ ಬಳಸುತ್ತಿದ್ದರು. ಅನೇಕ ಮಂದಿ ಹರಿದಾಸರು ಸಂದರ್ಭೋಚಿತವಾಗಿ ಈ ಹಾಡನ್ನು ತಪ್ಪದೇ ಹಾಡುತ್ತಿದ್ದರು.)

**೭. ಹರಿಕಥೆಗಳು**

ಚಂದ್ರಹಾಸ ಚರಿತ್ರೆ
ಪ್ರಹ್ಲಾದ ಚರಿತ್ರೆ
ಅನಸೂಯಾ ಚರಿತ್ರೆ
ಕೃಷ್ಣಬಾಲಲೀಲೆ
ಕಾಳಿಯ ಮರ್ಧನ

**೭ ಅ) ಅನಸೂಯ ಚರಿತ್ರೆ ಹರಿಕಥೆಯಿಂದ**

(ನಾರದರು ಲಕ್ಷ್ಮೀದೇವಿಯ ಬಳಿ ಮಾಡುವ ಶ್ರೀಹರಿಯ ನಿಂದಾಸ್ತುತಿ)

**ಸೀಸಪದ್ಯ (೧)**

ಒಲಿದೆಯೇತಕೆ ಲಕುಮಿ ಶ್ರೀ ವಾಸುದೇವನಿಗೆ
ಹಲವಂಗದವನ ಗುಣ ತಿಳಿದು ತಿಳಿದು
ಕಮಲಗಂಧಿಯು ನೀನು ಗುಷ್ಟುಗಂಪನು ಅವನು
ಕೋಮಲಾಂಗಿಯು ನೀನು ಕಠಿಣನವನು
ಸುಂದರಾನನೆ ನೀನು ಸೂಕರಾಸ್ಯನು ಅವನು
ಚಂದ್ರಸಮನಿಭೆ ನೀನು ಚಟುಲನವನು
ನಮಿಪರಿಷ್ಟದೆ ನೀನು ನುತಿಸಿ ಬೇಡುವನವನು
ಅಮಿತ ಭಾಗ್ಯಳು ನೀನು ಅಲೆವನವನು
ವ್ರತತಿ ಜಾಲೆಯು ನೀನು ವನವಾಸಿಯವನು
ಪತಿಪರಾಯಣೆ ನೀನು ಪೋಕರಿಯು ಅವನು

ಚಿತ್ರವಸನಳು ನೀನು ಚಿತ್ತಲಿಹನವನು
ಸ್ತುತ್ಯಶೀಲೆಯು ನೀನು ಕಲಹಪ್ರಿಯನವನು

**ಸೀಸಪದ್ಯ (೨)**

ಕುಲದ ಕುರುಹುಗಳಿಲ್ಲ ಗುಣದ ನೆಲೆ ಕಂಡಿಲ್ಲ
ಕಲಿಕಾಲದವ ವಯಸು ತಿಳಿಯಲಿಲ್ಲ
ಬಳಗಗಳ ನೋಡೆ ನಿಷ್ಕಿಂಚನರು ಅವರೆಲ್ಲ
ಜಲಧಿಯೊಳು ಮಲಗಿಹನು ಸವಿದು ಬೆರಳ
ಸ್ವರತನನಪೇಕ್ಷಕನಕಾಮಿ ನಿದ್ರಾಹೀನ
ಸರುವ ಶಬ್ದವ ರೂಪನಮಿತ ಭೋಕ್ತ
ಉರು ಪರಾಕ್ರಮಿಯವನು ನಿರುತ ತನ್ನೆದೆಯೊಳಗೆ
ಅರಮನೆಯ ಮಾಡಿಟ್ಟು ಮರುಳುಗೈದ
ಅವನ ವಾರ್ತೆಯ ಕೇಳೆ ಭವಕಳೆವರಮ್ಮ
ಅವನ ಮೂರ್ತಿಯ ನೋಡೆ ಗೃಹ ಬಿಡುವರಮ್ಮ
ಅವನ ಪುರ ಪೊಕ್ಕವರು ತಿರುಗಿ ಬರರಮ್ಮ
ಅವನೆ ತನ್ನವಯವದಿ ಜಗ ಸೃಜಿಪನಮ್ಮ

**೬ (ಆ) ಕಾಳಿಯ ಮರ್ದನ ಹರಿಕಥೆಯ ಒಂದು ಸಾಂಗತ್ಯ**

ಆಳು ಜೋಯಿಸ ವೈದ್ಯ ಸೂಳೆ ಟಗರು ಕತ್ತೆ
ಗೂಳಿ ಸಿಂಹ ದ್ವಿಜ ಗಜವು
ಕೋಳಿ ಹುಂಜವು ಪ್ರತಿರೂಪ ಕಂಡರೆ
ಕಾಳಗ ಮಾಳ್ಪುದು ಸತ್ಯ

ಗಜಪತಿಗತಿಮದ ದ್ವಿಜರೊಳಗೊಮ್ಮತ
ಭುಜಗೇಶನಿಗೆ ನಿದ್ರೆ ಕೊಡದಿರೆ
ಪ್ರಜೆಗಳು ಬಾಳರು ಜಗ ಉಳಿಯದೆಂದು
ಅಜನಯ್ಯ ಹಿಡಿತದಿಟ್ಟಿಹನು

**೭. ನರಸಿಂಹ ಸ್ತೋತ್ರ:**
(ಬೆಂಗಳೂರು ಬಳೇಪೇಟೆ ನರಸಿಂಹ ದೇವರಿಗೆ ಅರ್ಪಿಸಿದ ೧೧೦ ನುಡಿಗಳ ಸ್ತುತಿಮಾಲೆ)

**ಮೊದಲ ನುಡಿ:**

ವೀರ ಸಿಂಹನೆ ಶರಣು ಧೀರ ಸಿಂಹನೆ ಶರಣು
ನಾರಸಿಂಹನೆ ಶರಣು ಶರಣು
ಘೋರ ಋಣ ಬಾಧೆಯು ಗಾರುಮಾಡುತಲಿಹುದು
ಪೋರನ್ನ ಸಲಹಲು ಆರು ನೀನಲ್ಲದೆ.

**ಕೊನೆಯ ನುಡಿ:**

ಮಂಗಳವ ಬೆಳಗುವ ತಿಂಗಳಿನ ವಾರದಿ
ಮಂಗಳ ಲಕುಮೀ ಕಾಂತನಿಗೆ
ತುಂಗ ಮಹಿಮೆಯಿಂದ ಮಂಗಳಪುರದಲ್ಲಿ
ಅಂಗನೆಸಹಿತ ಮೆರೆವ ನರಸಿಂಹನಿಗೆ

**೮. ತುಳಸೀ ಸ್ತೋತ್ರ (೧೧೦ ನುಡಿಗಳು)**

**ಮೊದಲ ನುಡಿ:**

ಇಂದೀವರಾಕ್ಷಿ ಸುಂದರಿ ತುಲಸೀ ತಾಯೆ
ಇಂದು ನೀ ಎನ್ನ ಕಾಯೆ
ಮಂದ ಮತಿಯೆ ನಾನು ಕುಂದುಗಳೆಣಿಸದೆ
ಹಿಂದೆ ನೀ ಮನ್ನಿಸಿ ಕಂದನ್ನ ಪೊರೆದಂತೆ

**ಕೊನೆಯ ನುಡಿ:**

ಲೋಲಲೋಚನೆ ತುಳಸಿ ಸುಂದರಿಯೆ
ಪಾಲಸಾಗರ ತನಯೆ ಸುಶೀಲೆಯೆ
ವ್ಯಾಳಶಯನನ ಭಜನೆ ಕಾಲ ಕಾಲಕೆ ಕೊಟ್ಟು
ಬಾಲನ ಪೊರೆಯಮ್ಮ ಕಾಳಾಹಿವೇಣಿ

**ಚತುರ್ವಿಂಶತಿ ರಾಷ್ಟ್ರೀಯ ಗೀತೆಗಳು**
(೨೪ ದೇಶಭಕ್ತಿ ಗೀತೆಗಳು)

**ಮಾದರಿ:**

ಆರತಿಯೆತ್ತಿರೆ ಭಾರತ ಮಾತೆಗೆ ಪ

ಸಾರಿದ ಶರಣರ ಪೊರೆವ ಪ್ರಖ್ಯಾತೆಗೆ ಅ.ಪ.

ಕೃಷಿಯಿಂದ ಜೀವಿಪ ಕುಶಲರ ಮಾತೆಗೆ
ತುಷಗಿರಿ ನದಿಗಳಿಂದೆಸೆವ ಸುಖ್ಯಾತೆಗೆ ೧

ಭಕ್ತಿ ವೈರಾಗ್ಯಕೆ ವಿಖ್ಯಾತಾಶ್ರಯಳಿಗೆ
ಮುಕ್ತಿಯ ಸಾಧನಕೆ ಮುಖ್ಯಳಾಗಿಹಳಿಗೆ ೨

ಲಕ್ಷಣವಂತೆಗೆ ನಿತ್ಯ ಶ್ರೀಮಂತೆಗೆ
ಲಕ್ಷುಮಿಕಾಂತನ ಮೆಚ್ಚಿನ ಕಾಂತೆಗೆ ೩

# ಅನುಬಂಧ-೮

## ಕೀರ್ತನೆಗಳ ಆಕಾರಾದಿ


| ಕ್ರಮ. ಸಂಖ್ಯೆ. | ಕೀರ್ತನೆಯ ಮೊದಲಸಾಲು | ಕೀರ್ತನೆ ಸಂಖ್ಯೆ |
|---|---|---|
| | **ವಿಜಯ ರಾಮಚಂದ್ರವಿಠಲರು** | |
| ೧. | ಇಂದಿರೆ ಚಂದಿರ ವದನೆ | ೧೩ |
| ೨. | ಇದನಾ ಬೇಡಿದವನಲ್ಲ | ೨೫ |
| ೩. | ಇನ್ನುಪೇಕ್ಷೆಯ ಮಾಡೆ | ೨ |
| ೪. | ಇಷ್ಟವಿಲ್ಲದ ಕಾರ್ಯ ಕಟ್ಟುಣಿಸುವುದು | ೨೨ |
| ೫. | ಏನುಕಾರಣ ಹರಿಯೆ ಅನುಮಾನಿಸಿದಿ ದೊರೆಯೆ | ೨೬ |
| ೬. | ಏನು ಮಾಡಿದರೆ ನಿನ್ನ ಕಾಣುವೊ ಸನ್ಮಾರ್ಗ ದೊರೆವುದೊ | ೨೭ |
| ೭. | ಓಂಕಾರ ಪ್ರತಿಪಾದ್ಯ ಶಂಖ ಚಕ್ರಾಭಯಕರ | ೩ |
| ೮. | ಕರುಣಿಸು ಜಯೇಶವಿಠಲ | ೩೯ |
| ೯. | ಕರುಣಿಸು ಭಾರತಿ ರಮಣ | ೧೪ |
| ೧೦. | ಕವನ ಪೇಳು ನೀ ಮನವೆ | ೩೦ |
| ೧೧. | ಗುರುಭಕ್ತಿಯನೆ ಮಾಡು | ೨೩ |
| ೧೨. | ನಂಬಿದೆ ನಾನಿನ್ನ ಚರಣವಂಬಿಗ | ೩೫ |
| ೧೩. | ನಾರಸಿಂಹ ನಾರಸಿಂಹ ನಾರಸಿಂಹ | ೪ |
| ೧೪. | ನೀನ್ಯಾಕೊ ನಿನಗೊಡವ್ಯಾಕೊ | ೧೫ |
| ೧೫. | ನೆನಸದಿರು ಮನವೆ | ೩೧ |
| ೧೬. | ಪತಿಪೋದನೆಂದು ಶೋಕಿಸುವುದ್ಯಾತಕೆ | ೩೬ |
| ೧೭. | ಬಲ್ಲೆನೆಂಬೊ ಮಮಕಾರ ಬಿಡು | ೩೭ |

| ಕ್ರಮ. ಸಂಖ್ಯೆ | ಕೀರ್ತನೆಯ ಮೊದಲಸಾಲು | ಕೀರ್ತನೆ ಸಂಖ್ಯೆ |
|---|---|---|
| ೧೮. | ಬಾರನಲ್ಲೆ ಸಖಿ ಪರಿಪೂರ್ಣ ಕಾಮನು | ೫ |
| ೧೯. | ಬಾರೊ ಗೋಪಿನಾಥ ನಿನ್ನನಗಲಿರಲಾರೆನೊ | ೬ |
| ೨೦. | ಬಾರೊ ಗೋವಿಂದ ಹೃತ್ಸರೋಜಕೆ | ೭ |
| ೨೧. | ಬಿಟ್ಟಿರಲಾರೆ ಬಾ ಗೋಪಿಕಂದ | ೮ |
| ೨೨. | ಬಿಡೆನೆ ಬಿಡೆನೆ ನಿನ್ನ ಕೂಡವಾಸ | ೨೦ |
| ೨೩. | ಬೆದರದಿರು ಚಿನ್ನ ನೀ ಬೆದರದಿರು | ೩೨ |
| ೨೪. | ಭಾವ ವೈರಾಗ್ಯದಿಂದ ಭಜಿಸು | ೩೩ |
| ೨೫. | ಮಂಗಳಂ ಮಂಗಳಂ ತುಳಸಿದೇವಿಗೆ | ೧೯ |
| ೨೬. | ಮಧ್ವರಾಯರಿಗೆ ನಮೊ | ೧೬ |
| ೨೭. | ಮರುದಂಶ ಭಾರತೀಶ | ೧೭ |
| ೨೮. | ಯಾಕೆ ಬರವಲ್ಲಿ ಭಕುತನವಸರಕೆ | ೯ |
| ೨೯. | ರಮಾನುತಪಾದ ಪಲ್ಲವಶ್ರೀಕರ | ೨೪ |
| ೩೦. | ರಾಮ ಬಂದ ಎಮ್ಮ ಪ್ರೇಮ ಬಂದಾನೊ | ೧೦ |
| ೩೧. | ರುದ್ರ ಮಹಾದೇವ | ೧೮ |
| ೩೨. | ವಿಘ್ನೇಶ ಪಾಹಿಮಾಂ | ೦೧ |
| ೩೩. | ಸುತ್ತಬೇಕು ಜನ್ಮವೆತ್ತಬೇಕು | ೩೪ |
| ೩೪. | ಸುದ್ಧಿಯ ಕೊಟ್ಟು ಬಾರೆ | ೧೧ |
| ೩೫. | ಸುಮ್ಮನೆ ಹರಿದಾಸನೆಂಬಿರಿ | ೨೮ |
| ೩೬. | ಸ್ಮರಿಸಿ ಸೇವಿಸಿ ವೆಂಕಟರಾಯದಾಸರ | ೨೧ |
| ೩೭. | ಹರಿಕರ್ತ ನಾನಲ್ಲೆಂದು ಹಿರಿಯರಾಡಿದ ಮಾತು | ೩೮ |
| ೩೮. | ಹ್ಯಾಗೆ ಸದ್ಗತಿಯಾಗುವುದೆನಗೆ | ೨೯ |
| ೩೯. | ಹ್ಯಾಗೆ ಬರುವ ವೇದವೇದ್ಯ | ೧೨ |


## ಜಯೇಶವಿಠಲರ ಹಾಡುಗಳು


| ಕ್ರಮ. ಸಂಖ್ಯೆ | ಕೀರ್ತನೆಯ ಮೊದಲಸಾಲು | ಕೀರ್ತನೆ ಸಂಖ್ಯೆ |
|---|---|---|
| ೪೦. | ಅಪರಾಧ ಎನ್ನದಯ್ಯ | ೯೮ |
| ೪೧. | ಇಂದಿರಾನಂದ ಉದಧಿ ವರ್ಧನನೆಂದು | ೪೧ |
| ೪೨. | ಎಂತು ಜೀವಿಸಲಯ್ಯ ಯಾದವೇಶ | ೪೨ |

| ಕ್ರಮ. ಸಂಖ್ಯೆ | ಕೀರ್ತನೆಯ ಮೊದಲಸಾಲು | ಕೀರ್ತನೆ ಸಂಖ್ಯೆ |
|---|---|---|
| ೪೩. | ಎನ್ನೊಡನೆ ಹುಟ್ಟಿದ ಹರಿಯೆ ಪಾಹಿ | ೪೩ |
| ೪೪. | ಎಲ್ಲಾ ದೇವರ ಗಂಡ ಕೃಷ್ಣ | ೪೮ |
| ೪೫. | ಏಕಿಷ್ಟು ಕರುಣವೊ ಶ್ರೀಕೃಷ್ಣ ದೇವ | ೪೫ |
| ೪೬. | ಕಣ್ಣಿನ ಕರಿರಟ್ಟು ಸುಟ್ಟು ಬೂದಿಯ ಮಾಡಿ | ೪೬ |
| ೪೭. | ಕಪ್ಪುಗೊರಳ ಬಿಂಬ ಅಪ್ಪ ಸಲಹೊ | ೮೨ |
| ೪೮. | ಕರುಣಾ ಸಾಗರ ವಿಶ್ವ ಕಾಯೊ ಎನ್ನ | ೪೭ |
| ೪೯. | ಕರ್ಮನಾಮಕ ಧರ್ಮಕಾರಿ | ೪೯ |
| ೫೦. | ಕವಿವರರ ಕವನದಲಿ ಕವಿಕವಿದು ಪೊಳೆವ | ೪೮ |
| ೫೧. | ಕುಡಿಸೆನಗೆ ಹರಿ ನಿನ್ನ ನಾಮರಸವ | ೫೦ |
| ೫೨. | ಕ್ರಿಯರೂಪ ಗುಣನಾಮ ದರ್ಶ ಕರ್ತ | ೫೧ |
| ೫೩. | ಖೋಡಿಗುಣ ಜಗದಲ್ಲಿ ಹೂಡಿ ನೀ ನಲಿವಾಗ | ೫೨ |
| ೫೪. | ಗಣನಾಥ ಮಣಿವೆನೊ ಗಣನಾಥ | ೪೦ |
| ೫೫. | ಗುರು ನಿಕರ ಸಂಸೇವ್ಯ ಸತಿ ಪತಿಯ ಬಿಂಬ | ೫೩ |
| ೫೬. | ಗುರು ರಾಘವೇಂದ್ರ ಶರಣರ ಸುರತರುವೆ | ೯೫ |
| ೫೭. | ಗೌರಿ ಗಜಮುಖನ ಮಾತೆ | ೮೯ |
| ೫೮. | ಜಯರಾಯ ಭವ ಹರಣ ಪಾಲಿಸೆಮ್ಮ | ೯೭ |
| ೫೯. | ಜೀವ ಕತೃತ್ವದ ಭ್ರಮೆಯ ಬಿಡಿಸೊ | ೫೪ |
| ೬೦. | ಜ್ಞಾನದಾಯಕ ಜಗಕೆ ನೀನೆ ಶೌರಿ | ೫೫ |
| ೬೧. | ನಂಬು ನಂಬು ನಂಬು ಮನವೆ | ೯೦ |
| ೬೨. | ನಾನು ನನ್ನದು ಎಂಬ ಜಾಣಶೌರಿ | ೫೬ |
| ೬೩. | ನಿನ್ನ ಕೃಪೆ ಕಾಣದ ಕಾಲ ವ್ಯರ್ಥ | ೫೭ |
| ೬೪. | ನಿನ್ನ ಮರೆದಿಹ ಜನಕೆ ಇನ್ನಿಲ್ಲದ ಮನುಜ | ೫೮ |
| ೬೫. | ನಿನ್ನ ಪ್ರೇಮದ ಭೋಗ ಮಂಗಳವು ಎಂತೊ | ೫೯ |
| ೬೬. | ನೀ ಎನ್ನ ಸದ್ಭಾಗ್ಯ ಆನಂದ ನಿಧಿಯೊ | ೬೦ |
| ೬೭. | ನೀ ಕೊಟ್ಟರುಣವಲ್ಲಿ ಭಕ್ತಿ ಹರುಷ | ೬೧ |
| ೬೮. | ನೀ ಬುದ್ಧಿ ಕೊಡದಿರಲು ಮನುಜ ಪಶುವೊ | ೬೨ |
| ೬೯. | ಪತಿತಪಾವನ ರಂಗ ಸತತ ಕಾಯೊ | ೬೩ |

| ಕ್ರಮ. ಸಂಖ್ಯೆ | ಕೀರ್ತನೆಯ ಮೊದಲಸಾಲು | ಕೀರ್ತನೆ ಸಂಖ್ಯೆ |
|---|---|---|
| ೭೦. | ಪರಮ ಪುರುಷನೆ ಕೃಷ್ಣ ಕಣ್ತೆರಡು ನೋಡು | ೬೪ |
| ೭೧. | ಪರಶು ಮುಟ್ಟಲು ಲೋಹ ಸ್ವರ್ಣವಾಗುವ ಪರಿ | ೯೧ |
| ೭೨. | ಪೂರ್ಣ ಲಕ್ಷ್ಮೀರಮಣ ನಿತ್ಯ ವಿಭವ | ೬೫ |
| ೭೩. | ಪ್ರಸನ್ನ ವಿಠಲ ಪಾಲಿಸಿವ | ೯೯ |
| ೭೪. | ಬಿನ್ನಹಕೆ ಬಾಯಿಲ್ಲ ಭೂತನಾಥ | ೮೫ |
| ೭೫. | ಬುದ್ಧಿಮಾನಿಯೆ ಎನ್ನ ಉದ್ಧರಿಸು ತಾಯೆ | ೮೦ |
| ೭೬. | ಭಕ್ತಿಯಲಿ ತನುಮನವು ಸತತ ಬಗ್ಗಿರಲಯ್ಯ | ೬೬ |
| ೭೭. | ಭವಸಿಂಧು ಶೋಷಿಪೇಕ್ಷಣ ಕಲ್ಯಾಣಗಾತ್ರ | ೯೨ |
| ೭೮. | ಭಾರತೀಶನೆ ಎನ್ನ ಭಾರ ನಿನ್ನದು ತಂದೆ | ೮೩ |
| ೭೯. | ಭಾವದಲ್ಲಿಯೆ ಪೊರೆಯೊ ಜೀವೋತ್ತಮರರಸ | ೬೭ |
| ೮೦. | ಭಾವವೆ ಕಾರಣವೊ ಭವಕೆ ದೇವ | ೬೮ |
| ೮೧. | ಮಧುಹರನಿಗರ್ಪಿತವು ಸರ್ವಕರ್ಮ | ೬೯ |
| ೮೨. | ಮನದಧಿಪ ಮರೆಹೊಕ್ಕೆ ಮಹದೇವ ಪಾಹಿ | ೮೬ |
| ೮೩. | ಮನದಧಿಪ ಮಹದೇವ ಮೊರೆಯೆ ಕೇಳೊ | ೮೭ |
| ೮೪. | ಮಹದೇವ ಮದ್ರೋಗ ಮೂಲವಳಿಯೊ | ೮೮ |
| ೮೫. | ಲಕುಮಿ ಸಾಮ್ರಾಜ್ಯ ಶರಧಿಗಮ್ಯತಾಂಶುನೇತ್ರ | ೭೦ |
| ೮೬. | ವಾಜಿವದನಾರ್ಚಕ ಶ್ರೀ ವಾದಿರಾಜ | ೯೬ |
| ೮೭. | ಶಿಲೆಯ ನಾರಿಯ ಮಾಡ್ದ ಹನುಮ ನಿಲಯ | ೭೧ |
| ೮೮. | ಶ್ರೀಗುರು ಜಯೇಶವಿಠಲನೆ ಪಾಲಿಸಯ್ಯ | ೧೦೦ |
| ೮೯. | ಶ್ರೀ ಪರಾತ್ಪರವಿಠಲ ಪಾಲಿಸಿವರ | ೧೦೧ |
| ೯೦. | ಶ್ರೀ ವೇಣುಗೋಪಾಲ ಶುಕಮುನಿಯ ಬಿಂಬ | ೭೨ |
| ೯೧. | ಶ್ರೀಹರಿಗೆ ಪ್ರಥಮಾಂಗ ಮಧ್ವಮೂರ್ತಿ | ೮೪ |
| ೯೨. | ಶ್ರುತಿರಾಶಿ ಸನ್ನುತ ಸತತ ಸದ್ಗುಣಪೂರ್ಣ | ೭೩ |
| ೯೩. | ವಿಜಯ ದಾಸರ ದಿವ್ಯ ವಿಜಯ ನೆನೆವರ | ೯೩ |
| ೯೪. | ವಿಜಯವಿಠಲರಾಯನಂಘ್ರಿಯುಗ ಭಜಿಸುವ | ೯೪ |
| ೯೫. | ಸಂಕರ್ಷಣನ ರಾಣಿ ವೀರದುರ್ಗೆ | ೮೧ |
| ೯೬. | ಸರ್ವಕೂ ನೀ ಮೂಲ ಹರಿಯೆ ಕೇಳೊ | ೭೪ |

| ಕ್ರಮ. ಸಂಖ್ಯೆ | ಕೀರ್ತನೆಯ ಮೊದಲಸಾಲು | ಕೀರ್ತನೆ ಸಂಖ್ಯೆ |
|---|---|---|
| ೯೭. | ಸರ್ವೇಶ ಸುಲಭ ತಮ ಶೌರಿ ನೀನು | ೭೫ |
| ೯೮. | ಸರ್ವೇಶ ಹರಿ ನೀನು ಸರ್ವಾತ್ಮ ಶೌರಿ | ೭೬ |
| ೯೯. | ಸಾಧನದ ಚಿಂತೆ ಎನಗ್ಯಾಕೊ ದೇವ | ೭೭ |
| ೧೦೦. | ಹರಿ ನೀ ಕೊಡದಿರೆ ಬಾಳಬಹುದೆ | ೭೮ |
| ೧೦೧. | ಹರಿಹರಿ ಎನ್ನ ದೋಷವಳಿಯೊ | ೭೯ |


## ರಂಗೇಶವಿಠಲರ ಕೃತಿಗಳು


| | | |
|---|---|---|
| ೧೦೨. | ಅಚ್ಯುತಾನಂತನ ಅಚ್ಛಿನ್ನ ಭಕ್ತರ | ೨೦೬ |
| ೧೦೩. | ಅನ್ಯದೇವರ ನಾನರಿಯೆ ಸಿರಿಹರಿಯೆ | ೧೦೪ |
| ೧೦೪. | ಆರತಿ ಮಾಡಿರೆ ನೀರೆಯರೆಲ್ಲರು | ೧೦೫ |
| ೧೦೫. | ಈ ಸಂಸಾರ ಸುಖವು ಬೇಸರಾಯ್ತೆನಗೆ | ೧೮೪ |
| ೧೦೬. | ಉಮಾ ಹಿಮಗಿರಿ ಕುಮಾರಿ | ೧೭೮ |
| ೧೦೭. | ಎಂಥ ಶೂರನೊ ರಾಮ ಎಂಥ ಧೀರನೊ | ೧೦೬ |
| ೧೦೮. | ಎಂದಿಗೆ ಕಾಂಬುವೆ ನಿನ್ನ ಚರಣವ | ೧೮೫ |
| ೧೦೯. | ಎನಗೆಲ್ಲಿಯ ಕೊರತೆ ನಿನ್ನ ನಂಬಿದ ಮೇಲೆ | ೧೮೬ |
| ೧೧೦. | ಎಲ್ಲರೂ ದಾಸರಹರೇ | ೧೮೭ |
| ೧೧೧. | ಏನ ಬೇಡಲೊ ಕೃಷ್ಣ ನಾಚಿಕಿಲ್ಲದೆ | ೧೮೮ |
| ೧೧೨. | ಏನಿದ್ದರೇನಯ್ಯ ಜ್ಞಾನವಿಲ್ಲದ ಮೇಲೆ | ೨೦೦ |
| ೧೧೩. | ಏನು ಕರ್ಮವ ಮಾಡಿ ನಾನಿನ್ನ ಒಲಿಸಲಿ | ೧೦೭ |
| ೧೧೪. | ಏನೇನು ಪಾಟುಬಿದ್ದರು ಮುನ್ನ | ೧೦೮ |
| ೧೧೫. | ಏಳಮ್ಮ ತಾಯೆ ಮುದದಿಂದೆಮ್ಮನು ಕಾಯೆ | ೧೫೬ |
| ೧೧೬. | ಏಳಯ್ಯ ಭಾರತಿ ಮೋಹನ | ೧೬೨ |
| ೧೧೭. | ಏಳು ರಂಗಯ್ಯ ನೀನೇಳು ಕೃಷ್ಣಯ್ಯ | ೧೦೯ |
| ೧೧೮. | ಕಂಡು ಹೇಳಿಕೊಂಡೆನೆನ್ನ ಕಷ್ಟವ | ೧೧೦ |
| ೧೧೯. | ಕಂಡೆನೆನ್ನ ದೊರೆಯ | ೧೧೧ |
| ೧೨೦. | ಕಮಲ ಮಾರ್ಗಣಪಿತ ನಿನ್ನ | ೧೧೨ |
| ೧೨೧. | ಕರುಣದಿ ಪೊರೆಯೆನ್ನ ಪ್ರಭುವೆ | ೧೬೩ |

| ಕ್ರಮ. ಸಂಖ್ಯೆ | ಕೀರ್ತನೆಯ ಮೊದಲಸಾಲು | ಕೀರ್ತನೆ ಸಂಖ್ಯೆ |
|---|---|---|
| ೧೨೨. | ಕರುಣದಿ ಪೊರೆಯೆ ಭಾರತಿ | ೧೭೪ |
| ೧೨೩. | ಕರುಣಿಸು ಕರುಣಿಸು ಪರಮ ಪುರುಷ | ೧೧೩ |
| ೧೨೪. | ಕರುಣಿಸೆ ಕೋಮಲಗಾತ್ರೆ | ೧೫೭ |
| ೧೨೫. | ಕರುಣೆ ತೋರೊ ಕಣ್ಣ ತೆರೆದು | ೧೬೪ |
| ೧೨೬. | ಕಾಮಪಿತ ಪದ ಸರಸಿರುಹ ಭೃಂಗ | ೧೭೬ |
| ೧೨೭. | ಕಾಯೊ ಕರುಣದಿರಿಂದೆನ್ನನು ತೋಯಜಾಕ್ಷನೆ | ೧೮೯ |
| ೧೨೮. | ಕಾವೇರಿ ತೀರದಲಿ ನಿಂದಿರುವ ರಂಗಯ್ಯ | ೧೧೪ |
| ೧೨೯. | ಕೋರಿ ಬಂದೆನೊ ನಾನು | ೧೬೫ |
| ೧೩೦. | ಕೋಲು ಕೋಲೆನ್ನ ಕೋಲೆ ರನ್ನದಾ | ೧೧೫ |
| ೧೩೧. | ಗರುಡನೇರಿ ಬಂದ ಸಿರಿರಮಣನು ತಾನು | ೧೧೬ |
| ೧೩೨. | ಗುರುಮುಖ್ಯ ಪ್ರಾಣ ಕರವೆತ್ತಿನಿಂದ | ೧೬೬ |
| ೧೩೩. | ಚಿಕ್ಕ ಮಗುವಾದ ಪ್ರಹ್ಲಾದ ದೇವನನು | ೧೧೭ |
| ೧೩೪. | ಚಿತ್ತೈಸಬೇಕೆನ್ನ ಮಾತು ಕೇಳಯ್ಯ | ೧೧೮ |
| ೧೩೫. | ಜಯ ಮಂಗಳಂ ನಿತ್ಯ ಶುಭ ಮಂಗಳಂ | ೧೧೯ |
| ೧೩೬. | ಜೋಜೋಜೋ ರಂಗ ಜೋ ಮುದ್ದುರಂಗ | ೧೨೦ |
| ೧೩೭. | ಜೋಜೋ ರಂಗಯ್ಯ ಜೋಜೋ ಕೃಷ್ಣಯ್ಯ | ೧೨೧ |
| ೧೩೮. | ತಂದೆ ನೀನೆಂದು ನಾ ಬಂದೆ ರಕ್ಷಿಸೆಂದು | ೧೯೦ |
| ೧೩೯. | ತಾರೊ ನಿನ್ನಯ ಕರವಾರಿಜವನು ಕೃಷ್ಣ | ೧೯೧ |
| ೧೪೦. | ತೆರಳಿಪೋದರಿಂದು ಪರಮಪದವನರಸುತ | ೧೮೨ |
| ೧೪೧. | ತೋರೆ ನಿನ್ನ ಪದ ಸರಸಿಜವನು ತಾಯೆ | ೧೭೫ |
| ೧೪೨. | ದಂತಿವದನ ವಿಘ್ನದಂತಿ ನಿಚಯಕೆ ಹರಿ | ೧೦೨ |
| ೧೪೩. | ದುಷ್ಟಮನುಜನೆ ಕೇಳೊ | ೧೯೨ |
| ೧೪೪. | ಧನ್ಯನಲ್ಲವೆ ಅವನು ಧನ್ಯನಲ್ಲವೆ | ೨೦೭ |
| ೧೪೫. | ಧರಾ ರಮಣ ಸ್ವಾಮಿ ಪುಷ್ಕರಣೀ ತೀರದೊಳಿರುತಿಹನೆ | ೧೨೨ |
| ೧೪೬. | ಧ್ಯಾನ ಮಾಡಿರೊ ರಂಗಯ್ಯನ | ೧೨೩ |
| ೧೪೭. | ನರಹರಿ ದೀನ ದಯಾಳೊ | ೧೨೪ |
| ೧೪೮. | ನಾನು ನಾನು ಎಂದು ನೀನೇಕೆ ಬಡುಕೊಂಬೆ | ೨೦೮ |

| ಕ್ರಮ. ಸಂಖ್ಯೆ | ಕೀರ್ತನೆಯ ಮೊದಲಸಾಲು | ಕೀರ್ತನೆ ಸಂಖ್ಯೆ |
|---|---|---|
| ೧೪೯. | ನಾರಾಯಣ ತನ್ನ ನಂಬಿದ ಭಕುತರ | ೧೨೫ |
| ೧೫೦. | ನಿನ್ನ ಭಯವೇನೆನಗೆ ನೀ ನೀರೊಳಿರುವೆ | ೧೨೬ |
| ೧೫೧. | ನೀನಲ್ಲದಿನ್ನಾರು ಸಲಹುವರೊ ಎನ್ನ | ೧೮೩ |
| ೧೫೨. | ನೀನು ನಾನು ಸಮನೆಂತಹವು | ೨೦೯ |
| ೧೫೩. | ನೀನೆ ನಾನೆಂಬುವ ಮಾನವಾಧಮನನ್ನು | ೨೦೦ |
| ೧೫೪. | ನೆಲಸೆನ್ನ ವದನದಿ ವಾಣಿ ಬ್ರಹ್ಮಾಣಿ | ೧೭೧ |
| ೧೫೫. | ನೋಡಯ್ಯ ಹರಿಯೆ | ೧೨೭ |
| ೧೫೬. | ಪಂಕಜನಾಭನಂಕಿತನಾದವಗೆ | ೧೨೮ |
| ೧೫೭. | ಪದುಮನಾಭನೆ ಪಾಲಿಸಯ್ಯ | ೧೨೯ |
| ೧೫೮. | ಪಾಪ ಪುಣ್ಯ ಫಲಲೇಶವಿಲ್ಲದವ | ೧೩೦ |
| ೧೫೯. | ಪಾಪ ಮಾಡಿದರೇನು ಮಾಡದಿದ್ದರೇನು | ೨೦೧ |
| ೧೬೦. | ಪೊರೆಯೋ ಶ್ರೀಶನೇ ಸರುವ ಲೋಕ ಪೂರೆವನೆ | ೧೯೩ |
| ೧೬೧. | ಫಲವೇನೋ ಫಲವೇನೊ ಫಲವೇನೊ ಮನುಜ | ೨೦೨ |
| ೧೬೨. | ಬಂದನು ರಘುವೀರ ರಣಧೀರ | ೧೩೨ |
| ೧೬೩. | ಬಂದು ಮಾಡುವರಲ್ಲೊ ರಂಗಯ್ಯ | ೧೩೧ |
| ೧೬೪. | ಬಡಿವಾರ ವಿದ್ಯಾಕೊ ದಡಿಗ ಮಾನವನೆ | ೨೦೧ |
| ೧೬೫. | ಬಾಬಾ ಬಾರಯ್ಯ ಶ್ರೀಗಿರಿ ದೊರೆಯೆ | ೧೩೩ |
| ೧೬೬. | ಬಾರಮ್ಮ ಲೋಕ ಮಾತೆ ಆನಂದ ಪ್ರದಾತೆ | ೧೫೮ |
| ೧೬೭. | ಬಾರೊ ನೀ ಭಕುತರ ಸುರಧೇನು | ೧೩೪ |
| ೧೬೮. | ಬೇಗನೆ ಬಾರೊ ದೇವ | ೧೩೫ |
| ೧೬೯. | ಬೇಡಿಕೊಂಬೆನೊ ದೇವ ಮಹಾನುಭಾವ | ೧[illegible]೪ |
| ೧೭೦. | ಬ್ರಹ್ಮಾದಿ ದೇವರ್ಗ | ೧೩೬ |
| ೧೭೧. | ಭಾರತೀಶನೆ ಕಾಯೊ | ೧೬೭ |
| ೧೭೨. | ಮಂಗಳಂ ಮಹಿಜಾತೆಗೆ | ೧೫೯ |
| ೧೭೩. | ಮಂಗಳಂ ಶುಭ ಮಂಗಳಂ | ೧೬೮ |
| ೧೭೪. | ಮಂಗಳಂ ಶ್ರೀರಂಗನಿಗೆ | ೧೩೭ |
| ೧೭೫. | ಮಂಗಳಾರತಿ ಬೆಳಗಿರೆ | ೨೦೮(ಅ) |
| ೧೭೬. | ಮಧುವೈರಿ ಬಂದನಕೊ ದಧಿ ಕಡೆವ ವೇಳೆಗೆ | ೧೩೮ |

| ಕ್ರಮ. ಸಂಖ್ಯೆ | ಕೀರ್ತನೆಯ ಮೊದಲಸಾಲು | ಕೀರ್ತನೆ ಸಂಖ್ಯೆ |
|---|---|---|
| ೧೭೭. | ಮಧ್ವರಾಯರ ಸಿದ್ಧಾಂತ ಪದ್ಧತಿಯನು | ೨೧೨ |
| ೧೭೮. | ಮರೆಯದಿರು ಮರೆಯದಿರು ಹರಿಯನು ಪಾಪಿ | ೨೦೩ |
| ೧೭೯. | ಮರೆವನೆ ನಾನಿನ್ನ ಕರಿಗಿರಿ ದೊರೆ | ೧೩೯ |
| ೧೮೦. | ಮಲಗು ಮಲಗಮ್ಮ ತಾಯೆ | ೧೬೦ |
| ೧೮೧. | ಮಲಗು ಮಲಗಯ್ಯ ಹನುಮ | ೧೭೦ |
| ೧೮೨. | ಮಾತು ಮಾತಿಗೆ ಮರೆಯಬೇಡ ಸೀತಾರಾಮನ | ೧೪೦ |
| ೧೮೩. | ಮಾರಪಿತನ ತೋರಿದಲ್ಲದೆ ನಾ ಬಿಡೆ ನಿನ್ನ ಪಾದವ | ೧೬೯ |
| ೧೮೪. | ಮಾಸ ನಿಯಾಮಕ ದೇವತೆಗಳ ವರ್ಣಿಸುವೆನು | ೧೪೧ |
| ೧೮೫. | ಮುನ್ನ ಮುರಾರಿಯ ನಿಂದಿಸಿ ಬನ್ನಪಟ್ಟ | ೨೧೩ |
| ೧೮೬. | ಮೋಸ ಪೋದೆಯಲ್ಲೆ ಭಾಸುರಾಂಗಿ | ೧೭೯ |
| ೧೮೭. | ಯಾಕೆನ್ನೊಳಿಂತು ನಿರ್ದಯವೆಲೊ ದೇವ | ೧೪೨ |
| ೧೮೮. | ರಂಗನ ಒಲುಮೆಯಿರಲು | ೨೧೪ |
| ೧೮೯. | ರಂಗಬಾರನ್ಯಾತಕೆ ಸಖಿಯೆ | ೧೪೩ |
| ೧೯೦. | ರಥವನೇರಿ ಬರುವ ರಂಗನಾಥನ ನೋಡಿ | ೧೪೪ |
| ೧೯೧. | ರಾಮನ ನೋಡಿದೆ ರಘುಕುಲ ತಿಲಕನ | ೧೪೫ |
| ೧೯೨. | ವೆಂಕಟೇಶ ತೋರೋ ಪಾದ ಪಂಕಜವನು | ೧೪೬ |
| ೧೯೩. | ವರಗುರು ತಂದೆ ಮುದ್ದು ಮೋಹನದಾಸ | ೧೮೧ |
| ೧೯೪. | ವಾಣಿ ನೀ ಬಾರೆ ಪನ್ನಗವೇಣಿ | ೧೭೨ |
| ೧೯೫. | ವಾರಿಜನ ಹೃದಯೇಶ್ವರಿ ಸರ್ವ ವಿದ್ಯಕಾಧಾರಿ | ೧೭೩ |
| ೧೯೬. | ವೇದ ಓದಿದರೇನು ನಮ್ಮ ಬಾದರಾಣನ ಪಾದವ ನಂಬದೆ | ೧೯೫ |
| ೧೯೭. | ಶರಣು ಗಜಾನನನೆ ಶರಣು ಲಂಬೋದರನೆ | ೧೦೩ |
| ೧೯೮. | ಶೇಷಾಚಲ ನಿಲಯನಾಗಿರುತ ಭಕುತರ | ೧೪೭ |
| ೧೯೯. | ಶೈಲರಾಜ ಸುತೆಯೆ ಗೌರಿ | ೧೮೦ |
| ೨೦೦. | ಶ್ಯಾಮ ಸುಂದರ ಮಾಮನೋಹರ | ೧೯೬ |
| ೨೦೧. | ಶ್ರೀಕರಾರ್ಚಿತ ಪರಮ ಪುರುಷ | ೧೪೮ |
| ೨೦೨. | ಶ್ರೀನಿವಾಸ ನೀನೆಮ್ಮ ಪೊರೆಯೊ ನಿರುತ | ೧೪೯ |
| ೨೦೩. | ಶ್ರೀರಂಗೇಶವಿಠಲ ಪೊರೆಯೆನ್ನ | ೧೫೦ |
| ೨೦೪. | ಶ್ರೀಸದನ ನಿನ್ನ ಸುಗುಣಗಳ ಪೊಗಳುವಡೆ | ೧೫೧ |

| ಕ್ರಮ. ಸಂಖ್ಯೆ | ಕೀರ್ತನೆಯ ಮೊದಲಸಾಲು | ಕೀರ್ತನೆ ಸಂಖ್ಯೆ |
|---|---|---|
| ೨೦೫. | ಸಂಸಾರ ಶರಧಿಯೊಳಗೆ ಮುಳುಗಿ ಆಡಬ್ಯಾಡವೊ | ೨೦೪ |
| ೨೦೬. | ಸಕಲ ಕರ್ಮಗಳ ಮಾಡಿ ಮಾಡಿಸುವೆ ನೀನು | ೨೧೫ |
| ೨೦೭. | ಸಕಲ ಭೂತಗಣಕಧಿನಾಥ ನೀನೆ | ೧೭೭ |
| ೨೦೮. | ಸಮಯಕ್ಕೊದಗುವ ನೆಂಟ | ೧೫೨ |
| ೨೦೯. | ಸರಸಿಜಾಲಯೆ ಪೊರೆಯೆ | ೧೬೧ |
| ೨೧೦. | ಸರಿಯಾರೊ ನಿನಗೆ ಪರಮ ಕರುಣಾನಿಧೆ | ೧೫೩ |
| ೨೧೧. | ಸರುವದ ಪಠಿಸಿರೊ ಚತುರ ವಿಂಶತಿ ನಾಮ | ೧೫೪ |
| ೨೧೨. | ಸಲಹಯ್ಯ ಲಕ್ಷ್ಮೀರಮಣ | ೧೯೭ |
| ೨೧೩. | ಸುಖವನು ಸರ್ವದ ಬಯಸಲದೇನೆಂದು | ೨೦೫ |
| ೨೧೪. | ಸಾಧನವು ಮತ್ತೇನಾಗಬೇಕೆಂದು ನಿನಗೆ | ೧೫೫ |
| ೨೧೫. | ಸ್ವಾಮಿಯು ನೀನಲ್ಲವೊ ಪಾಮರನೆ | ೨೧೬ |
| ೨೧೬. | ಹಠನ ಮಾಡದಿರು ಕೇಳೆಲೊ ಮೂಢ | ೨೧೭ |
| ೨೧೬(ಅ) | ಹರಿ/ನಿನ್ನ ದಾಸರ ಸೇವೆಯ ಕರುಣಿ ಸೆನಗೆ | ೧೯೮ |
| ೨೧೭. | ಹರಿಯೆ ಪೊರೆಯದಿಹುದು ಸರಿಯೆ | ೧೯೯ |


## ದಾಸರ ಲಕ್ಷ್ಮೀನಾರಾಯಣರ ಕೀರ್ತನೆಗಳು


| ಕ್ರಮ. ಸಂಖ್ಯೆ | ಕೀರ್ತನೆಯ ಮೊದಲಸಾಲು | ಕೀರ್ತನೆ ಸಂಖ್ಯೆ |
|---|---|---|
| ೨೧೮. | ಅಂದು ಶ್ರುತಿರಾಶಿಯನು ತಂದು ಕೊಟ್ಟವರಾರು | ೨೧೯ |
| ೨೧೯. | ಅಚ್ಚರಿಯೊಳಚ್ಚರಿಯು ಅಚ್ಯುತನ ನಾಮವಿದು | ೨೨೦ |
| ೨೨೦. | ಅಟ್ಟಮೇಲೆ ಉರಿವಂತೆ ಎನಗಿನ್ನು | ೨೭೨ |
| ೨೨೧. | ಆರತಿ ಬೆಳಗೀರೆ ಶಾರದೆಗೆ | ೨೫೭ |
| ೨೨೨. | ಆರತಿಯ ಎತ್ತಿರಮ್ಮ ವರಮಹಲಕ್ಷ್ಮಿಗೆ | ೨೪೯ |
| ೨೨೩. | ಆರತಿಯನೆತ್ತಿದರೆ ಅಚ್ಯುತನಿಗೆ ಅನಂತನಿಗೆ | ೨೨೧ |
| ೨೨೪. | ಆರತಿಯನೆತ್ತಿರೆ ನಾರೇರೆಲ್ಲರು | ೨೬೩ |
| ೨೨೫. | ಆರೈದು ಸಲಹೊ ಎನ್ನ | ೨೨೧(ಅ) |
| ೨೨೬. | ಇಂದು ಕಂಡೆನು ಹರಿಯ ಭವಹಾರಿಯ | ೨೨೨ |
| ೨೨೭. | ಇಂದ್ರಾಕ್ಷಿ ಸಲಹೆ ಬಂದು | ೨೬೪ |
| ೨೨೮. | ಈ ಮಾಧವ ದೇವಾಧಿದೇವ | ೨೨೩ |
| ೨೨೯. | ಎನ್ನಿಳೆಯೊಳು ನಿಂದು ಎನ್ನ ಬೆಳೆಯ ತಿಂದ | ೨೭೩ |

| ಕ್ರಮ. ಸಂಖ್ಯೆ | ಕೀರ್ತನೆಯ ಮೊದಲಸಾಲು | ಕೀರ್ತನೆ ಸಂಖ್ಯೆ |
|---|---|---|
| ೨೨೦. | ಏನೆಂದು ಪೇಳಲೊ ರಾಮ | ೨೨೨(ಅ) |
| ೨೨೧. | ಓ ದೇವ ನೀನೆಂತ ಕರುಣಾಳೊ | [illegible] |
| ೨೨೨. | ಕಮಲಾಕ್ಷಿ ತಾಯೆ ಕಾಮಿತದಾಯೆ | ೨೫೦ |
| ೨೨೩. | ಕರುಣಕೆ ಎಣೆಗಾಣೆ ಶ್ರೀಕಾಂತನ | ೨೨೪ |
| ೨೨೪. | ಕಾಪಾಡು ಎನ್ನನು ಕೃಪಣ ವತ್ಸಲ | ೨೫೯ |
| ೨೨೫. | ಕೋಪ ಮಾಡುವರೆ ಕೃಪಾಳು ನೀನು | ೨೨೫ |
| ೨೨೬. | ಗಂಗೆಯನು ಪಡೆದ ಉತ್ತುಂಗದುಂಗುಟ ನಿಂಗೆ | ೨೨೬ |
| ೨೨೭. | ಗುರು ಪುರಂದರರಾಯ ದುರಿತ ತಿಮಿರಕೆ ಸೂರ್ಯ | ೨೬೯ |
| ೨೨೮. | ಗುರುರಾಯರ ನಂಬಿದೆ | ೨೬೮(ಅ) |
| ೨೨೯. | ಗುರು ರಾಘವೇಂದ್ರರ ಚರಣವ ಸ್ಮರಿಸಿರೊ | ೨೬೮ |
| ೨೩೦. | ಗೋಪಾಲ ಕುಲಬಾಲ | ೨೨೬(ಅ) |
| ೨೩೧. | ಜಯ ಜಯ ರಮಾಕಾಂತ | ೨೨೭ |
| ೨೩೨. | ಜಯತೀರ್ಥಗುರುವರ್ಯ | ೨೭೧(ಅ) |
| ೨೩೩. | ಜಯತು ಜಯತು ಶ್ರೀರಾಮ | ೨೨೭(ಅ) |
| ೨೩೪. | ಜಯ ಮಂಗಳನಾಮ | ೨೨೭(ಅ) |
| ೨೩೫. | ದಾಸರ ದಾಸರ ದಾಸನೆಂದೆನಿಸುವ | ೨೨೮ |
| ೨೩೬. | ಧ್ಯಾನವ ಕೊಡು ಹರಿಯೆ ನಿರಂತರ | ೨೨೯ |
| ೨೩೭. | ನಾಮಕೆಣೆ ಕಾಣೆ ಮುಕುಂದನ | ೨೩೦ |
| ೨೩೮. | ನಾರಸಿಂಹನೆ ಎನ್ನ ದುರಿತಾಘಗಳನು | ೨೩೧ |
| ೨೩೯. | ನಿನಗೆ ನಿದ್ರೆಯು ಎಂತು ಬರುವುದೊ ಶ್ರೀಕಾಂತ | ೨೩೨ |
| ೨೪೦. | ನೀರಧಿಶಯನ ಮುಕುಂದ | ೨೩೩ |
| ೩೪೧. | ಪಂಡರಿನಾಥ ಪಾವನ ಸುಚರಿತ | ೨೩೪(ಅ) |
| ೨೪೨. | ಪರತರ ಕರುಣಾಕರ | ೨೩೪(ಅ) |
| ೨೪೩. | ಪರಮ ಕೃಪಾನಿಧೆ ಗೋಪಾಲದೇವ | ೨೩೫ |
| ೨೪೪. | ಪರಮಪಾವನ ಶ್ರೀರಾಮ | ೨೩೫(ಅ) |
| ೨೪೫. | ಪರಿಪಾಲಿಸ್ಯೆ ವರ ವೆಂಕಟೇಶ | ೨೩೬ |
| ೨೪೬. | ಪಾಲಯ ಶರಣಾಭರಣ | ೨೩೬ |
| ೨೪೭. | ಬಂದು ನಿಲ್ಲೊ ಕಣ್ಣಮುಂದೆ | ೨೩೭ |

| ಕ್ರಮ. ಸಂಖ್ಯೆ | ಕೀರ್ತನೆಯ ಮೊದಲಸಾಲು | ಕೀರ್ತನೆ ಸಂಖ್ಯೆ |
|---|---|---|
| ೨೪೮. | ಬಾ ಬಾ ಬಾಬಾ ಭಕ್ತಾಧಾರ | ೨೩೮ |
| ೨೪೯. | ಬಾರೊ ಬಾರೊ ಬಾರೊ ಶ್ರೀಹರಿ | ೨೩೯ |
| ೨೫೦. | ಬಾರೋವರಶೂರ ಕುಮಾರ | ೩೩೯(ಅ) |
| ೨೫೧. | ಬೇಡುತಿರ್ದೆನು ಕರುಣದಿ ನೋಡು | ೨೬೫ |
| ೨೫೨. | ಭಾರತಿ ರಮಣ ಪಾಲಿಸು ಕರುಣ | ೨೫೪ |
| ೨೫೩. | ಮಂಗಳಾರತಿಯನೆತ್ತಿರೆ ನಿತ್ಯ ಸುಮಂಗಳೆಗೆ | ೨೫೧ |
| ೨೫೪. | ಮಧ್ವಮತವ ಪೊಂದು ಭಜಿಸಿರೊ | ೨೭೪ |
| ೨೫೫. | ಮನ್ನಿಸೆನ್ನ ವೆಂಕಟ ರನ್ನ | ೨೪೧ |
| ೨೫೬. | ಮರೆವರೇನೋ ರಾಮ ನಿನ್ನ ಚರಣ ಸೇವಕರನರನ್ನು | ೨೪೦ |
| ೨೫೭. | ಮಾಡುವುದೋ ಕೃಪೆ ದಾಸನೊಳು | ೨೪೧(ಅ) |
| ೨೫೮. | ಮುರಹರ ನಗಧರ ಪಾಹಿಮಾಂ | ೨೪೨ |
| ೨೫೯. | ಮೂರುತಿಯ ತೋರೋ ಮಾರುತಿ | ೨೫೫ |
| ೨೬೦. | ಯಾಕೆ ಮೂಕನಾದೆ | ೨೭೫ (ಅ) |
| ೨೬೧. | ಯಾಕೆ ನಡುಗುವೆ ತಾಯೆ ಭೂ ಕಾಂತೆಯೆ | ೨೫೨ |
| ೨೬೨. | ಯಾಕೆ ಬಾರದೊ ದಯವು | ೨೪೨ (ಅ) |
| ೨೬೩. | ಯಾತಕೆ ಚಿಂತಿಪೆ ಬಿಡು ನೀ | ೨೭೫ |
| ೨೬೪. | ಯಾದವ ಕುಲದೀಪ | ೨೪೨ (ಅ) |
| ೨೬೫. | ರಕ್ಷಿಸು ಕಮಲಾಕ್ಷ ಶ್ರೀವಕ್ಷ | ೨೪೩ |
| ೨೬೬. | ರಕ್ಷಿಸು ಪರಮೇಶ್ವರ ದೇವ | ೨೬೦ |
| ೨೬೭. | ರಕ್ಷಿ ಸೆನ್ನ ಪಕ್ಷಿವಾಹನ ಅಕ್ಷಯಗುಣಪೂರ್ಣ | ೨೪೪ |
| ೨೬೮. | ರಾಧಾಕೃಷ್ಣ ದಯದಿ ನೋಡೆನ್ನ | ೨೪೫ |
| ೨೬೯. | ರಾಮಾ ಸದ್ಗುಣಧಾಮಾ | ೨೪[illegible](ಅ) |
| ೨೭೦. | ವಂದಿಸಿ ಬೇಡುವೆ ನವಗ್ರಹರ | ೨೬೭ |
| ೨೭೧. | ವಿಧಿ ನಿಷೇಧವು ನಿನ್ನ ಸ್ಮರಣೆ ವಿಸ್ಮರಣೆ | ೨೭೬ |
| ೨೭೨. | ವಾರಿಧಿ ಸಂಭೂತೆ ಚಾರು ಗುಣಾನ್ವಿತೆ | ೨೫೩ |
| ೨೭೨. | ವ್ಯಾಸರಾಜ ಪರಿವ್ರಾಜ ಮಹಾರಾಜ | ೨೭೦ |
| ೨೭೩. | ಶಂಕರ ಲೋಕ ಶಂಕರ | ೨೬೧(ಅ) |
| ೨೭೪. | ಶಂಭು ಅಂಬಾ ಮನೋಹರ | ೨೬೧ |

| ಕ್ರಮ. ಸಂಖ್ಯೆ | ಕೀರ್ತನೆಯ ಮೊದಲಸಾಲು | ಕೀರ್ತನೆ ಸಂಖ್ಯೆ |
|---|---|---|
| ೨೭೫. | ಶರಣು ಹರಿಗೆ ಶರಣು ಸಿರಿಗೆ | ೨೭೭ |
| ೨೭೬. | ಶಶಿಕಲಾಭೂಷಣನೆ ಶಂಕರನೆ | ೨೬೨ |
| ೨೭೭. | ಶ್ರೀನಾಥ ಯದುನಾಥ | ೨೪೬(ಅ) |
| ೨೭೮. | ಶ್ರೀಪಾದರಾಜರ ಶ್ರೀಪಾದಾರ್ಚನೆ ಮಾಳ್ಪ | ೨೭೧ |
| ೨೭೯. | ಶ್ರೀರಾಮ ಎನ್ನಿರೊ ಶ್ರೀರಾಮ ಎನ್ನಿರೊ | ೨೪೮ |
| ೨೮೦. | ಶ್ರೀಶಾ ಹೃಷಿಕೇಶ | ೨೪೭ |
| ೨೮೧. | ಶ್ರೀ ಸಿದ್ಧಿಗಣಪ ಕೊಡು ನಿನ್ನ ನೆನಪ | ೨೧೮ |
| ೨೮೨. | ಸಡಿಲ ಬಿಡದೆ ಕೈಯ ಪಿಡಿದು ಉದ್ಧರಿಸಯ್ಯ | ೨೪೬ |
| ೨೮೩. | ಸರಿ ಯಾರೊ ಜಗದೊಳಗೆ | ೨೪೬(ಅ) |
| ೨೮೪. | ಹನುಮಂತ ದೇವನ ನೋಡಿ | ೨೫೬ |
| ೨೮೫. | ಹರವಿಠಲ ಜಯವಿಠಲ | ೨೪೮(ಅ) |
| ೨೮೬. | ಹಿಮಾಚಲೇಂದ್ರನ ಕುಮಾರಿ ಶಂಕರಿ | ೨೬೬ |


## ಕರಿಗಿರೀಶ ಅಂಕಿತದ ಕೃತಿಗಳು


| | | |
|---|---|---|
| ೨೮೭. | ಅಗಲಿರಲಾರೆನು ಹರಿಯೆ ನಿನ್ನನು | ೨೭೮ |
| ೨೮೮. | ಅಪರಾಧ ಕ್ಷಮಿಸಿ ನೀ ಕೃಪೆಯಿಂದ ಸಲಹಯ್ಯ | ೨೭೯ |
| ೨೮೯. | ಅರಸ ಕೇಳ್ಯೆ ಸರಸಿಯೊಳಗೆ | ೩೫೨ |
| ೨೯೦. | ಆದಿ ಮೂಲ ಪಾಲಯಮಾಂ | ೨೮೦ |
| ೨೯೧. | ಆನೆಂತು ವರ್ಣಿಸಲಿ ಈ ದಿವ್ಯ ಮೂರುತಿಯ | ೨೮೧ |
| ೨೯೨. | ಆರೋಗಣೆಯ ನೀ ಮಾಡಯ್ಯ ಯದುಕುಲ ವಾರಿಧಿ ಚಂದ್ರಮನೆ | ೨೮೨ |
| ೨೯೩. | ಆವಿರ್ಭವಿಸಿದಳಾಗ ಜಗನ್ಮಾತೆ | ೩೨೬ |
| ೨೯೪. | ಈತನೇ ಪರಾತ್ಪರನು ಖ್ಯಾತ ನಿಗಮ ಸನ್ನುತ | ೨೮೩ |
| ೨೯೫. | ಉಪಕೃತಿ ಎನ್ನದಲ್ಲ ನರಹರಿ | ೨೮೪ |
| ೨೯೬. | ಎಂತು ಜೀವಿಪೆನಯ್ಯ ನಿನ್ನನಗಲಿ ನಾನು | ೨೮೫ |
| ೨೯೭. | ಎಂಥ ಸ್ಥಿತಿಯೆ ಶ್ರೀರಾಮಗೆ | ೨೮೬ |
| ೨೯೮. | ಎಲೆ ಮಹಾತ್ಮರೆ ನೀವು | ೩೫೩ |
| ೨೯೯. | ಏಕ ಬಾಣ ಬಿಟ್ಟನು | ೨೮೭ |

